ಪ್ರತಿಭಾವಂತ
ಸಂಸದೀಯ ಪಟು
ಪುಸ್ತಕ ಮಾಲಿಕೆ

# ಕೆ.ಕೆಂಚಪ್ಪ

ಚಂದ್ರಶೇಖರ ತಾಳ್ಯ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**K. KENCHAPPA**
Eminent Parlimentarian Series
Written by
**Chandrashekara Talya**
Lecturer in Logic,
KNPU College, Holalkere, Chitradurga Dist Ph: 94483 24986
**Published** by
Karnataka Legislature Library Committee
Vidhana Soudha, Bangalore-560001.
Page: 250 + X Price: 20-00 Rs.

First Edition: 2006 Copies: 2000
**Printed & Designed by**
Government Press, Bangalore.

**ಕೆ. ಕೆಂಚಪ್ಪ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಲೇಖಕರು:
**ಚಂದ್ರಶೇಖರ ತಾಳ್ಯ**
ತರ್ಕಶಾಸ್ತ್ರ ಉಪನ್ಯಾಸಕರು,
ಕೊಟ್ರೆ ನಂಜಪ್ಪ ಪದವಿಪೂರ್ವ ಕಾಲೇಜು, ಹೊಳಲ್ಕೆರೆ
ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 250 + X ಬೆಲೆ: 20/- ರೂ.

ಮೊದಲ ಮುದ್ರಣ: 2006 ಪ್ರತಿಗಳು: 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

**ಅಧ್ಯಕ್ಷರು**
ಸಚ್ಚಿದಾನಂದ ಲ.ಖೋತ
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರಿಂದ)

**ಅಧ್ಯಕ್ಷರು**
ವಿ.ಆರ್. ಸುದರ್ಶನ್
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು
(ದಿನಾಂಕ 17.06.2006 ರವರೆಗೆ)

**ಸದಸ್ಯರು**

ಕೃಷ್ಣ
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ
ವಿಧಾನಸಭಾ ಸದಸ್ಯರು
ಆರ್. ಧ್ರುವನಾರಾಯಣ್
ವಿಧಾನಸಭಾ ಸದಸ್ಯರು
ಕಳಕಪ್ಪ ಜಿ. ಬಂಡಿ
ವಿಧಾನಸಭಾ ಸದಸ್ಯರು
ಡಾ|| ವೀರಬಸವಂತರೆಡ್ಡಿ ಮುದ್ನಾಳ್
ವಿಧಾನಸಭಾ ಸದಸ್ಯರು
ಡಾ. ಚಂದ್ರಶೇಖರ ಬಿ. ಕಂಬಾರ
ವಿಧಾನ ಪರಿಷತ್ ಸದಸ್ಯರು
ಮುಖ್ಯಮಂತ್ರಿ ಚಂದ್ರು
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಉಮಾಶ್ರೀ
ವಿಧಾನ ಪರಿಷತ್ ಸದಸ್ಯರು
(ದಿನಾಂಕ 24.07.2006 ರವರೆಗೆ)
ಶ್ರೀನಾಥ್
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)
ವೈ.ಎ. ನಾರಾಯಣಸ್ವಾಮಿ
ವಿಧಾನ ಪರಿಷತ್ ಸದಸ್ಯರು
(ದಿನಾಂಕ: 24.7.2006 ರಿಂದ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ — ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

ಎಸ್.ಬಿ. ಪಾಟೀಲ್ — ಅಪರ ಕಾರ್ಯದರ್ಶಿ
ಕೆ.ಎಸ್. ಪ್ರಭಾಕರರಾವ್ — ಜಂಟಿ ಕಾರ್ಯದರ್ಶಿ
ಜಿ. ಓಂಪ್ರಕಾಶ್ — ಸಭಾಧ್ಯಕ್ಷರ ಕಾರ್ಯದರ್ಶಿ
ಎಸ್. ಬಸವರಾಜ — ಉಪ ಕಾರ್ಯದರ್ಶಿ
ಕೆ. ನೂರ್ ಮಹಮದ್ — ಅಧೀನ ಕಾರ್ಯದರ್ಶಿ

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಜಯಶಂಕರಮೂರ್ತಿ — ಕಾರ್ಯದರ್ಶಿ
ವಿ. ಶ್ರೀಶ್ — ಅಪರ ಕಾರ್ಯದರ್ಶಿ
ಕೃಷ್ಣೇಗೌಡ — ಸಭಾಪತಿಯವರ ಕಾರ್ಯದರ್ಶಿ

### ಸಂಪಾದಕರು

**ಎಲ್.ಎನ್. ಮುಕುಂದರಾಜ್**
ಕನ್ನಡ ಉಪನ್ಯಾಸಕರು
(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

20 ಜನವರಿ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಚಂದ್ರಶೇಖರ ತಾಳ್ಯ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಕೆ. ಕೆಂಚಪ್ಪ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ಸಚ್ಚಿದಾನಂದ ಲ. ಖೋತ

ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಒಂದು ನಿವೇದನೆ

ಈ ಕೃತಿಯನ್ನು ನಾನು ರಚಿಸುವಾಗ ನಮ್ಮ ಜಿಲ್ಲೆಯ ಹಿರಿಯ ಕಲಾವಿದ, ಸಜ್ಜನ ದಿ|ಪಿ.ಆರ್.ಟಿ. ಅವರ 'ಹೋರಾಟಗಾರ ಕೆಂಚಪ್ಪ' ಕಿರು ಹೊತ್ತಿಗೆ ತುಂಬಾ ನೆರವಾಗಿದೆ. ಅಲ್ಲಲ್ಲಿ ಅವರ ಪುಸ್ತಕದ ಪುಟಗಳನ್ನೇ ನಾನು ಬಳಸಿಕೊಂಡಿದ್ದೇನೆ. ಕೆಂಚಪ್ಪ ನಮ್ಮ ಕಾಲದಲ್ಲಿಯೇ ಬದುಕಿ ಬಾಳಿ ಹೋರಾಟ ನಡೆಸಿದ್ದರೂ ಅವರ ಬಗ್ಗೆ ಮಾಹಿತಿ ನೀಡುವವರ ಸಂಖ್ಯೆ ವಿರಳವೇ. ಅವರ ಮಕ್ಕಳಿಂದ ನನಗೆ ಏನೇನೂ ಸಿಕ್ಕಲಿಲ್ಲ. ಇದ್ದದ್ದರಲ್ಲಿ ನಮ್ಮ ಹಿರಿಯ ಮುತ್ಸದ್ದಿ, ಚಿಂತನಶೀಲ ರಾಜಕಾರಣಿ, ಮಾಜಿ ಮಂತ್ರಿ ಶ್ರೀ ಕೆ.ಎಚ್. ರಂಗನಾಥರು ಅಲ್ಪಸಮಯದಲ್ಲೇ ಕೆಂಚಪ್ಪನವರ ಬಗ್ಗೆ ಕೆಲವು ಮಾಹಿತಿ ನೀಡುತ್ತಾ ಒಳನೋಟಗಳನ್ನು ಕೊಟ್ಟರು. ಪಿ.ಆರ್.ಟಿ. ಮತ್ತು ಹಿರಿಯರಾದ ಕೆ.ಎಚ್.ಆರ್ ಅವರನ್ನು ನಾನು ನೆನೆಯಲೇಬೇಕು. ನನ್ನ ಕೃತಜ್ಞತೆಗಳು, ಅವರಿಗೆ ಸಲ್ಲುತ್ತದೆ.

ಈ ಗ್ರಂಥ ರಚಿಸುವ ಜವಾಬ್ದಾರಿ ಹೊರಿಸಿದ ಗ್ರಂಥಾಲಯ ಸಮಿತಿ ಅಧ್ಯಕ್ಷರಾದ ಗೌರವಾನ್ವಿತ ಸಭಾಪತಿಗಳಾದ ಶ್ರೀ ವಿ.ಆರ್. ಸುದರ್ಶನ್, ಉಪಸಮಿತಿ ಅಧ್ಯಕ್ಷರಾದ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳ್ ಹಾಗೂ ಎಲ್ಲ ಮಾನವೀಯ ಸದಸ್ಯರಿಗೆ ನನ್ನ ಕೃತಜ್ಞತೆಗಳು. ನನ್ನ ಕವಿ ಮಿತ್ರ, ಹೋರಾಟಗಾರ ಎಲ್.ಎನ್. ಮುಕುಂದರಾಜ್ ಅವರಿಗೂ ನನ್ನ ಕೃತಜ್ಞತೆಗಳು. ಅವರ ಒತ್ತಾಯ, ಒತ್ತಾಸೆಗಳಿಲ್ಲದಿದ್ದರೆ ಸೋಮಾರಿಯಾದ ನಾನು ಇದನ್ನು ಮಾಡಲಾಗುತ್ತಲೇ ಇರಲಿಲ್ಲ.

ಇದೆಲ್ಲಕ್ಕೂ ಹಿಂದೆ ನಿಂತು ಕೆಂಚಪ್ಪನವರ ಬಗ್ಗೆ ಗ್ರಂಥ ಮಾಡಲೇಬೇಕೆಂಬ ಸದಿಚ್ಛೆಯಿಂದ ನೆರವಾದ ವಿಧಾನ ಸಭೆಯ ಗ್ರಂಥಾಲಯ ವಿಭಾಗದ ಅಧಿಕಾರಿಗಳಾದ ಶ್ರೀ ಬಸವರಾಜ್ ಶ್ರೀ ಮಿರ್ಜಾಮೆಹ್ದಿ, ಶ್ರೀ ನರಸಿಂಹ ಮೂರ್ತಿಯವರಿಗೂ ಕೂಡ ನಾನು ನನ್ನ ತುಂಬಿದ ಕೃತಜ್ಞತೆಗಳನ್ನು ಹೇಳಲೇಬೇಕು.

ಈ ಪುಸ್ತಕದ ತಯಾರಿಯಲ್ಲಿ ವಿಧಾನ ಸಭೆಯ ಗ್ರಂಥಾಲಯದ ಎಲ್ಲ ಅಧಿಕಾರಿಗಳೂ, ಗ್ರಂಥಾಲಯದ ಗ್ರಂಥಪಾಲಕರೂ ಅಪಾರ ನೆರವನ್ನು ನೀಡಿದ್ದಾರೆ. ಸಂಶೋಧನೆಗೆ ನೆರವಾದ ಹ.ಕ. ಶ್ರೀನಿವಾಸ್, ಎಲ್.ಜಿ. ಗೀತಾ ಹಾಗೂ ಮುದ್ರಿಸಿದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ, ಡಿ.ಟಿ.ಪಿ. ಶಾಖೆಯ ಮುಖ್ಯವಾಗಿ ಈ ಪುಸ್ತಕವನ್ನು ಒಂದೇ ಕೈಯಲ್ಲಿ ಡಿ.ಟಿ.ಪಿ. ಮಾಡಿದ ಸಾಹಸಿ ಬಿ.ಎಂ. ರವಿಕುಮಾರ್ ಮುಂತಾದವರಿಗೂ ಕೃತಜ್ಞತೆಗಳು.

ಇದನ್ನು ಆಯ್ಕೆ ಮಾಡಿದ ವಿಧಾನ ಮಂಡಲದ ಗ್ರಂಥಾಲಯ ಸಮಿತಿಯ ಅಧ್ಯಕ್ಷರಿಗೂ, ಅದರ ಎಲ್ಲ ಸದಸ್ಯರಿಗೂ ನಾನು ಆಭಾರಿಯಾಗಿರುವೆ.

ವಿಜಯದಶಮಿ — ಚಂದ್ರಶೇಖರ ತಾಳ್ಯ

ಹೊಳಲ್ಕೆರೆ.

# ಪರಿವಿಡಿ

## ಭಾಗ - ೧ ಹೋರಾಟದ ಬದುಕು



## ಭಾಗ - ೨ ವಿಧಾನ ಸಭೆಯ ವಿಶಿಷ್ಟ ಮಾತುಗಳು

## ಭಾಗ - ೨

- ವಿನಯವಿಲ್ಲದ ಸತ್ಯ ದುರಹಂಕಾರದ ವಿಕಟ ಚಿತ್ರ

- ಅಕ್ಷರ ಕಲಿಕೆ ಶಿಕ್ಷಣದ ಪ್ರಾರಂಭವೂ ಅಲ್ಲ ಕೊನೆಯೂ ಅಲ್ಲ

- ಅಹಿಂಸೆ ನನ್ನ ಶ್ರದ್ಧೆಯ ಮೊದಲ ಸಾಧನ, ಅದೇ ನನ್ನ ನಂಬಿಕೆಯ ಕೊನೆಯ ಆಯುಧ ಕೂಡ

- ಅಹಿಂಸೆ ಎಂದರೆ ಅಪರಿಮಿತ ಪ್ರೀತಿ, ಅದರ ಮತ್ತೊಂದು ಅರ್ಥವೆಂದರೆ ಯಾತನೆಯನ್ನು ಭರಿಸಲು ಬೇಕಾದ ಅಪರಿಮಿತ ಧಾರಣ ಶಕ್ತಿ.

– ಎಂ.ಕೆ. ಗಾಂಧಿ

# ಮೊದಲಿಗೆ

ಸ್ವಾತಂತ್ರ್ಯ ಪೂರ್ವ ಕಾಲವೆಂದರೆ ನಮ್ಮ ನಾಡಿನ ರುದ್ರವಸಂತ ಕಾಲ. ಅಲ್ಲಿ ಭಯಾನಕ ವಾತಾವರಣವಿದ್ದರೂ ಅರುಣೋದಯದ ಎಳೆಕಿರಣಗಳಲ್ಲಿ ನಳನಳಿಸುವ ಸಸಿಗಳೂ, ಕೋಗಿಲೆಯ ಕುಕಿಲುಗಳೂ ಅಲ್ಲಿ ಕಾಣುತ್ತಾ ಕೇಳುತ್ತಾ ಇದ್ದವು. ವಸಂತಋತು ನಮಗೆ ಮನೋಹರವಾಗಿದ್ದರೂ ಅದು ಒಳಗೇ ಹಿಂಸಾತ್ಮಕವಾಗಿಯೂ ಇರುತ್ತದೆ. ಪ್ರಕೃತಿಯ ಆಂತರ್ಯದ ಮಹಾನ್ ಕ್ರಿಯಾಶಾಲೀ ಪರ್ವಘಟ್ಟ ಅದು. ಈ ನಿಸರ್ಗದ ಒಡಲಿನಿಂದಲೇ ಬಂದ ಮನುಷ್ಯರಿಗೂ ಅದನ್ನು ಒಂದು ರೂಪಕವಾಗಿ ಅನ್ವಯ ಮಾಡಬಹುದು. ಮನುಷ್ಯನ ಬದುಕೂ ಇಂಥ ವಿರಳಿತಗಳ ನಡುವೆಯೇ ಸಾಗುವಂಥದು. ಇಂಡಿಯಾದ ಅಂದಿನ ಪರಿಸ್ಥಿತಿ ಈ ವಸಂತ ಮಾಧುರ್ಯದ ಆದರೆ ಅತಿಯಾದ ವೇದನೆಯದಾಗಿತ್ತು. ಆ ಸಂದರ್ಭದಲ್ಲಿ ಇಂಗ್ಲೀಷ್ ಶಿಕ್ಷಣದಿಂದಾಗಿ ಅನೇಕ ಪಲ್ಲಟಗಳು ಉಂಟಾದವು. ನಾಗರಿಕತೆ ಚಲಿಸತೊಡಗಿತು. ನಮ್ಮ ಸಂಸ್ಕೃತಿಯ ಅನೇಕ ಪರಿಕಲ್ಪನೆಗಳು ಮರು ವಿಮರ್ಶೆಗೆ ಒಳಗಾದವು. ರಾಜರಾಮ್ ಮೋಹನ್‌ರಾಯ್ ತನ್ನ ಶಿಕ್ಷಣ ಬಲದಿಂದಲೇ ನಮ್ಮ ಸಂಪ್ರದಾಯವನ್ನು ನಡುಗಿಸಬಲ್ಲವನಾಗಿದ್ದ. ಧರ್ಮ ತನ್ನ ಆಕಾರವನ್ನು ಬದಲಿಸಿಕೊಳ್ಳುವುದಕ್ಕೆ ಸಜ್ಜಾಗಿತ್ತು. ದಯಾನಂದ ಸರಸ್ವತಿ, ಅನಿ ಬೆಸೆಂಟ್, ರಾಮಕೃಷ್ಣ ಪರಮಹಂಸ, ವಿವೇಕಾನಂದರಿಂದಾಗಿ ಅದು ಹೊಸ ಸ್ವರೂಪವನ್ನೂ ಪಡೆಯಲು ತೊಡಗಿತು. ಇದರಿಂದಾಗಿ ಸಾಮಾಜಿಕವಾಗಿಯೂ ಆತ್ಮನಿರೀಕ್ಷಣೆಗಳು ಹುಟ್ಟಿದವು. ಸ್ವಾತಂತ್ರ್ಯಕ್ಕಾಗಿ ಸಂಘರ್ಷ ನಡೆದಂತೆಯೇ ಸಾಮಾಜಿಕವಾಗಿಯೂ ಸಂಘರ್ಷಕ್ಕೆ ರಂಗ ಸಿದ್ಧಗೊಂಡಿತ್ತು. ಟಿಳಕರಿಂದಾಗಿ ತೀವ್ರಗೊಂಡ ಆಧುನಿಕ ರಾಜಕೀಯ ಹೋರಾಟ ಗಾಂಧೀಜಿ, ಅಂಬೇಡ್ಕರರಿಂದ ಬಹು ನವೀನ ಮಾದರಿಯಾಗಿಯೂ ರೂಪುಗೊಂಡಿತು. ಧಾರ್ಮಿಕ ಶ್ರದ್ಧೆಯ ರಾಜಕೀಯ ಕೇಂದ್ರವೊಂದನ್ನು ಗಾಂಧೀಜಿ ಹುಟ್ಟಿಹಾಕಿದರು. ಅಂಬೇಡ್ಕರ್ ಅದಕ್ಕೂ ಭಿನ್ನ ನೆಲೆಗಳಲ್ಲಿ, ತಳ ಸಂಸ್ಕೃತಿಯ ಕಾಳಜಿಗಳೊಂದಿಗೆ ಹೋರಾಟದ ತೀವ್ರತೆಗೆ ಹೊಸಬಣ್ಣವನ್ನು ಕೊಟ್ಟರು. ಹೀಗೆ ಇಂಡಿಯಾದ ಆ ಕಾಲ ಘಟ್ಟ ಅತ್ಯಂತ ಕ್ರಿಯಾಶಾಲಿ ಘಟ್ಟವಾಗಿ ಮಾರ್ಪಟ್ಟಿತು.

ರಾಷ್ಟ್ರವ್ಯಾಪ್ತಿಯಲ್ಲಿ ಈ ಬದಲಾವಣೆಗೆ ಆ ಕಾಲಘಟ್ಟ ಗುರಿಯಾಗುತ್ತಿದ್ದಂತೆಯೇ ದೇಶೀ ನೆಲೆಯಲ್ಲೂ ಅಂಥದೇ ಬದಲಾವಣೆಗಳು ಆಗತೊಡಗಿದವು. ಗಾಂಧೀ ಮತ್ತು ಅಂಬೇಡ್ಕರರ ಚಳವಳಿಯ ಗ್ರಹಿಕೆಯಿಂದಾಗಿ ಅವು ದೇಶೀ ನೆಲೆಗೂ ಚಾಚಿಕೊಂಡವು. ಕರ್ನಾಟಕದಲ್ಲಿ ಹರ್ಡೇಕರ್ ಮಂಜಪ್ಪ, ಎಸ್. ನಿಜಲಿಂಗಪ್ಪ, ಕೊಟ್ರೆನಂಜಪ್ಪ, ಕಾರ್ನಾಡ್ ಸದಾಶಿವರಾಮ, ಶಿವರಾಮಕಾರಂತ ಮುಂತಾದವರು ಗಾಂಧೀಪ್ರೇರಣೆಯಿಂದಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ತಮ್ಮ ತೀರಾ ಹರೆಯದ ವಯಸ್ಸಿನಲ್ಲೇ ಇಂಥ ಮಹನೀಯರು ನಾಡಿನ ಬಿಡುಗಡೆಗಾಗಿ ಸರ್ವವನ್ನೂ ತ್ಯಾಗ ಮಾಡಿ ಹೋರಾಟವನ್ನು ರೂಪಿಸಿದರು. ಇಂಥವರಲ್ಲಿ ಹೋರಾಟದ ಕೆಚ್ಚನ್ನೂ ವಿವೇಕದ

ಅಂತರ್ಯವನ್ನೂ, ಜ್ಞಾನದ ತೀಕ್ಷ್ಣ ಆಯುಧವನ್ನೂ ಹೊಂದಿದ್ದ ಶ್ರೀ ಕೆ. ಕೆಂಚಪ್ಪ, ಅವರೂ ಅದ್ವಿತೀಯರು. ಒಂದು ಕಾಲಘಟ್ಟದಲ್ಲಿ ಜ್ಞಾನದಿಂದ ಏನೇನೆಲ್ಲವನ್ನೂ ಆರ್ಜಿಸಬಹುದೋ ಅದೆಲ್ಲವನ್ನೂ ಕೆಂಚಪ್ಪನವರು ಗಳಿಸಿದ್ದರು. ಹಾಗೆ ಗಳಿಸಿದ್ದನ್ನು ಅವರು ವ್ಯರ್ಥ ಮಾಡದೇ ಈ ಸಮಾಜಕ್ಕೆ ಹಿಂತಿರುಗಿಸಿದರು. ಪರಿಶುದ್ಧತೆ, ಪ್ರಾಮಾಣಿಕತೆ, ವಿನಯವಂತಿಕೆಯ ಗುಣಗಳು ಯಾವ ವ್ಯಕ್ತಿಯಲ್ಲಿದ್ದರೂ ಆ ವ್ಯಕ್ತಿ ಶ್ರೇಷ್ಠನೇ. ಕೆಂಚಪ್ಪ ಶ್ರೇಷ್ಠರ ಸಾಲಿಗೆ ಸೇರುವುದು ಇಂಥ ಗುಣಗಳಿಂದಲೇ. ಅವರ ಬದುಕೇ ಅಂಥದು. ತಮ್ಮ ನರನಾಡಿಗಳಲ್ಲಿ ಹೋರಾಟವನ್ನು ಮೈಗೂಡಿಸಿಕೊಂಡಿದ್ದ ಅವರು ತಮ್ಮ ಕೊನೆಯ ಉಸಿರಿರುವವರೆಗೂ ಸಮಾಜದ ಏಳಿಗೆಗಾಗಿ ದುಡಿದವರು. ಸ್ವಾರ್ಥಕ್ಕಾಗಿ ಏನನ್ನೂ ಮಾಡಿಕೊಳ್ಳದ ಅಪರೂಪದ ವ್ಯಕ್ತಿ ಅವರು. ಇಂಥ ನಿಸ್ವಾರ್ಥದಿಂದಾಗಿಯೇ ಕಾಲಾನಂತರ ಅವರನ್ನು ಈ ಸಮಾಜ ಎಂದಿನಂತೆಯೇ ಉಪೇಕ್ಷೆ ಮಾಡಿದೆ. ಎಲ್ಲ ಸತ್ಯವಂತರ ಪಾಡು ಇದೇ ಅಲ್ಲವೇ?

ಕೆಂಚಪ್ಪನವರ ಕಾಲಕ್ಕೆ ಆಗುತ್ತಿದ್ದ ಬದಲಾವಣೆಗೆ ಸಮಾಜದ ಪ್ರತಿಸ್ಪಂದನವೂ ಸಹಜವಾಗಿಯೇ ಆವೇಶ ಭರಿತವಾಗಿತ್ತು. ಸಾಮಾಜಿಕವಾದ ಎಲ್ಲ ರಂಗಗಳಲ್ಲೂ ಈ ಬದಲಾವಣೆ ಸಂಭವಿಸುತ್ತಿದ್ದವು. ಇಂಥ ಘಟ್ಟದಲ್ಲಿ ಸಮಾಜಕ್ಕೆ ಒಂದು ರೀತಿಯ ಆವೇಶ ಆವಾಹಿತವಾಗುತ್ತದೆ. ಹೊಸ ನೀರಿನ ಪ್ರವೇಶದಿಂದಾಗಿ ಇಡೀ ನದಿಯೇ ತನ್ನ ಮೂಲ ನೀರಿನ ಗುಣವನ್ನು ಬದಲಾಯಿಸಿಕೊಂಡಂತೆ ಸಮಾಜಕ್ಕೂ ಅನ್ಯಸಂಸ್ಕೃತಿಯ ಪ್ರವೇಶದಿಂದಾಗಿ ಅದಕ್ಕೊಂದು ಹೊಸ ಸ್ವರೂಪಕ್ಕೊಲಭ್ಯವಾಗುತ್ತದೆ. ಸಾಹಿತ್ಯ, ಸಂಗೀತ, ಮುಂತಾದ ಕಲೆಗಳೂ ಇದಕ್ಕೆ ಹೊರತಲ್ಲ. ಹಾಗೆಯೇ ಸಾಮಾಜಿಕ ಸಂರಚನೆಯೂ ಹೊಸ ಆಲೋಚನೆಗಳನ್ನು ತನ್ನೊಳಗೆ ಬಿಟ್ಟುಕೊಂಡು ತಾನೂ ಹೊಸ ಸ್ವರೂಪದಲ್ಲಿ ವಿಜೃಂಭಿಸತೊಡಗುತ್ತದೆ. ಸಾಹಿತ್ಯದಲ್ಲಿ ನವೋದಯವಾದಂತೆಯೇ ಇತರೆ ಜ್ಞಾನಕ್ಷೇತ್ರಗಳಲ್ಲಿಯೂ ನವೋದಯವಾಯಿತು. ಸಾಮಾಜಿಕವಾಗಿದ್ದ ಪರಂಪರಾಗತ ಕಾನೂನು ಕಾಯ್ದೆಗಳು ಕೂಡ ತಮ್ಮ ಹಿಂದಿನ ಪಾವಿತ್ರ್ಯವನ್ನು ಕಳೆದುಕೊಂಡವು. ಸಾಮಾಜಿಕ ಧಾರ್ಮಿಕವೆನ್ನಿಸಿಕೊಂಡ ಆಚರಣೆಗಳಲ್ಲಿ ಹೊಸ ಸಂಚಲನಗಳು ಪ್ರಾರಂಭಗೊಂಡವು. ಜಾತಿ, ವಿಧವಾಪದ್ಧತಿ, ಸತೀಪದ್ಧತಿಗಳ ಸರ್ವನಾಶಕ್ಕೆ ಅಂದಿನ ಯುವ ಶ್ರದ್ಧಾವಂತರು ಮುಂದಾದರು. ಇಂಗ್ಲೀಷ್ ಆಡಳಿತ ನಮ್ಮ ಮೇಲೆ ಎಷ್ಟೇ ದುಷ್ಪರಿಣಾಮಗಳನ್ನು ಬೀರಿದ್ದರೂ ಇಂಗ್ಲೀಷ್ ಶಿಕ್ಷಣ ಮಾತ್ರ ಇಂಥ ವಿಚಲನೆಯನ್ನು ಉಂಟು ಮಾಡಿತು. ಜಾತಿಯೆಂಬ ಅನಿಷ್ಟವೇ ನಮ್ಮ ಸಂಸ್ಕೃತಿಯನ್ನು ಮೂಲೆಗುಂಪು ಮಾಡಿತು ಎಂಬ ಪ್ರಜ್ಞೆ ಉಂಟಾದದ್ದೇ ಇಂಥ ಶಿಕ್ಷಣದಿಂದ. ಮನುಷ್ಯರನ್ನು ಮನುಷ್ಯರಂತೆ ನೋಡದ ಧರ್ಮವೊಂದರ ಅಡ್ಡಿಯೊಳಗೆ ಇಡೀ ಇಂಡಿಯಾ ನಲುಗಿ ಹೋದದ್ದರ ಬಹು ದೊಡ್ಡ ತಿಳುವಳಿಕೆ ಅದು. ಆದರೆ ಅದಕ್ಕೆ ಇಂಗ್ಲೀಷ್ ಶಿಕ್ಷಣವೇ ಬೇಕಿರಲಿಲ್ಲ ಎಂಬುದೂ ನಿಜವೇ ಆದರೂ ನಮ್ಮೊಳಗೆ ಇದ್ದ ವಿರುದ್ಧ ಧಾರೆಗಳನ್ನು ಅರ್ಥೈಸಿಕೊಳ್ಳುವ ವ್ಯವಧಾನವಾಗಲಿ ಅವಕಾಶವಾಗಲೀ ದೇಶೀಯರಿಗೆ ಇರಲೇ ಇಲ್ಲ. ಬುದ್ಧ, ಬಸವ, ಕಬೀರರು ನಮಗೆ ಎಂದೂ ಜ್ಞಾನ ಮಾರ್ಗದ ಅಧ್ವರ್ಯುಗಳಾಗಿ, ಅವತ್ತಿನ ಶಿಕ್ಷಣ ಪದ್ಧತಿಯಿಂದಾಗಿ, ಗೋಚರವಾಗಲೇ

ಇಲ್ಲ. ಅಷ್ಟೇ ಯಾಕೆ ವೇದಗಳು ಕೂಡ ನಮ್ಮ ಮುಕ್ತಿ ಮಾರ್ಗಗಳೆಂಬ ಸತ್ಯಕೂಡ ನಮಗೆ ತಿಳಿದದ್ದು ಇಂಗ್ಲೀಷ್ ಶಿಕ್ಷಣದಿಂದಾಗಿಯೇ. ವಿಧವಾ, ಸತೀ ಮುಂತಾದ ಪದ್ಧತಿಗಳು ಸಹಜವ್ರೋ ಎಂಬಂತೆ ನಮ್ಮ ನಂಬಿಕೆಯ ನೆಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಇಂಗ್ಲೀಷ್ ವಿಮೋಚನೆಯ ಹಾದಿಯಾಗಿ ನಮ್ಮೆದುರು ನಿರ್ಮಾಣಗೊಂಡಿತು. ಇಂಥ ಇಂಗ್ಲೀಷ್ ಶಿಕ್ಷಣವನ್ನು ಕೆಂಚಪ್ಪನವರು ಅತ್ಯಂತ ಶ್ರದ್ಧೆಯಿಂದಲೂ, ಅತ್ಯಂತ ಶ್ರಮದಿಂದಲೂ ಪಡೆದರು. ಹಾಗಾಗಿಯೇ ಅವರಲ್ಲಿ --- ಅದಮ್ಯ ಧೈರ್ಯವನ್ನೂ ವಿಚಕ್ಷಣತೆಯನ್ನೂ ನಾವು ಕಾಣಬಲ್ಲೆವು. ಗಾಂಧೀಜಿ ರಾಷ್ಟ್ರ ಮಟ್ಟದಲ್ಲಿ ಕಾರ್ಯೋನ್ಮುಖರಾಗಿದ್ದಾಗ, ದೇಶೀ ನೆಲೆಯಲ್ಲಿ ಕೆಂಚಪ್ಪನವರಂಥವರು ಕಾರ್ಯೋನ್ಮುಖರಾಗುತ್ತಾರೆ. ಸ್ವಾತಂತ್ರ್ಯ ಸಮುದ್ರವನ್ನೂ ಮೆರೆಯುವಂತೆ ಮಾಡುವ ದೊಡ್ಡ ನದಿಗಳಾಗಿ ಕೆಂಚಪ್ಪನವರಂಥವರು ಕಾಣಬರುತ್ತಾರೆ. ಕೆಂಚಪ್ಪ, ಕೊಟ್ರೆ ನಂಜಪ್ಪ ಇವತ್ತು ಮರೆತು ಹೋಗಿರುವ ಹೆಸರುಗಳು. ಹಾಗೆ ನೋಡಿದರೆ ಗಾಂಧೀಜಿಯೇ ಕಣ್ಮರೆಯಾಗಿ ಹೋಗುತ್ತಿರುವ ಇವತ್ತಿನ ಸಂದರ್ಭದಲ್ಲಿ ಕೆಂಚಪ್ಪ, ನಂಜಪ್ಪರು ಕಣ್ಮರೆಯಾಗುತ್ತಿರುವುದು ಸೋಜಿಗವೂ ಅಲ್ಲ, ಅಸಾಧ್ಯ ಅಲ್ಲ. ತಮ್ಮದೆಲ್ಲವನ್ನೂ ಕಳೆದುಕೊಂಡ ಆದರೆ ಕಳೆದಕೊಂಡದ್ದೆಲ್ಲವೂ ಸಮಾಜಕ್ಕಾಗಿ ಎಂಬ ತಿಳುವಳಿಕೆಯಿಂದ ಭ್ರಮಿತರಾದ ಮಹತ್ವದ ಜನ ಅವರು. ಕೆಂಚಪ್ಪನವರೊಂದಿಗೇ ಹೋರಾಟಗಳನ್ನು ರೂಪಿಸಿದ ಕೊಟ್ರೆನಂಜಪ್ಪ ತಮ್ಮ ಚಿಕ್ಕವಯಸ್ಸಿನಲ್ಲೇ ಅಸ್ತಂಗತರಾಗಿ ನಮ್ಮ ಮರೆವಿಗೆ ಸಂದಿದ್ದರೆ ಕೆಂಚಪ್ಪನವರು ತಮ್ಮ ಧೀರ್ಘ ಕಾಲದ ಬದುಕಿನ ನಂತರವೂ ನಮ್ಮ ಮರೆವಿಗೆ ಸಂದಿರುವುದು ಈ ನಾಡಿನ ದುರ್ದೈವವಲ್ಲದೆ ಬೇರೇವೂ ಅಲ್ಲ. ರಾಜಕೀಯ, ಎನ್ನುವುದು ಬಹು ನಿಷ್ಠುರ, ಕಾರುಣ್ಯ ರಹಿತ ಎನ್ನುವುದಕ್ಕೆ ಕೆಂಚಪ್ಪ ಬಹುದೊಡ್ಡ ಉದಾಹರಣೆಯಾಗಬಲ್ಲರು. ಚರಿತ್ರೆಯ ಕ್ರೂರ ನಡಿಗೆಯೇ ಅಂಥಾದ್ದು. ಅದು ರಿಯಾಯಿತಿ ರಹಿತವಾದದ್ದು. ಭಾರತ ಭಾಗ್ಯವಿಧಾತನ ಹಣೆ ಬರಹವೂ ಅಂಥಾದ್ದೇ. ಭಾಗ್ಯಕ್ಕಾಗಿ ಬಾಗಿಲು ತೆರೆಯುತ್ತಿದ್ದಂತೆಯೇ ಮುಚ್ಚಿಕೊಳ್ಳವುದೂ ಕೂಡ ಅದರ ದುರಂತ ವ್ಯಂಗ್ಯ.

* * * * *

# ಕೆಂಚಪ್ಪನವರ ಬದುಕು

ಕೆಂಚಪ್ಪನವರು ಹುಟ್ಟಿದ್ದು ಬೆಳೆದಿದ್ದು ಈಗಿನ ದಾವಣಗೆರೆ ಜಿಲ್ಲೆಯ ಹರಿಹರದಲ್ಲಿ. ತುಂಗಭದ್ರೆಯ ಮಡಿಲಲ್ಲಿ. ಹರಿಹರವೆಂಬ ಹೆಸರೇ ಸಮನ್ವಯ ದೃಷ್ಟಿಯದು. ಮಣ್ಣಿನಗುಣ ಪಡೆದವರಂತೆಯೇ ರೂಪುಗೊಂಡ ಕೆಂಚಪ್ಪನವರು ಹುಟ್ಟಿದ ದಿನಾಂಕ ನಿಖರವಾದದ್ದಲ್ಲ. ಅವರ ಅಣ್ಣನವರಾದ ಗೋವಿಂದಪ್ಪನವರು ಮೇಷ್ಟು ಬಳಿ ಕರೆದುಕೊಂಡು ಹೋದಾಗ ಅವರೇ ನಮೂದಿಸಿಕೊಂಡ ಹುಟ್ಟಿದ ದಿನಾಂಕ 1904ರ ಏಪ್ರಿಲ್ 1. ಮೂವರು ಹೆಣ್ಣು ಮಕ್ಕಳು, ಹತ್ತು ಜನ ಗಂಡು ಮಕ್ಕಳಲ್ಲಿ ಕೆಂಚಪ್ಪನವರು ಕೊನೆಯವರು. ಅವರ ತಂದೆ ತಿಮ್ಮಪ್ಪ, ತಾಯಿ ಶ್ರೀಮತಿ ಗಿರಿಯಮ್ಮ, ಈ ಇಬ್ಬರಿಗೂ ತಮ್ಮ ಕೊನೆಯ ಮಗನ ಏಳಿಗೆಯನ್ನು ನೋಡುವ ಭಾಗ್ಯವನ್ನು ದೇವರು ಕರುಣಿಸಲಿಲ್ಲ. ಕೆಂಚಪ್ಪ ನಾಲ್ಕು ವರ್ಷದ ಹುಡುಗನಾಗಿದ್ದಾಗಲೇ ಇಬ್ಬರೂ ತೀರಿಕೊಂಡದ್ದರಿಂದ ಕೆಂಚಪ್ಪ ತಬ್ಬಲಿಯಾಗಿ ಬೆಳೆಯಬೇಕಾಯಿತು. ಕಡು ಬಡತನದ ಬೇಗೆ ಅವರ ಗುಡಿಸಿಲ ತುಂಬ ರುದ್ರನರ್ತನ ಮಾಡುತ್ತಿತ್ತು. ಇವರನ್ನು ಅಕ್ಕರೆಯಿಂದ ಸಾಕುತ್ತಿದ್ದ ಅಣ್ಣ ಗೋವಿಂದಪ್ಪ, ಅತ್ತಿಗೆ ಕರಿಯವ್ವ ಇಬ್ಬರೂ ಅಕಾಲ ಮೃತ್ಯುವಿಗೀಡಾದ ಮೇಲೆ ಹಿರಿಯಣ್ಣ ತಿಮ್ಮಪ್ಪನವರೇ ಕೆಂಚಪ್ಪನವರ ಭಾರ ಹೊತ್ತುಕೊಂಡರು. ಕಡು ಬಡತನ. ಮನೆ ಮಾರು ಒಂದು ಇಲ್ಲದ ಕ್ರೂರ ಬಡತನ. ಹರಿಹರದ ಶ್ರೀನಿವಾಸ ಕುಲಕರ್ಣಿ ಎಂಬುವವರ ಎರಡು ಗುಂಟೆ ಜಮೀನೇ ಇವರಿಗೆ ಜೀವನಾಧಾರ. ತುಂಗಭದ್ರೆಯ ತಟದಲ್ಲಿದ್ದ ಈ ಅಂಗೈ ಅಗಲದ ಜಮೀನಿನಲ್ಲಿ ತರಕಾರಿ, ಸೊಪ್ಪುಗಳನ್ನು ಬೆಳೆಯುತ್ತಾ ಮಾರುತ್ತಾ ಜೀವನ ಸಾಗುತ್ತಿತ್ತು. ಕೆಂಚಪ್ಪ ಗಟ್ಟಿಮುಟ್ಟಾದ ಆಳು. ಎರಡು ಗೇಣಿನ ನೆಲದಲ್ಲಿ ಉಳುಮೆ ಇವರದ್ದೇ. ರೈತಾಪಿ ಕಷ್ಟದಿಂದಾಗಿ ಅವರ ದೇಹ ಕಂಚಿನಷ್ಟು ದೃಢವಾಗಿತ್ತು. ದೈಹಿಕವಾಗಿ ಆಕರ್ಷಣೀಯವಾಗಿದ್ದ ಕೆಂಚಪ್ಪನವರಿಗೆ ಓದಬೇಕೆಂಬ, ಜ್ಞಾನಿಯಾಗಬೇಕೆಂಬ ತುಡಿತ ಇತ್ತು. ಜೀವನವೇ ಕಷ್ಟದಾಯಕವಾಗಿದ್ದ ಸಮಯದಲ್ಲಿ ಓದಬೇಕೆಂಬ ಆಸೆಗೆ ನೀರೆರೆದು ಪೋಷಿಸುವುದು ಸುಲಭದ ಕೆಲಸದಲ್ಲಿ. ಆದರೂ ಕೆಂಚಪ್ಪನವರ ಅದಮ್ಯ ಹಠದ ಮುಂದೆ ಅದು ಕೈಸೋತು ಕುಂತಿತು.

ವಿರಕ್ತ ಮಠದ ಚಂದ್ರಯ್ಯ ಮೇಷ್ಟು ಇವರಿಗೆ ಮೊದಲ ಗುರು. ಅವರು ಹರಿಹರದಲ್ಲಿ ನಡೆಸುತ್ತಿದ್ದ ಕೂಲಿ ಮಠದಲ್ಲೇ ಇವರು ಕಲಿತದ್ದು. ಚುರುಕಾಗಿದ್ದ ಕೆಂಚಪ್ಪನೆಂಬ ಬಾಲಕನನ್ನು ಕಂಡರೆ ಚಂದ್ರಯ್ಯ ಮೇಷ್ಟ್ರಿಗೆ ಇಷ್ಟ. ಬುದ್ಧಿವಂತ ಹುಡುಗನೆನಿಸಿಕೊಂಡಿದ್ದ ಕೆಂಚಪ್ಪನವರ ಭವಿಷ್ಯದ ವಿದ್ಯಾಭ್ಯಾಸಕ್ಕೆ ನಾಂದಿ ಹಾಡಿದವರೂ ಚಂದ್ರಯ್ಯನವರೇ. ಕನ್ನಡವನ್ನು ಕೆಂಚಪ್ಪನವರಿಗೆ ಸರಿಯಾಗಿ ಕಲಿಸಿದ ಮೇಷ್ಟು ಇವರೇ. ಕೆಂಚಪ್ಪನವರ ಕನ್ನಡ ಭಾಷೆಯ ಮೇಲಿನ ಪ್ರೀತಿ ಅದ್ವಿತೀಯವಾದದ್ದು. ಸರಿಯಾಗಿ ಮಾತೃಭಾಷೆಯನ್ನು ಕಲಿತರೆ ಅನ್ಯಭಾಷೆಗಳನ್ನು ಅಷ್ಟೇ ಚೆನ್ನಾಗಿ ಕಲಿಯಬಹುದೆಂಬುದಕ್ಕೆ ಕೆಂಚಪ್ಪನವರ ಇಂಗ್ಲೀಷ್ ಭಾಷೆಯ ಮೇಲಿನ ಹಿಡಿತವೇ ಸಾಕ್ಷಿ. ಅವರು ಮುಂದೆ ಎರಡೂ ಭಾಷೆಗಳನ್ನು ಕರತಲಾ ಮಲಕ ಮಾಡಿಕೊಂಡವರು. ಇದನ್ನು ಅವರ ವಿಧಾನ ಮಂಡಲದ

ಕಲಾಪಗಳಲ್ಲಿ ಅವರಾಡುವ ಮಾತುಗಳಿಂದಲೇ ಮನವರಿಕೆ ಮಾಡಿಕೊಳ್ಳಬಹುದು. ಲೋಹಿಯಾ ಹೇಳಿದಂತೆ ಭಾಷೆ ರಾಜಕಾರಣದ ಮಹತ್ವದ ಸಾಧನ. ಮತ್ತು ಅದು ಸಂಸ್ಕೃತಿಯ ವಾಹಕವಾದ್ದರಿಂದ ಅದರ ಅರಿವು ಅತ್ಯವಶ್ಯಕ. ಕೆಂಚಪ್ಪ ಇದನ್ನು ಅರಿತಿದ್ದರೆಂಬುದಕ್ಕೆ ಅವರು ಮಂಡಿಸುವ ಚರ್ಚೆಗಳಲ್ಲಿ ಎದ್ದುಕಾಣುತ್ತದೆ. ಅದನ್ನು ನಾನು ಮುಂದೆ ಮತ್ತಷ್ಟು ವಿಸ್ತರಿಸಿ ಹೇಳುವ ಪ್ರಯತ್ನ ಮಾಡುವೆ.

ಹರಿಹರದ ಎ.ವಿ. ಸ್ಕೂಲಿನಲ್ಲಿ ಅವರ ವಿದ್ಯಾಭ್ಯಾಸ ಮುಂದುವರಿಯಿತು. ಶಂಭುಲಿಂಗಯ್ಯ, ಹೊಸಮಠದ ಸುಂಕದಕಟ್ಟೆ ಕೊನೇರಿರಾವ್, ಅಬ್ದುಲ್ ಅಜೀಜ್, ಚಂದ್ರಶೇಖರಯ್ಯ ವಿನಾಯಕ ಎಂಬಂಥ ಪ್ರತಿಭಾಶಾಲಿಗಳು ಅವರ ಸಹಪಾಠಿಗಳಾಗಿದ್ದರು. ಕೆಂಚಪ್ಪ ವರ್ಣರಂಜಿತ ವ್ಯಕ್ತಿತ್ವ ಹೊಂದಿದವರೆಂಬುವುದಕ್ಕೆ ಅವರಲ್ಲಿದ್ದ ಜ್ಞಾನ ದಾಹದಷ್ಟೇ ಅವರಲ್ಲಿದ್ದ ಕ್ರೀಡಾಸಕ್ತಿಯೂ ಸಾಕ್ಷಿಯಾಗಬಲ್ಲದು. ದೈಹಿಕವಾಗಿ ಅಷ್ಟೇ ಸಾಮರ್ಥ್ಯವನ್ನು ಹೊಂದಿದ್ದ ಅವರು ಕಾಲ್ಚೆಂಡು, ಕ್ರಿಕೆಟ್, ಕುಸ್ತಿ ಮುಂತಾದ ಪಂದ್ಯಗಳಲ್ಲೂ ಭಾಗವಹಿಸಿದವರು. ಮುಂದೆ ಕುಸ್ತಿಯಲ್ಲಿ ಅವರು ರಾಜ್ಯಮಟ್ಟದಲ್ಲಿ ಅನೇಕ ಪ್ರಶಸ್ತಿಗಳನ್ನೂ ಗಳಿಸಿಕೊಂಡರು. ಎ.ವಿ.ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಗೋಪಾಲ ಕೃಷ್ಣರಾವ್ ಅವರಿಗೆ ಇಂಗ್ಲೀಷ್ ವ್ಯಾಕರಣವನ್ನು ಬೋಧಿಸಿದ ಗುರುಗಳು. ಕೆಂಚಪ್ಪನವರು ಅವರನ್ನು ಎಂದಿಗೂ ಮರೆಯಲಿಲ್ಲ. ಚಿಕ್ಕಂದಿನಲ್ಲಿಯೇ ಇಂಥ ಪ್ರತಿಭೆ ಇದ್ದದ್ದರಿಂದಲೇ ಮೂರನೇ ತರಗತಿಯಿಂದಲೇ ಅವರಿಗೆ ವಿದ್ಯಾರ್ಥಿ ವೇತನದ ಸವಲತ್ತು ಅನಾಯಾಸವಾಗಿ ಸಿಕ್ಕಿತ್ತು.

ಇಷ್ಟೆಲ್ಲ ವಿದ್ಯಾಭ್ಯಾಸ ನಡೆಯುತ್ತಿದ್ದದ್ದು ಬರಿಗೈಯಲ್ಲಲ್ಲ. ಸಂಜೆಯ ಬಿಡುವಲ್ಲಿ ಕೈತೋಟದ ಮಣ್ಣು ಕಡಿದು ಹದ ಮಾಡುವುದು, ನೀರು ಹಾಯಿಸುವುದು ಮುಂತಾದ ಶ್ರಮದಾಯಕ ಕೆಲಸವೂ ನಡೆಯುತ್ತಿತ್ತು. ಅಣ್ಣ ತಿಮ್ಮಪ್ಪನವರಿಗೆ ಹೆಗಲಾಗಿ ದುಡಿದ ಕೆಂಚಪ್ಪರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ. ಬಡತನ ಹೊಕ್ಕ ಮನೆಗೆ ಕಳ್ಳನೂ ಹೊಕ್ಕರೆ ಹೇಗಿರುತ್ತದೆಂಬುದಕ್ಕೆ ಇವರ ಮನೆಯಲ್ಲಿದ್ದಬದ್ದದ್ದನ್ನೆಲ್ಲಾ ಕಳ್ಳರು ದೋಚಿಕೊಂಡು ಹೋಗುತ್ತಾರೆ. ಧೈರ್ಯದ ಮುಂದೆ ಇದೇನೂ ಅಲ್ಲವಲ್ಲ. ಅಣ್ಣ ತಮ್ಮ ಇಬ್ಬರೂ ಚೆನ್ನಾಗಿ ದುಡಿಮೆ ಮಾಡುವ ಮೂಲಕ ಮತ್ತೆ ಯಥಾಸ್ಥಿತಿಗೆ ಬರುತ್ತಾರೆ. ಇಂಥ ಕೆಂಚಪ್ಪನವರು ಕುಂಚಿಟಿಗ ಒಕ್ಕಲಿಗರ ಜಾತಿಗೆ ಸೇರಿದವರು. ಅವರ ಹೆಸರಿನ ಹಿಂದಿರುವ ಇನಿಷಿಲ್ 'ಕೆ' ಈ ಕುಲದ ಸೂಚಕವಾಗಿಯೇ ಬಂದದ್ದು. ಇನಿಷಿಯಲ್ ಪ್ರಜ್ಞೆಯೇ ಇಲ್ಲದ ಕಾಲದು. ಮೇಷ್ಟ್ರು ಯಾವ ಜಾತಿ ಎಂದು ಕೇಳಿ ಇವರ ಹೆಸರಿನ ಹಿಂದೆ 'ಕೆ' ಸೇರಿಸಿದ್ದೆ ಅವರು ಕೆ. ಕೆಂಚಪ್ಪ ಆದರು. ಅವರ ವಿದ್ಯಾಭ್ಯಾಸ ಇಲ್ಲಿಂದ ಶಿವಮೊಗ್ಗೆ, ಮೈಸೂರು ಪ್ರಾಂತದಲ್ಲಿ ಮುಂದುವರಿಯಿತು. ತಿಮ್ಮಪ್ಪನವರಿಗೆ ತಮ್ಮನ ವಿದ್ಯಾಭ್ಯಾಸ ಸಾಕು, ಗುಮಾಸ್ತಗಿರಿಗೋ ಯಾವುದೋ ಒಂದು ಸಣ್ಣ ಕೆಲಸಕ್ಕೋ ಸೇರಿಕೋ ಎಂಬ ಒತ್ತಾಯ ಜಾಸ್ತಿಯಾದಾಗ ಅವರು ಉಪಾಯದಿಂದ ಶಿವಮೊಗ್ಗೆಗೆ ಹೋಗುತ್ತಾರೆ. ಅಲ್ಲಿ ಅವರದ್ದೊಂದು ಸ್ವಾರಸ್ಯಕರವಾದ ಕತೆಯೂ ಇದೆ.

*     *     *     *     *

# ಶಿವಮೊಗ್ಗೆಯಲ್ಲಿ ವಿದ್ಯಾರ್ಥಿ ಕೆಂಚಪ್ಪ

ಆಪ್ತಮಿತ್ರರೊಬ್ಬರ (ಇವರ ವಿಚಾರ ಮುಂದೆ ಹೇಳುವೆ) ಒತ್ತಾಸೆಯಿಂದಾಗಿ ಅಣ್ಣನಿಂದ ತಪ್ಪಿಸಿಕೊಂಡು 48 ಮೈಲಿ ದೂರದ ಶಿವಮೊಗ್ಗೆಗೆ ಬರಿಗಾಲಲ್ಲಿ ನಡೆದು ತಲುಪಿದ ಕೆಂಚಪ್ಪನವರ ಜೊತೆಗೆ ಅವರ ಅತ್ತಿಗೆ ತಯಾರಿಸಿಕೊಟ್ಟಿದ್ದ ಬುತ್ತಿಯೂ ಇತ್ತು. ಅಜೀಜ್ ಎಂಬ ಮಿತ್ರನ ಕೊಠಡಿಯಲ್ಲಿ ಉಳಿದು ತಂದ ಬುತ್ತಿ ಕರಗಿದ ಮೇಲೆ ಮುಂದೇನು! ಎಂಬ ಪ್ರಶ್ನೆ ಎದುರಾಗುತ್ತದೆ. ಶಿವಮೊಗ್ಗೆ ಪೇಟೆಯಲ್ಲಿ ನಿರುದ್ದಿಶ್ಯದಿಂದ ದಾರಿಯಲ್ಲಿ ಹೋಗುತ್ತಿದ್ದಾಗ 'ಹರಿಹರದ ದೇವಯ್ಯನವರ ಹೋಟೆಲ್' ಎಂಬ ಬೋರ್ಡನ್ನು ಕಂಡು ಧೈರ್ಯವಾಗಿ ಒಳಗೆ ಹೊಕ್ಕು ದೇವಯ್ಯನವರನ್ನು ವಿಚಾರಿಸುತ್ತಾರೆ. ಅಲ್ಲಿಯೇ ಊಟಕ್ಕೆ ಕುಳಿತಿದ್ದ ಭದ್ರಾವತಿಯ ಅಕ್ಕಿಗಿರಣಿ ಮಾಲೀಕರಾದ ಮುರಿಗೆಪ್ಪ ಫಾಲಾಕ್ಷಪ್ಪ ಎಂಬುವವರಿಗೆ ಇವರ ಧೈರ್ಯ ಮೆಚ್ಚುಗೆಗೆ ಪಾತ್ರವಾಗುತ್ತೆ. ನಾನು ಇಲ್ಲಿ ಓದಲು ಬಂದಿದ್ದೇನೆ. ನನಗೆ ಸ್ಕಾಲರ್‌ಷಿಪ್ ಬರುತ್ತೆ ಅದು ಬರುವವರೆಗೆ ನನಗೆ ಊಟಕ್ಕೆ ಹಾಕಿ, ಬಂದ ಮೇಲೆ ಹಣ ಕೊಡುತ್ತೇನೆ. ಎನ್ನುತ್ತಾರೆ. ಮಕ್ಕಳಿಲ್ಲದ ದೇವಯ್ಯ ಕೆಂಚಪ್ಪನವರನ್ನು ತಮ್ಮ ಮಗನೆಂದೇ ಅಂದುಕೊಂಡು ಊಟಕ್ಕೆ ಹಾಕಿ ಉಪಚಾರ ಮಾಡುತ್ತಾರೆ. ಅಕ್ಕಿಗಿರಣಿ ಮಾಲೀಕರು ತಾವೇ ಆಹುಡುಗನ ಊಟದ ವೆಚ್ಚ ಭರಿಸುತ್ತೇವೆಂದರೂ ದೇವಯ್ಯ ಕೇಳುವುದಿಲ್ಲ. ಆ ಕಾಲದ ಅನಕ್ಷರಸ್ಥ ಜನರ ಔದಾರ್ಯವನ್ನು ಇದು ಎತ್ತಿ ತೋರಬಹುದಲ್ಲವೆ. ಆದರೆ ಒಂದು ವರ್ಷದ ಶಿವಮೊಗ್ಗೆ ವಾಸದ ನಂತರ ಅಣ್ಣ ತಿಮ್ಮಪ್ಪನವರ ಒತ್ತಾಯಕ್ಕೆ ಮಣಿದು ದಾವಣಗೆರೆಯಲ್ಲಿ ತಮ್ಮ ವಿದ್ಯಾಭ್ಯಾಸ ಮುಂದುವರಿಸುತ್ತಾರೆ. ಹರಿಹರದಿಂದ ದಾವಣಗೆರೆಗೆ 9 ಮೈಲಿ, ದೂರ ನಿತ್ಯ ನಡೆದೇ ಸ್ಕೂಲಿಗೆ ಹೋಗುತ್ತಾರೆ. ನಡಿಗೆಯ ಈ ಕಷ್ಟ ಅಪರಿಮಿತ. ಅದೂ ದಿನಾ ನಡೆಯಬೇಕೆಂದರೆ? ಅಲ್ಲಿ ಒಂದು ವರ್ಷ ಮುಗಿದದ್ದೇ ತಡ, ಮತ್ತೆ ಅವರು ಶಿವಮೊಗ್ಗೆಗೆ ವಾಪಾಸಾಗುತ್ತಾರೆ. ಯಥಾ ಪ್ರಕಾರ ದೇವಯ್ಯರಲ್ಲಿ ಊಟ, ಅಜೀಜ್ ರೂಮು ವಾಸ, ವಕೀಲ ಅನಂತಯ್ಯನವರ ಸ್ಕಾಲರ್‌ಷಿಪ್ ಬೆಂಬಲದಿಂದ ಅಲ್ಲಿನ ವಿದ್ಯಾಭ್ಯಾಸ ಸುಗಮ. ಚರಿತ್ರೆ, ವಿಜ್ಞಾನಗಳನ್ನು ಅಲ್ಲಿ ಅಧ್ಯಯನ ಮಾಡಿದರು. ವಿಶೇಷವೆಂದರೆ ವಿಜ್ಞಾನದಲ್ಲಿ ಶೇ. 95 ಅಂಕಗಳನ್ನು ಗಳಿಸಿದ್ದರು. ಮ್ಯಾಟ್ರಿಕ್ ಮುಗಿಸಿದ ನಂತರ ಮತ್ತೆ ಹರಿಹರದತ್ತ ಪಯಣ.

* * * * *

# ಹರಿಹರಪ್ಪನವರ ಅದ್ವಿತೀಯ ಸಹಕಾರ

ದಿ। ಹರಿಹರಪ್ಪನವರದ್ದು ಒಂದು ಅಪರೂಪದ ವ್ಯಕ್ತಿತ್ವ. ಇವರೂ ಹರಿಹರದವರೇ. ಅವರು ಹರಿಜನ ಪಂಗಡದವರು. ಅಸ್ಪೃಶ್ಯ ಜಾತಿಯಿಂದ ಬಂದ ಹರಿಹರಪ್ಪ ಅವರಿಗೂ ಕೆಂಚಪ್ಪನವರಿಗೂ ಗಳಸ್ಯ ಕಂಠಸ್ಯ ಗೆಳೆತನ. 'A Friend in need' ಗಾದೆ ಹರಿಹರಪ್ಪನವರಿಗೆ ನೂರಕ್ಕೆ ನೂರು ಅನ್ವಯವಾಗಬಲ್ಲದು. ಹರಿಹರಪ್ಪನವರು ಕೆಂಚಪ್ಪನವರಿಗಿಂತ ನಾಲ್ಕು ವರ್ಷಕ್ಕೆ ಹಿರಿಯರಾಗಿದ್ದರೂ ಈ ಹಿರಿತನ ಅವರ ಗೆಳೆತನಕ್ಕೆ ಯಾವುದೇ ಧಕ್ಕೆ ತರಲಿಲ್ಲ. ಯಾವ ಜನ್ಮದಲ್ಲಿ ಅವರಿಬ್ಬರೂ ಅಣ್ಣ ತಮ್ಮಂದಿರಾಗಿದ್ದರೋ ಅನ್ನಿಸುವಷ್ಟು ಗೆಳೆತನದ ಸಂಬಂಧ ಅವರಿಬ್ಬರದ್ದು. ಎಲ್ಲರ ಬದುಕಿನಲ್ಲೂ ಹರಿಹರಪ್ಪನವರಂಥ ಗೆಳೆಯರು ಸಿಕ್ಕರೆ ಅದೊಂದು ಜೀವನದ ಭಾಗ್ಯವೇ ಆದೀತು. ಕಷ್ಟ, ದುಃಖ, ಸಂಕಟಗಳು ಖಂಡಿತಾ ಇಲ್ಲವಾದಾವು. ಹರಿಹರಪ್ಪನವರು ಅಂಥಾ ಮಿತ್ರರು. ಜಾತಿ ಎನ್ನುವುದು ಒಂದು ಸುಳ್ಳು ಸೃಷ್ಟಿ ಎಂಬುದನ್ನು ಈ ಇಬ್ಬರೂ ಮಿತ್ರರು ಬದುಕಿ ತೋರಿಸಿಕೊಟ್ಟವರು. ಹರಿಹರಪ್ಪನವರ ತಂದೆ ಆಧ್ಯಾತ್ಮದ ಒಲುಮೆಯವರಾಗಿದ್ದರು. ಪ್ರಾಯಶಃ ಇಂಥ ಆಧ್ಯಾತ್ಮಿಕ ಆಸಕ್ತಿಯ ತಂದೆಯ ಗುಣವೇ ಹರಿಹರಪ್ಪನವರಲ್ಲಿ ಬಂದಿದ್ದಿರಬಹುದು. ಆಧ್ಯಾತ್ಮದ ಶಕ್ತಿಯೇ ಅದಲ್ಲವೇ. ಅದರ ಪರ್ಯಾಯವೆಂದರೆ ಪ್ರೀತಿ, ಅನುಕಂಪ. ಇಬ್ಬರೂ ಎಂದೆಂದಿಗೂ ಬಿಡದ ನಂಟಿನಲ್ಲಿ ತಮ್ಮಿಬ್ಬರ ಬಾಲ್ಯ ಕಳೆದವರು, ಹೊಳೆಗೆ ಹೋದರೂ ಜೊತೆ, ತೋಟದ ಕೆಲಸಗಳಲ್ಲಿಯೂ ಜೊತೆ, ಆಟ ಆಡುವಲ್ಲಿಯೂ ಜೊತೆ. ಈ ಜೊತೆಗಾರ ಹರಿಹರಪ್ಪ ಆಕಾಲದಲ್ಲಿ ಸ್ವಲ್ಪ ಮಟ್ಟಿಗೆ, ಹರಿಜನರಲ್ಲಿ ಇಲ್ಲವೇ ಇಲ್ಲ ಎಂದರೂ, ಸ್ಥಿತಿವಂತರಾಗಿದ್ದರೆನ್ನಿಸುತ್ತೆ ಅವರು ಅವರ ಮನೆಯಿಂದ ಬೆಲ್ಲ, ತುಪ್ಪ ಕದ್ದುತಂದು ಗೆಳೆಯ ಕೆಂಚಪ್ಪನವರಿಗೆ ತಿನ್ನಿಸುತ್ತಿದ್ದರಂತೆ. ಇದಕ್ಕಾಗಿ ಅವರು ಅವರ ಅಜ್ಜಿಯಿಂದ ಏಟು ತಿಂದ ಉದಾಹರಣೆಗಳೂ ಇವೆ. ಜವಳಿ ವ್ಯಾಪಾರ ಮಾಡುತ್ತಿದ್ದ ಅಪರೂಪದ ಹರಿಜನ ಕುಟುಂಬ ಈ ಹರಿಹರಪ್ಪನವರದ್ದು. ಹರಿಹರಪ್ಪನವರೂ ಸಂತೆಗಳಲ್ಲಿ ಜವಳಿ ವ್ಯಾಪಾರ ಮಾಡಿದವರೇ. ಓದುವ ಅದಮ್ಯ ಆಸೆ ಹರಿಹರಪ್ಪನರಲ್ಲಿದ್ದರೂ ಅವರ ಜಾತಿಯಿಂದಾಗಿ ಅದು ಅಸಾಧ್ಯವಾಗಿತ್ತು. ಜಾತಿ ವ್ಯವಸ್ಥೆ ತುಂಬಾ ಬಿಗಿಯಾಗಿದ್ದ ಕಾಲ ಅದು. ಹರಿಜನರನ್ನು ಶಾಲೆಗೆ ಸೇರಿಸಿಕೊಳ್ಳದ ಆ ಘಟ್ಟದಲ್ಲಿ ಹರಿಹರಪ್ಪ ತುಂಬಾ ನಿರಾಸೆಯಿಂದಲೇ ತಮ್ಮ ತಂದೆ ಲಿಂಗಪ್ಪನವರು ಕಲಿಸಿದ ಕನ್ನಡವನ್ನೇ ಚೆನ್ನಾಗಿ ಕಲಿತರು. ಲಿಂಗಪ್ಪನವರು ಅಲ್ಪಸ್ವಲ್ಪ ವಿದ್ಯಾವಂತರಾಗಿದ್ದರು. ಮುಂದೆ ಹರಿಹರಪ್ಪನವರು ಅಬಕಾರಿ ಇಲಾಖೆಯಲ್ಲಿ ಕೆಲಸಕ್ಕೆ ಸೇರುತ್ತಾರೆ. ಡಾ॥ ಸಿ.ಆರ್. ರೆಡ್ಡಿಯವರು ಸಂಸ್ಥಾನದ ಶಿಕ್ಷಣಾಧಿಕಾರಿಗಳಾದ ಫಲದಿಂದಾಗಿ ಹರಿಜನರನ್ನು ಶಾಲೆಗೆ ಸೇರಿಸಿಕೊಳ್ಳುವ ಪರಿಪಾಠ ಆರಂಭಗೊಂಡಿತು. ಸಿ.ಆರ್. ರೆಡ್ಡಿಯವರಂಥ ಅಧಿಕಾರಿಗಳು ಎಂದಿಂದಿಗೂ ಪ್ರಾತಃ ಸ್ಮರಣೀಯರೆನಿಸಿಕೊಳ್ಳುವುದು ಈ ಕಾರಣಕ್ಕೇ.

ಕೆಂಚಪ್ಪನವರು ಮ್ಯಾಟ್ರಿಕ್ ಮುಗಿಸಿದ ನಂತರ ಹೆಚ್ಚು ಕಮ್ಮಿ ಅವರ ವಿದ್ಯಾಭ್ಯಾಸ ಅಲ್ಲಿಗೇ ಕೊನೆಗೊಳ್ಳುವುದಿತ್ತು. ಆದರೆ ಹರಿಹರಪ್ಪನವರು ಬಿಡಲಿಲ್ಲ. ಕೆಂಚಪ್ಪ ಕೆಲಸ ಮಾಡುತ್ತಿದ್ದ ಕೈತೋಟದ ಪಕ್ಕದಲ್ಲಿ ಹರಿಹರಪ್ಪನವರ ತಂಗಿ ಚನ್ನಬಸವ್ವನ ತೋಟವಿತ್ತು. ಹರಿಹರಪ್ಪನವರು ಜವಳಿ ವ್ಯಾಪಾರದ ಬಿಡುವಿನ ಸಮಯವನ್ನು ತಂಗಿಯ ಜೊತೆ ತೋಟಕ್ಕೆ ನೀರು ಹಾಯಿಸುವುದರಲ್ಲಿ ವಿನಿಯೋಗಿಸುತ್ತಿದ್ದರು. ಆ ಸಮಯದಲ್ಲಿ ಕೆಂಚಪ್ಪ ಓದನ್ನು ನಿಲ್ಲಿಸಿದ ಸೂಚನೆ ಹರಿಹರಪ್ಪನವರಿಗೆ ಸಿಕ್ಕು ಅಲ್ಲಿಂದ ಹರಿಹರಪ್ಪನವರೇ ಮೈಸೂರಿಗೆ ಹೋಗಿ ಕುಂಚಿಟಿಗ ಒಕ್ಕಲಿಗರ ನಾಯಕರಂತಿದ್ದ ಸಾಹುಕಾರ್ ಬನುಮಯ್ಯನವರನ್ನು ಕಂಡು ತಮ್ಮ ಮಿತ್ರನ ವಿದ್ಯಾಬ್ಯಾಸಕ್ಕೆ ಸಕಲ ಏರ್ಪಾಡುಗಳನ್ನೂ ಮಾಡುತ್ತಾರೆ. ತಮ್ಮದೇ ಸಂಪಾದನೆಯ ಐವತ್ತು ರೂಪಾಯಿಗಳನ್ನು ಮಿತ್ರನ ಕೈಯಲ್ಲಿರಿಸಿ ಮೈಸೂರಿಗೆ ಹೋಗುವಂತೆ ಮಾಡುತ್ತಾರೆ. ಈ ಐವತ್ತು ರೂಪಾಯಿಗಳ ಜೊತೆ ಸೊಪ್ಪು ತರಕಾರಿ ಮಾರಿ ಗಳಿಸಿದ್ದ ಇನ್ನೂರು ರೂಪಾಯಿ ಕೆಂಚಪ್ಪನವರಲ್ಲಿತ್ತು. ಹರಿಹರಪ್ಪ ಕೆಂಚಪ್ಪ ಎರುಡು ದೇಹ ಒಂದು ಜೀವದ ಗೆಳೆಯರೆನ್ನುವುದಕ್ಕೆ ಇದನ್ನು ಮಿಕ್ಕಿ ಸಾಕ್ಷಿ ಬೇಕಾಗಿಲ್ಲ. ಗೆಳೆತನದ ಮಹತ್ವವನ್ನು ಅದರ ಪಾವಿತ್ರ್ಯತೆಯನ್ನು ಅವರು ಕೊನೆತನಕವೂ ಉಳಿಸಿಕೊಂಡು ಬೆಳೆದವರು. ಮುಂದೆ ಕೆಂಚಪ್ಪ ಹೋರಾಟದಲ್ಲಿ ತೊಡಗಿಕೊಂಡಾಗಲೂ ಹರಿಹರಪ್ಪನವರ ನೆರವು ಮುಂದುವರಿಯುತ್ತದೆ. ಅವರ ಮತ್ತು ಇವರ ಮಕ್ಕಳು ಒಟ್ಟೊಟ್ಟಿಗೆ ಬೆಳೆದದ್ದೂ ಒಂದು ವಿಶೇಷ. ಇದೇ ಕೆಂಚಪ್ಪ ಮುಂದೆ ತಮ್ಮ ಮಗಳ ಮತ್ತು ಹರಿಹರಪ್ಪನವರ ಮಗಳ ಮದುವೆಯನ್ನು ಒಂದೇ ಚಪ್ಪರದಡಿ ಮಾಡಿದ್ದು ಆ ಕಾಲಕ್ಕೇ ಯಾಕೆ ಈ ಕಾಲಕ್ಕೂ ಒಂದು ಕ್ರಾಂತಿಕಾರೀ ಕೆಲಸವೇ. ಈ ಹರಿಹರಪ್ಪನವರ ಮಕ್ಕಳಲ್ಲಿ ಶ್ರೀ ಕೆ.ಎಚ್. ರಂಗನಾಥ್ ಕೂಡ ಒಬ್ಬರು. ಈ ರಂಗನಾಥರು ಕೆಂಚಪ್ಪನವರ ನೆರಳಲ್ಲೇ ಬೆಳೆದು ವಿದ್ಯೆ, ಉನ್ನತಿ ಎಲ್ಲವನ್ನೂ ಸಂಪಾದಿಸಿದ್ದಾರೆ. ರಂಗನಾಥ್ ಕಾಂಗ್ರೆಸ್ಸಿನ ಮುತ್ಸದ್ದಿ ರಾಜಕಾರಣಿ, ಮಂತ್ರಿಯಾಗಿ ಹೊರಹೊಮ್ಮಲು ಅವರಿಗೆ ಕೆಂಚಪ್ಪನವರೇ ಸ್ಫೂರ್ತಿ ರಂಗನಾಥ್‌ರನ್ನು ನಾನು ಕಂಡು ಕೆಂಚಪ್ಪನವರ ಬಗ್ಗೆ ಪುಸ್ತಕ ರಚಿಸುತ್ತಿರುವೆ ಎಂದು ಹೇಳಿದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. 'ನನ್ನ ಗುರು ಅವರು. ಅವರೆಲ್ಲ ಆದರ್ಶಗಳನ್ನೂ ನಾನು ರೂಢಿಸಿಕೊಳ್ಳಲು ಪ್ರಯತ್ನಿಸಿದವನು' ಎಂದು ಭಾವುಕರಾಗಿ ಹೇಳಿದರು. ರಂಗನಾಥ್ ಹೇಲಿದ್ದು ಅಕ್ಷರಷಃ ನಿಜ. ಅವರು ಈಗಲೂ ಅಧ್ಯಯನಶೀಲರು, ಕರಾರುವಾಕ್ಕು ನಡೆನುಡಿಯುಳ್ಳವರು. ಶುದ್ದ ಕೈ ರಾಜಕಾರಣಿಯೆಂದೇ ಹೆಸರು ಮಾಡಿದವರು. ಇದೆಲ್ಲವರ ಹಿಂದೆ ಕೆಂಚಪ್ಪನವರ ಪ್ರಭಾವಳಿ ಇದ್ದೇ ಇದೆ.

* * * * *

# ಮೈಸೂರಿನಲ್ಲಿ ಕೆಂಚಪ್ಪ

ಮೈಸೂರಿನ ಬನುಮಯ್ಯ ಪ್ರೌಢಶಾಲೆಯಲ್ಲಿ ಎಂಟ್ರೆನ್ಸ್ ತರಗತಿಗೆ ಸೇರಿಕೊಂಡ ಕೆಂಚಪ್ಪನವರು ಅಲ್ಲಿನ ಮುಖ್ಯೋಪಾಧ್ಯಾಯ ಗರುಡಾಚಾರ್‌ಗೆ ತುಂಬ ಪ್ರಿಯವಾದ ಶಿಷ್ಯರಾದರು. ಕುಂಚಿಟಿಗರ ವಿದ್ಯಾರ್ಥಿನಿಲಯದಲ್ಲಿ ಊಟ ಮಾಡಿಕೊಂಡಿದ್ದರು. ಆದರೆ ಅಲ್ಲೊಂದು ತೊಂದರೆಯೆಂದರೆ ಓದುವುದಕ್ಕೆ ಬಿಡುವೇ ಇರುತ್ತಿರಲಿಲ್ಲ. ಅದಕ್ಕೆ ಕಾರಣ ಬನುಮಯ್ಯನವರು ವಿದ್ಯಾರ್ಥಿಗಳ ಮೇಲೆ ಹೊರಿಸುತ್ತಿದ್ದ ಸಂಬಂಧವಿಲ್ಲದ ಕೆಲಸಗಳು ಚಾಮುಂಡಿಬೆಟ್ಟದ ತಪ್ಪಲಲ್ಲಿದ್ದ ಬನುಮಯ್ಯನವರ ವಂಶಸ್ಥರ ರುದ್ರಭೂಮಿಯಲ್ಲಿ ಬಾವಿಯ ಮಣ್ಣು ತೆಗೆಯುವ ಕೆಲಸವನ್ನೂ ಕೆಂಚಪ್ಪ ಮಾಡಿದ್ದಾರೆ. ಇಂಥವೇ ಕೆಲಸಗಳಿಂದಾಗಿ ವಿದ್ಯಾರ್ಥಿ ಕೆಂಚಪ್ಪ ಬೇಸರಗೊಂಡು ಮತ್ತೆ ಶಿವಮೊಗ್ಗೆಗೆ ಹೋಗಲು ಯೋಚಿಸುತ್ತಾರೆ. ಶ್ರೀಮಾನ್ ಎಸ್.ಎಸ್. ಸುಬ್ಬರಾಯರಲ್ಲಿ ತಮ್ಮ ಕಷ್ಟ ತೋಡಿಕೊಂಡು ಶಿವಮೊಗ್ಗೆಗೆ ಸ್ಕಾಲರ್‌ಶಿಪ್ ವರ್ಗಾಯಿಸಿಕೊಡುವಂತೆ ಕೇಳಿಕೊಳ್ಳುತ್ತಾರೆ. ಇದಕ್ಕೆ ಒಪ್ಪಿದ ಸುಬ್ಬರಾಯರು ಹುಡುಗ ವಿನಮ್ರತೆಯನ್ನು ಮೆಚ್ಚುತ್ತಾರೆ. ಬನುಮಯ್ಯನವರೂ ಅದಕ್ಕೆ ಅನುಮತಿ ನೀಡುತ್ತಾರೆ. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಪಾಸಾದ ನಂತರ ಮತ್ತೆ ವಿದ್ಯಾಭ್ಯಾಸವನ್ನು ಮೈಸೂರಲ್ಲಿಯೇ ಮುಂದುವರಿಸುವ ಪ್ರಸಂಗ ಬರುತ್ತದೆ. ಆದರೆ ಹಣಕಾಸಿನ ಮುಗ್ಗಟ್ಟು. ಗೆಳೆಯ ಹರಿಹರಪ್ಪ ಬಿಡಲಿಲ್ಲ. ಅವರೇ ಮೈಸೂರಿಗೆ ಹೋಗಿ ಶಿವರಾಮ ಪೇಟೆಯಲ್ಲಿದ್ದ ಆಲಮ್ಮನ ಛತ್ರದಲ್ಲಿ ವಸತಿ ಏರ್ಪಾಡು ಮಾಡುತ್ತಾರೆ. ಕೆಂಚಪ್ಪ ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗುತ್ತಾರೆ. ಅಲ್ಲಿ ಆಗ ಎನ್.ಎಸ್. ಸುಬ್ಬರಾಯರೇ ಪ್ರಿನ್ಸಿಪಾಲರಾಗಿರುತ್ತಾರೆ. ಕಾಲೇಜು ಶುಲ್ಕ ಕಟ್ಟಲು ಕೆಂಚಪ್ಪನವರಿಗೆ ಸಾಧ್ಯವಾಗುವುದಿಲ್ಲ. ಆಗ ನೆರವಿಗೆ ಬಂದವರು ಈ ಸುಬ್ಬರಾಯರೇ. ಅವರ ನೆನಪಿನಲ್ಲಿ ಕೆಂಚಪ್ಪ ಉಳಿದಿದ್ದರು. ತಮ್ಮ ಕಷ್ಟವನ್ನು ಸುಬ್ಬರಾಯರಲ್ಲಿ ತೋಡಿಕೊಂಡರು. ಕೆಂಚಪ್ಪನವರ ಫೀ ಮನ್ನಾಮಾಡಿದರು ಆಗಿನ ಕಾಲದ ಪ್ರಿನ್ಸಿಪಾಲ, ಅಧ್ಯಾಪಕ ವರ್ಗ ಹೀಗೇ ಇತ್ತು. ವಿದ್ಯಾರ್ಥಿಯಲ್ಲಿದ್ದ ಉತ್ಸಾಹಕ್ಕೆ ಭಂಗಬರದಂತೆ ನೋಡಿಕೊಳ್ಳುತ್ತಾ ಅವನ ವಿದ್ಯಾಭ್ಯಾಸ ಮುಂದುವರಿಯುವಂತೆ ಮಾಡುವಲ್ಲಿ ವೈಯಕ್ತಿಕವಾಗಿ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಿದ್ದ ಅಧ್ಯಾಪಕರ ಸಂಖ್ಯೆ ಆ ಕಾಲಕ್ಕೆ ಜಾಸ್ತಿಯಾಗಿಯೇ ಇತ್ತು. ರಾಷ್ಟ್ರವನ್ನು ಕಟ್ಟುವಲ್ಲಿ ಯುವ ಜನಾಂಗದ ಪಾತ್ರ ಬಹುಮುಖ್ಯವಾದದ್ದೆಂಬ ತಿಳುವಳಿಕೆ ಆ ಅಧ್ಯಾಪಕ ವರ್ಗದಲ್ಲಿತ್ತು. ಪ್ರಜ್ಞೆಯನ್ನು ಇಮ್ಮಡಿಗೊಳಿಸುವುದು, ಮನಸ್ಸನ್ನು ವಿಕಾಸಗೊಳಿಸುವುದು ತಮ್ಮ ಜವಾಬ್ದಾರಿಯೆಂದೇ ಅವರೆಲ್ಲ ನಂಬಿದ್ದರು. ಆದ್ದರಿಂದಲೇ ಕೆಂಚಪ್ಪನವರಂಥ ಧೀಮಂತ ಪಡೆಯೇ ಸೃಷ್ಟಿಯಾಗಲು ಸಾಧ್ಯವಾಯಿತು. ಸುಬ್ಬರಾಯರ ಅರ್ಥಶಾಸ್ತ್ರದ ಪಾಠಗಳು, ಪ್ರೊ. ಮ್ಯಾಕಿಂಟಿಷ್ ಅವರ ಇಂಗ್ಲಿಷ್ ಪಾಠ ಕೆಂಚಪ್ಪನವರಲ್ಲಿ ಹೊಸದಿಕ್ಕನ್ನು ಸೃಷ್ಟಿಸಿದವು. ಅಲ್ಲಿ ಅವರು ಮೂರುವರ್ಷ ಶ್ರದ್ಧೆಯಿಂದ ಅಧ್ಯಯನ ಮಾಡಿದರು. ಶಿರಾದ ಟಿ.ಎಚ್. ರಂಗಪ್ಪ ಅವರ ಸಹಪಾಠಿಯಾಗಿದ್ದು ಮುಂದೆ ಇವರು ಜಿಲ್ಲಾ ಪೊಲೀಸ್ ಅಧಿಕಾರಿಯಾಗುತ್ತಾರೆ.

ಕೆಂಚಪ್ಪ ತಮ್ಮ ವಿದ್ಯಾಭ್ಯಾಸದ ಜೊತೆಗೆ Extra Curriculum ನಲ್ಲೂ ಅಗ್ರಗಣ್ಯರಾಗಿದ್ದರು. ಒಬ್ಬ ವಿದ್ಯಾರ್ಥಿಯಾಗಿ ವಿಕಾಸಗೊಳ್ಳಲು ಏನೇನು ಬೇಕೋ ಅದೆಲ್ಲವನ್ನೂ ಬಾಚಿಕೊಳ್ಳಬೇಕೆಂಬ

ಹೆಬ್ಬಯಕ್ಕೆ ಕೆಂಚಪ್ಪನವರಲ್ಲಿತ್ತು. ಪಾಠಗಳಲ್ಲಿ ಮುಂದಿದ್ದಂತೆಯೇ ಅವರು ಆಟಗಳಲ್ಲೂ ಮುಂದಿದ್ದರು. ಕುಸ್ತಿ, ಭಾರ ಎತ್ತುವಿಕೆ, ಓಟ ಮುಂತಾದ ಸ್ಪರ್ಧೆಗಳಲ್ಲಿ ಕೆಂಚಪ್ಪ ಯಾವಾಗಲೂ ಪ್ರಥಮ ಸಾಲಿನಲ್ಲೇ ಬಂದವರು. ಅವರು ಗರಡಿಯಾಳೂ ಆಗಿದ್ದರು. ವೀರಪ್ಪ ಎಂಬ ಏಸ್ತಾದರು ಅವರ ಗರಡಿಯಲ್ಲಿ ಕೆಂಚಪ್ಪನವರಿಗೆ ಗುರು. ಅನೇಕ ಪಟ್ಟುಗಳನ್ನು ಅವರಿಗೆ ಕಲಿಸಿದರು. ಮಹಾರಾಜ ಕಾಲೇಜಿನ ಮೈದಾನದಲ್ಲಿ ಏರ್ಪಟ್ಟಿದ್ದ ರಾಜ್ಯಮಟ್ಟದ ಕುಸ್ತಿ ಸ್ಪರ್ಧೆಯಲ್ಲಿ ಕೆಂಚಪ್ಪ ಪ್ರಥಮ ಪ್ರಶಸ್ತಿ ಗಳಿಸಿದ್ದರು. ಅದಕ್ಕಾಗಿ ಅವರು ರಜತ ಪಾತ್ರೆಯನ್ನು ತಮ್ಮ ಗುರು ಸುಬ್ಬರಾಯರಿಂದಲೇ ಸ್ವೀಕರಿಸಿದರು. ಅಷ್ಟೇ ಅಲ್ಲ ರಾಜ್ಯದಲ್ಲಿ ಎಲ್ಲೆಲ್ಲಿ ಕುಸ್ತಿ ಪಂದ್ಯಗಳಾಗುತ್ತಿದ್ದವೋ ಅಲ್ಲೆಲ್ಲಾ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದರು. ಇವರ ಇನ್ನೊಬ್ಬ ಕುಸ್ತಿಗುರು ಅಬ್ದುಲ್ ಸತ್ತಾರ್ ಸಾಹೇಬರು. ಇವರನ್ನು ರಾಣಿಬೆನ್ನೂರು ತಾಲ್ಲೂಕಿನ ಒಂದು ಊರಿಗೆ ಕರೆದುಕೊಂಡು ಹೋಗಿ ಅಲ್ಲಿನ ಪಂದ್ಯವೊಂದರಲ್ಲಿ ಅನಿರೀಕ್ಷಿತವಾಗಿ ಭಾಗವಹಿಸುವಂತೆ ಮಾಡುತ್ತಾರೆ. ಐರಣಿ ಗ್ರಾಮದ ರಹೀಂ ಎನ್ನುವ ಕುಸ್ತಿಪಟು ಬಂಗಾರದ ಬಳೆ ಹಿಡಿದು 'ಅಖಾಡದಲ್ಲಿ ಯಾರು ಬೇಕಾದರೂ ನನ್ನೊಂದಿಗೆ ಸ್ಪರ್ಧಿಸಬಹುದು' ಎಂದು ಸವಾಲ್ ಹಾಕಿದಾಗ ಕೆಂಚಪ್ಪ ಅವನನ್ನು ಸೋಲಿಸಿ ಬಂಗಾರದ ಬಳೆಯನ್ನು ಗೆದ್ದರು.

ಮೈಸೂರಲ್ಲಿ ಇವರು ಕೊನೆಯ ವರ್ಷದ ಬಿ.ಎ. ಯಲ್ಲಿದ್ದಾಗ ಶಿವಮೊಗ್ಗೆಯ ಒಬ್ಬ ಅಪರೂಪದ ವ್ಯಕ್ತಿ ಇವರ ಬದುಕಿನಲ್ಲಿ ಪ್ರವೇಶಿಸುತ್ತಾರೆ. ಅವರೇ ಸಿದ್ದೋಜಿರಾವ್, ಅವರು ಸಾಹುಕಾರರಾಗಿದ್ದರು. ಮೈಸೂರಲ್ಲಿ ಮನೆಯೊಂದನ್ನು ಕೊಳ್ಳಲು ಬಂದು ಕೆಂಚಪ್ಪನವರಲ್ಲಿ ಉಳಿದಿದ್ದರು. ಇದೊಂದು ಯೋಗಾಯೋಗ ಅವರು ಬಿ.ಎ. ಮುಗಿದ ಮೇಲೆ ಏನು ಮಾಡಬೇಕೆಂದಿರುವೆ ಎಂಬ ಪ್ರಶ್ನೆಗೆ ಕೆಂಚಪ್ಪ ಎಲ್.ಎಲ್.ಬಿ. ಮಾಡಬೇಕೆಂದಿರುವೆ ಆದರೆ ಅದು ಸಾಧ್ಯವಾಗುವುದಿಲ್ಲ ಎಂದು ಉತ್ತರಿಸುತ್ತಾರೆ. ಎಲ್.ಎಲ್.ಬಿ. ಮಾಡುವ ಮನಸ್ಸು ಕೆಂಚಪ್ಪರಲ್ಲಿದ್ದದಕ್ಕೆ ಒಂದು ಕಾರಣವೂ ಇದೆ. ಅವರಿಗೆ ಸರ್ಕಾರಿ ನೌಕರರಿಗೆ ಹೋಗುವ ಇಷ್ಟವಿರಲಿಲ್ಲ. ಆಗಲೇ ಈ ವ್ಯಕ್ತಿಯ ಬಂಧನ ಮುಕ್ತ ಜೀವನದ ಬಯಕೆ ವ್ಯಕ್ತವಾಗುತ್ತದೆ. ಆಗಿನ ಮೊಳಕೆಯ ಬಯಕೆ ಮುಂದೆ ಚಿಗುರಿ ಹೆಮ್ಮರವಾಗುವುದನ್ನೂ ನಾವು ನೋಡುತ್ತೇವೆ. ಸೃಜನಾತ್ಮಕವಾದ ಯಾವ ಮನಸ್ಸೂ ಬಂಧನದಲ್ಲಿರಲು ಬಯಸುವುದಿಲ್ಲ. ಸಂಕೋಲೆಗಳನ್ನು ಕಳಚಿ ಸ್ವತಂತ್ರವಾಗಿ ಕೈ ಮೈ ಮನಸ್ಸುಗಳನ್ನಾಡಿಸುವುದೇ ಅಂಥ ಮನಸ್ಸುಗಳ ಮಹದಿಚ್ಛೆಯೂ ಆಗುತ್ತದೆ. ಆಯ್ಕೆಯ ಪ್ರಶ್ನೆಯೂ ಇಲ್ಲಿದೆ. ಕೆಂಚಪ್ಪನವರು ಸರಕಾರೀ ಉದ್ಯೋಗ ಸೇರಿದ್ದರೆ ದೊಡ್ಡ ಹುದ್ದೆಯೇ ಸಿಕ್ಕಬಹುದಾಗಿದ್ದ ಆ ದಿನಗಳಲ್ಲಿ ಅವರು ಅದನ್ನು ನಿರಾಕರಿಸುವುದು ಆಶ್ಚರ್ಯ ಹುಟ್ಟಿಸುತ್ತೆ. ಈ ಸಿದ್ದೋಜಿರಾವ್ ಕೆಂಚಪ್ಪನವರ ಹಾಲ್ ಟಿಕೆಟ್ ನಂಬರ್ ತಿಳಿದುಕೊಂಡು ಶಿವಮೊಗ್ಗೆಗೆ ಹಿಂತಿರುಗುತ್ತಾರೆ.

ಮೈಸೂರಲ್ಲಿದ್ದಾಗ ಮತ್ತೊಂದು ಸ್ವಾರಸ್ಯಕರ ಪ್ರಸಂಗ ಕೆಂಚಪ್ಪನವರ ಬದುಕಿನಲ್ಲಿ ಸಂಭವಿಸುತ್ತದೆ. ಆಯ್ಕೆಯ ಪ್ರಶ್ನೆಗೆ ಸಂಬಂಧಿಸಿದಂತೆ ಕೆಂಚಪ್ಪ ಎಷ್ಟು ನಿಷ್ಠುರರಾಗಿದ್ದರು ಎಂಬುದಕ್ಕೂ ಈ ಪ್ರಸಂಗ ಒಂದು ನಿದರ್ಶನರಾಗಬಲ್ಲದು. ಕೆಂಚಪ್ಪನವರ ಪಾದರಸ ವ್ಯಕ್ತಿತ್ವ ಮೈಸೂರು ಪ್ರಾಂತದಲ್ಲೇ ಪ್ರಸಿದ್ಧಿಗೆ ಬಂದಿತ್ತು. ಕುಂಚಿಟಿಗರಲ್ಲಿ ಅವರು ಅಪರೂಪದ ಬುದ್ಧಿಜೀವಿಗಳಾಗಿದ್ದರು. ಆಗಲೇ ಪ್ರಾಯಕ್ಕೆ ಬಂದಿದ್ದ ಅವರ ಮೇಲೆ ಆ ಜಾತಿಯ ಶ್ರೀಮಂತರ ಕಣ್ಣುಗಳು

ಬೀಳಲಾರಂಭಿಸಿದ್ದವು. ರಮಾವಿಲಾಸ್ ಅಗ್ರಹಾರದ ಶ್ರೀಮಂತರೊಬ್ಬರು ತಮ್ಮ ಮಗಳನ್ನು ಕೆಂಚಪ್ಪನವರಿಗೆ ಕೊಡಲು ಮುಂದಾಗುತ್ತಾರೆ. ಹೆಣ್ಣನ್ನು ನೋಡಲೂ ಕರೆದೊಯ್ಯುತ್ತಾರೆ. ಆದರೆ ಕೆಂಚಪ್ಪ ನಾನು ಶ್ರೀಮಂತರ ಮನೆಯಲ್ಲಿ ಮದುವೆಯಾಗುವುದಿಲ್ಲ ಎಂದು ಹೇಳಿಬಿಡುತ್ತಾರೆ. ಹಣಕ್ಕಾಗಿ, ಶ್ರೀಮಂತ ಮನೆಯ ನಾಯಿಗಳಂತೆ ಬದುಕುವುದಕ್ಕಾಗಿಯೇ ಕಣ್ಣು, ಬಾಯಿ ತೆರೆದುಕೊಂಡಿರುವ ಅಸಂಖ್ಯಾತರಿಗೂ ಕೆಂಚಪ್ಪನವರಂಥ ಯುವಕರಿಗೂ ಇರುವ ವ್ಯತ್ಯಾಸವೇ ಇದಲ್ಲವೆ?. ಮನಸ್ಸು ಮಾಡಿದ್ದರೆ ಕೆಂಚಪ್ಪನವರು ಹಾಗೆ ಶ್ರೀಮಂತರ ಹುಡುಗಿಯನ್ನು ಮದುವೆಯಾಗಿ ಐಷಾರಾಮೀ ಬದುಕನ್ನು ನಡೆಸಬಹುದಿತ್ತು. ಆದರೆ ಆ ದಿನಗಳಲ್ಲಿ ಮೌಲ್ಯಯುತವಾಗಿ ಬದುಕಬೇಕೆಂಬ ಛಲ ಹಲವು ಯುವಕರಲ್ಲಿಯಾದರೂ ಇತ್ತು. ಇಂಥವರ ಬದುಕಿನಲ್ಲಿ ಒಂದು ನಿರ್ದಿಷ್ಟ ಗುರಿಯೂ ಇತ್ತು. ಅದಕ್ಕೆ ತಕ್ಕ ಆದರ್ಶದ ಹಾದಿಯೂ ಇತ್ತು. ಕೆಂಚಪ್ಪ ಆಯ್ಕೆ ಮಾಡಿಕೊಳ್ಳುವುದು ಇಂಥ ಕಡು ಕಷ್ಟದ ಆದರೆ ಮೌಲ್ಯಯುಕ್ತವಾದ ಆದರ್ಶದ ಹಾದಿಯನ್ನೆ ಇದು ಇಂದಿನ ಯುವಕರಿಗಂತೂ ಅತೀ ಮುಖ್ಯವಾದದ್ದು. ಹಣದ ಬೆನ್ನು ಹತ್ತಿ ಬೇಟೆಯಾಡುತ್ತಿರುವ ಅಪಮೌಲ್ಯಗಳ ಸಂತೆಯಲ್ಲಿ ದಿಕ್ಕುಗಾಣದೆ ಅಲೆಯುತ್ತಿರುವ ಯುವಕರು, ಯುವ ರಾಜಕಾರಣಿಗಳು ಇಂಥ ವ್ಯಕ್ತಿಗಳ ನಿರ್ಧಾರವನ್ನು ಸರಿಯಾಗಿ ಗ್ರಹಿಸಬೇಕಾದ ಅವಶ್ಯಕತೆ ಎಂದಿಗಿಂತಲೂ ಇಂದು ಮುಖ್ಯವಾಗಿದೆ. ಮುಂದೆ ಕೆಂಚಪ್ಪನವರು ಮದುವೆಯಾಗುವುದು ಅತ್ಯಂತ ಸಾದಾರಣ ಹಾಗೂ ಬಡವರ ಮನೆಯಲ್ಲಿ. ಕೆಂಚಪ್ಪನವರ ಅಕ್ಕ ಹನುಮಕ್ಕ ಇವರನ್ನು ಶಿಕಾರಿಪುರದ ಬಳಿಯ ಗ್ರಾಮವೊಂದಕ್ಕೆ ಕರೆದುಕೊಂಡು ಹೋಗಿ ಅಲ್ಲೇ ಒಂದು ಹೆಣ್ಣನ್ನೂ ತೋರಿಸಿದ್ದರು. ಕೆಂಚಪ್ಪ ಆಗ ಮದುವೆಗೆ ಸಮ್ಮತಿ ನೀಡಿರಲಿಲ್ಲ. ಇದಕ್ಕೆ ಕಾರಣ ಕೆಂಚಪ್ಪನವರನ್ನು ಕಾಡುತ್ತಿದ್ದ ಬಡತನ. ಬಡವರಿಗೇಕೆ ಮದುವೆ ಎಂದು ಆ ಹುಡುಗಿಯ ಅಣ್ಣ ಮುದ್ದಪ್ಪನವರಿಗೆ ಹೇಳಿಕಳಿಸಿದ್ದರು. ಅವರು ಮೈಸೂರಿಗೇ ಬಂದು ಕೆಂಚಪ್ಪನವರನ್ನು ಕಂಡಿದ್ದರು. ಆದರೆ ವಿಧಿಯ ಆಟ ಬೇರೆಯೇ ಇತ್ತು. ಕೆಂಚಪ್ಪ ನೋಡಿ ಬಂದಿದ್ದ ಹೆಣ್ಣುಮಗಳು 'ನಾನು ಮದುವೆ ಆಗುವುದಾದರೆ ಅವರನ್ನೇ ಇಲ್ಲವಾದರೆ ನನಗೆ ಮದುವೆಯೇ ಬೇಡ' ಎಂದು ಹಟ ಹಿಡಿದಳು. ಆ ಹೆಣ್ಣು ಮಗಳೇ ಕೆಂಚಪ್ಪನವರ ಸಂಗಾತಿಯಾದಳು. ಆಕೆಯೇ ದೇವಮ್ಮ.ದೇವಮ್ಮನವರು ಕೆಂಚಪ್ಪನವರಿಗೆ ನೆರಳಾಗಿ ಬದುಕಿದವರು. ಅವರೆಲ್ಲ ಕಷ್ಟಗಳ ಪಾಲುಗಾರ್ತಿಯಾದವರು. ಹೀಗೆ ದೇವಮ್ಮರನ್ನು ಮದುವೆಯಾದ ಸಂದರ್ಭವೂ ಮತ್ತೊಂದು ಸ್ವಾರಸ್ಯಕರ ಸಂಗತಿ. ದೇವಮ್ಮರ ಅಣ್ಣ ಕೆಂಚಪ್ಪನವರ ಅಣ್ಣ ತಿಮ್ಮಪ್ಪನವರಲ್ಲಿ ಕೆಂಚಪ್ಪ ಮದುವೆ ಬೇಡ ಎಂದ್ದನ್ನು ತಿಳಿಸಿದಾಗ 'ನೀವು ಲಗ್ನಕ್ಕೆ ಸಿದ್ಧತೆ ಮಾಡಿಕೊಳ್ಳಿ' ಎಂದಷ್ಟೇ ಹೇಳಿ ಆಗ ತಾನೇ ಬಿ.ಎ. ಮುಗಿಸಿ ಊರಿಗೆ ಬಂದಿದ್ದ ಕೆಂಚಪ್ಪನವರನ್ನು ಕರೆದು "ಲೇ ತಮ್ಮ ನಿನ್ನ ಬಟ್ಟೆಬರೆ ತೆಗೆದುಕೋ ನಿನಗೆ ಮದುವೆ ಮಾಡಬೇಕು" ಎಂದರಂತೆ. ಅವರ ಮಾತನ್ನು ಮೀರುವ ಶಕ್ತಿ ಕೆಂಚಪ್ಪನವರಲ್ಲಿಲ್ಲ. ಅಣ್ಣನ ಬಗ್ಗೆ ಅವರಿಗೆ ಅಷ್ಟೊಂದು ಗೌರವ. ಬಿ.ಎ. ಆದಮೇಲೂ ವಿದ್ಯಾವಂತ ಯುವಕನಲ್ಲಿರಬೇಕಾದ ಅಗತ್ಯ ವಿನಯ ಇದು. ಕೆಂಚಪ್ಪ ವಿದ್ಯೆಗೆ ತಕ್ಕ ವಿನಯವನ್ನೂ ಸಂಪಾದಿಸಿದ್ದರು ಎಂಬುದಕ್ಕೆ ಇದು ಸಾಕ್ಷಿ. ಉಟ್ಟ ಬಟ್ಟೆಯಲ್ಲೇ ಅಣ್ಣನ ಆಣತಿಯಂತೆ ಅವರು ದಿಬ್ಬಣ್ಣ ಮುಗಿಸಿದರು. ಬಡವರ ಮನೆಯ ಪ್ರೀತಿಯ ಹೆಣ್ಣು ಮಗಳು ದೇವಮ್ಮ ಅವರ ಕೈಹಿಡಿದರು. ದೇವಮ್ಮ ಮುಂದೆ ಗಂಡನ ಹೆಜ್ಜೆಗಳಲ್ಲಿ ಹೆಜ್ಜೆ ಇಟ್ಟು ನಡೆದರು. ಗಾಂಧೀಜಿಯ ಕಸ್ತೂರಬಾರಂತೆ.

* * * * *

# ಪುಣೆಯ ಫರ್ಗುಸನ್ ಕಾಲೇಜಿನಲ್ಲಿ

ಮದುವೆಯಾದ ನಂತರ ಸಿದ್ದೋಜಿರಾವ್ ಕೆಂಚಪ್ಪನವರ ಮುಂದಿನ ಓದಿನ ಬಗ್ಗೆ ಗಮನ ಹರಿಸಿದ್ದೊಂದು ದೊಡ್ಡ ಘಟನೆ. ಅದಕ್ಕಾಗಿ ಅವರು ಕೆಂಚಪ್ಪನವರಿಗೆ ಹಣಕಳಿಸಿ ಶಿವಮೊಗ್ಗೆಗೆ ಕರೆಸಿಕೊಳ್ಳುತ್ತಾರೆ. ಎಲ್.ಎಲ್.ಬಿ. ಮಾಡಿದರೆ ಪುನಾದಲ್ಲೇ ಮಾಡಬೇಕೆಂಬ ಬಯಕೆ ಕೆಂಚಪ್ಪನವರದ್ದು. ಸಿದ್ದೋಜಿರಾವ್ ಹೃದಯ ಅತ್ಯಂತ ವಿಶಾಲವಾದದ್ದು. ಎಂ.ಎ. ಎಲ್.ಎಲ್.ಬಿ. ಎರಡನ್ನೂ ನೀವು ಎರಡು ವರ್ಷದಲ್ಲಿ ಮುಗಿಸಿಕೊಂಡು ಬರಬೇಕು. ಅದರ ಖರ್ಚು ಎಷ್ಟಾದರೂ ತಾವೇ ಕೊಡುತ್ತೇವೆಂದು ಸಿದ್ದೋಜಿರಾವ್ ಹೇಳುತ್ತಾರೆ. ಎಂಥಾ ಔದಾರ್ಯವಿದಲ್ಲವೇ ಕೆಂಚಪ್ಪ ಯಾರೋ ಸಿದ್ದೋಜಿರಾವ್ ಯಾರೋ? ಹರಿಹರಪ್ಪನವರ ಹೇಳಿಕೆಯಂತೆ ಅವರು ಮೈಸೂರಿಗೆ ಹೋಗಿ ಕೆಂಚಪ್ಪನವರಲ್ಲಿ ತಂಗುವುದೇ ಒಂದು ಯೋಗಾಯೋಗ. ಅಷ್ಟಕ್ಕೇ ಸಿದ್ದೋಜಿರಾವ್ ಕೆಂಚಪ್ಪನವರಲ್ಲಿ ಆಕರ್ಷಿತರಾದರೆಂದರೆ ಆ ಚಿಕ್ಕ ವಯಸ್ಸಿನಲ್ಲೇ ಕೆಂಚಪ್ಪನವರ ತೇಜಸ್ಸು ಎಂಥಾದ್ದಿದ್ದೀತು. ಸಂಬಂಧವೇ ಇಲ್ಲದ ವ್ಯಕ್ತಿಯ ವಿದ್ಯಾಭ್ಯಾಸಕ್ಕಾಗಿ ತಮ್ಮ ಹಣವನ್ನು ನೀಡುವ ದೊಡ್ಡತನವಿದ್ದ ಸಿದ್ದೋಜಿರಾಯರದ್ದು ಎಂತಾ ಘನ ವ್ಯಕ್ತಿತ್ವವಿದ್ದೀತು. ಊಹೆಗೂ ನಿಲುಕದ್ದು. ಅವರ ಇಷ್ಟದಂತೆ ಕೆಂಚಪ್ಪ ಪುಣೆಯ ಫರ್ಗುಸನ್ ಕಾಲೇಜಿನ ವಿದ್ಯಾರ್ಥಿಯಾಗುತ್ತಾರೆ. ಅಲ್ಲಿ ಎಂ.ಎ.ಗೆ ಸೇರಿದರೆ ಸಂಜೆಯಲ್ಲಿ ಲಾ ಕಾಲೇಜಿಗೆ ಸೇರುತ್ತಾರೆ.

ಪುಣೆಯುಲ್ಲಿಯೂ ಅವರು ತಮ್ಮ ವಿದ್ಯಾಭ್ಯಾಸದ ಜೊತೆಗೆ ಆಟಗಳಲ್ಲೂ ಭಾಗವಹಿಸುವುದನ್ನು ಮುಂದುವರಿಸುತ್ತಾರೆ. ಅಖಿಲ ಭಾರತ ಕುಸ್ತಿ ಪಂದ್ಯದಲ್ಲಿ ಕೊಲ್ಲಾಪುರದ ಮಹಾರಾಜ ರಜತಪದಕ ಗೆಲ್ಲುವುದರ ಜೊತೆನಲ್ಲೂ ಮುಂಬಯಿ ಪ್ರಾಂತದ ಗೌರ್ನರ್ ಲಾರ್ಡ್ ವಿಲ್ಸನ್‌ರ ಬೆಳ್ಳಿಬಟ್ಟಲೂ ಇವರ ಪಾಲಾಯಿತು. ವೆಯ್ಟ್ ಲಿಫ್ಟ್‌ನಲ್ಲೂ ಅವರಿಗೆ ವೈಸರಾಯರ ಬೆಳ್ಳಿಪಾತ್ರೆ ಲಭಿಸಿತು. ಈ ವಿಜಯಗಳಿಂದ ಅವರ ಕೀರ್ತಿ ಪತ್ರಿಕೆಗಳ ಮೂಲಕ ದೇಶದೆಲ್ಲೆಡೆ ಪ್ರಸಾರಗೊಂಡಿತು. ಅದು ಮೈಸೂರು ಪ್ರಾಂತಕ್ಕೆ ಅವರು ದೊರಕಿಸಿಕೊಟ್ಟ ಕೀರ್ತಿ. ಇಷ್ಟೆಲ್ಲಾ ಕ್ರೀಡೆಯಲ್ಲಿ ಅವರು ಪಾಲ್ಗೊಳ್ಳುವಾಗ ಅವರ ದೈಹಿಕ ಪೋಷಣೆಗೆ ತಕ್ಕ ಆಧಾರವೂ ಅವರಿಗೆ ಸುಲಭಕ್ಕೆ ಲಭ್ಯವಾದದ್ದೂ ಒಂದು ಅದೃಷ್ಟ. ಪುಣೆಯಲ್ಲಿ ದುಂಡಪ್ಪ ಎಂಬ ವೀರಶೈವರು ಖಾನಾವಳಿ ನಡೆಸುತ್ತಿದ್ದರು. ಅಲ್ಲಿಯೇ ಕೆಂಚಪ್ಪನವರು ಊಟ ಮಾಡುತ್ತಿದ್ದದ್ದು. ಈ ದುಂಡಪ್ಪ ಮಹಾನ್ ಕ್ರೀಡಾಭಿಮಾನಿ. ಕೆಂಚಪ್ಪನವರಿಗೆ ಊಟದಲ್ಲಿ ಅನೇಕ ಈ ಕಾರಣದಿಂದ ಲಭ್ಯವಾದರು. ಹತ್ತರಿಂದ ಹನ್ನೆರಡು ಚಪಾತಿ, ಧಾರಾಳವಾಗಿ ತುಪ್ಪ ಬಡಿಸಲಾಗುತ್ತಿತ್ತು. ಕೆಂಚಪ್ಪನವರ ದೇಹ ಆರೋಗ್ಯ ಪೂರ್ಣವಾಗಿ ಬೆಳೆಯುವಂತೆ ನೋಡಿಕೊಂಡ ದುಂಡಪ್ಪ ಕೂಡ ಕೆಂಚಪ್ಪನವರ ಬದುಕನ್ನು ಅರ್ಥಪೂರ್ಣವಾಗಿ ರೂಪಿಸಿದವರಲ್ಲಿ ಒಬ್ಬರು 'A Sound mind in a Sound body' ಎಂಬ ಸೂಕ್ತಿಯನ್ನು ದುಂಡಪ್ಪ ಚೆನ್ನಾಗಿ ತಿಳಿದವರಾಗಿದ್ದಿರಬೇಕು. ಆಟಗಳಲ್ಲಿ ಅವರು ಗೆದ್ದಂತೆಯೇ ಎಂ.ಎ. ಎಲ್.ಎಲ್.ಬಿ. ಗಳನ್ನೂ ಗೆದ್ದರು. ಈ ಕೆಂಚಪ್ಪ ಹದಗೊಂಡ ಎಂ.ಎ.ಎಲ್.ಎಲ್.ಬಿ.

ಡಬಲ್ ಗ್ರ್ಯಾಜುಯೇಟ್ ಆದ ವ್ಯಕ್ತಿ. 1930ರ ಹೊತ್ತಿಗೆ ಬಿ.ಎ. ಮಾಡಿದರೂ ಹಳ್ಳಿಗಳಲ್ಲಿ ದೊಡ್ಡ ಮೆರವಣಿಗೆಯನ್ನೇ ಮಾಡಿಬಿಡುತ್ತಿದ್ದರು. ಹಳ್ಳಿಗೆ ಬಹಳವೆಂದರೆ ಒಬ್ಬರೋ ಇಬ್ಬರೋ ಪದವಿ ಪಡೆಯುತ್ತಿದ್ದದ್ದು ಅಪರೂಪವೇ. ಅಂಥಾ ಅನಕ್ಷರಸ್ಥ ಹಳ್ಳಿಗೆ ಇಂಥಾ ಒಬ್ಬನೋ ಇಬ್ಬರೋ ಪದವಿಗಳಿಸಿದರೆ ಅದೊಂದು ಆ ಹಳ್ಳಿಗೇ ಬಂದ ಕೀರ್ತಿ. ಅದೊಂದು ಹಳ್ಳಿಯ ಭಾಗ್ಯವೆಂದೇ ಪರಿಗಣಿಸಲಾಗುತ್ತಿತ್ತು.

ಅಂತೂ ಕಡು ಬಡತನದಲ್ಲೇ ಹೆರವರ ಪ್ರೀತಿಪಾತ್ರ, ಎದೆ ತುಂಬಿದ ಸಹಕಾರ ಹಾಗೂ ತಮ್ಮ ಪ್ರಾಮಾಣಿಕ ಶ್ರದ್ದೆಯಿಂದ ಮೇಲೆರುತ್ತಾ ಹೋದ ಕೆಂಚಪ್ಪನವರು ವಿದ್ಯೆಯ ಮಟ್ಟಿಗೆ ಒಂದು ತಾತ್ಕಾಲಿಕ ನಿಲುಗಡೆಯನ್ನು ತಲುಪಿದ್ದರು. ಈ ದಿಕ್ಕಿನಲ್ಲಿ ಹರಿಹರಪ್ಪನವರು, ಸಿದ್ದೋಜಿರಾಯರು, ಸುಬ್ಬರಾಯರು, ಇಂಥ ಮಹನೀಯರು ಅವರ ವ್ಯಕ್ತಿತ್ವ ರೂಪಿಸುವುದರ ನೆರವಾದವರು. ಕೆಂಚಪ್ಪ ತಮ್ಮ ಓದಿನ ಹಸಿವನ್ನು ಹಿಂಗಿಸಿಕೊಳ್ಳುವಲ್ಲಿ ಈ ಎಲ್ಲ ನೆರವನ್ನೂ ಸಂಕೋಚದಿಂದಲೇ ಪಡೆದವರು. ಈ ಎಲ್ಲ ಓದಿನಿಂದ ಅವರು ಬರೀ ಡಿಗ್ರಿಗಳನ್ನಷ್ಟೇ ಪಡೆಯಲಿಲ್ಲ. ಅದರಿಂದ ಏನೆಲ್ಲವನ್ನು ಕಲಿಯಬಹುದೋ ಅದೆಲ್ಲವನ್ನೂ ಕಲಿತರು. ಅವರ ಆರ್ಥಿಕ ಒಳನೋಟಗಳು, ರಾಜಕೀಯ ತಿಳುವಳಿಕೆಗಳು, ಕಾನೂನಿನ ಧಾರ್ಮಿಕ ಆಯಾಮಗಳು ಲಭ್ಯವಾದದ್ದು ಇಂಥದರಿಂದಲೇ. ಔಪಚಾರಿಕ ಶಿಕ್ಷಣ ಒಂದು ವ್ಯಕ್ತಿಗೆ ನೆಪ ಮಾತ್ರ. ಆದರೆ ಅದರ ಸದ್ಬಳಕೆಯಿಂದ ಅಸಾಧ್ಯ ಲೋಕಾನುಭವನ್ನು ಪಡೆಯುವ ವ್ಯಕ್ತಿತ್ವಕ್ಕೆ ಆಕಾಶದಷ್ಟು ವಿಸ್ತಾರ, ಸಾಗರದಷ್ಟು ಆಳ ಲಭ್ಯವಾಗುತ್ತದೆ. ಮುಂದೆ ಅವರು ವಕೀಲರಾಗಿ, ರಾಜಕೀಯ ಸ್ವಾತಂತ್ರ್ಯ ಹೋರಾಟಗಾರರಾಗಿ, ರಾಜಕಾರಣಿಯಾಗಿ, ಆಧ್ಯಾತ್ಮವಾದಿಯಾಗಿ ಸಾಧಿಸುವುದಕ್ಕೆ ಈ ತಿಳುವಳಿಕೆ ಅವರಿಗೆ ಅಡಿಗಲ್ಲಾಗಿ ರೂಪುಗೊಳ್ಳುತ್ತದೆ. ವಿಕಾಸದ ಹಾದಿ ಕಷ್ಟಮಯವಾದರೂ ಅದರ ತುದಿ ಯಾವಾಗಲೂ ಭರವಸೆಯನ್ನು ನೀಡುವಂಥದು. ಆ ಭರವಸೆಗೆ ನೀರೆರೆದವರು ಈ ಕೆಂಚಪ್ಪನವರು.

* * * * *

# ವಕೀಲ ಕೆಂಚಪ್ಪ

ಚಿತ್ರದುರ್ಗದಲ್ಲಿ ಅವರು ವಕೀಲಿ ವೃತ್ತಿಯನ್ನು ಪ್ರಾರಂಭಿಸುವುದು 'ಮಹಾಭಾರತ' ಮಹಾಕಾವ್ಯದ ಗ್ರಂಥವನ್ನು ಪೂಜಿಸುವುದರೊಂದಿಗೆ. ಅದೊಂದು ಸಾಂಕೇತಿಕವೂ ಆಗಿದ್ದೀತು. ವಕೀಲರು ಎಂದರೆ ಅದೊಂದು ಮಹಾಭಾರತವೇ ಅಲ್ಲವೆ. ಮತ್ಸರ, ಸೇಡು, ಜಗಳಗಳ ಆ ಮಹಾಕಾವ್ಯ ಇವತ್ತಿಗೂ ನಮ್ಮೊಳಗೆ ಇರುವಂಥದೂ ಹೌದು. ಸಂಚಲನವನ್ನುಂಟು ಮಾಡುವಂಥದೂ ಹೌದು. ಅದೇ ಅವರ ವೃತ್ತಿಯ ನಾಂದಿಗೆ ಪೂಜಾ ವಸ್ತುವಾಗುವುದು ಸಾಂಕೇತಿಕವೇ ಎನ್ನುವುದರಲ್ಲಿ ಸಂಶಯವೇ ಇಲ್ಲ. ಕೆಂಚಪ್ಪನವರ ಒಳಪ್ರಜ್ಞೆಯನ್ನು ನಾವು ಶ್ಲಾಘಿಸಬೇಕು. ಅವರ ಬದುಕೂ ಒಂದು ಕುರುಕ್ಷೇತ್ರದಂತೆಯೇ ಇರುವುದನ್ನು ನಾವು ಅವರ ಬದುಕಿನುದ್ದಕ್ಕೂ ಕಾಣಬಹುದು.

ಮೇಲು ಜಾತಿಯವರೇ ತುಂಬಿದ್ದ ನ್ಯಾಯ ಸ್ಥಾನಗಳಲ್ಲಿ ಬ್ರಾಹ್ಮಣೇತರ, ಲಿಂಗಾಯಿತ್ತೇರ ಏಕೈಕ ವಕೀಲರೆಂದರೆ ಆಗಿನ ಕಾಲಕ್ಕೆ ಕೆಂಚಪ್ಪನವರೊಬ್ಬರೇ. ಜಾತಿ ವ್ಯವಸ್ಥೆಯ ಕಪಿಮುಷ್ಠಿಯಿಂದ ಆಗ ವಿದ್ಯಾವಂತರೂ ಹೊರಬಂದಿರಲಿಲ್ಲ. ಅಕ್ಷರ ಕಲಿತಿದ್ದರೂ ಅದರಿಂದ ಅವರಿಗೆ ಮುಕ್ತಿ ದೊರಕಿರಲಿಲ್ಲ. ನಮ್ಮ ಮುತ್ಸದ್ದಿ ರಾಜಕಾರಣಿಯಾದ ಶ್ರೀ ಕೆ.ಎಚ್. ರಂಗನಾಥರು ಒಂದು ವಿಚಾರವನ್ನು ನನಗೆ ತಿಳಿಸಿದರು. ಆಗ ಉತ್ತಮ ಜಾತಿಯ ವಕೀಲರು ಕೂಡುತ್ತಿದ್ದ ಕೊಠಡಿಯೊಳಗೆ ಅನ್ಯಜಾತಿಯವರು ಕೂಡುವಂತಿರಲಿಲ್ಲವಂತೆ. ಕೆಂಚಪ್ಪ ಅದನ್ನು ಪ್ರತಿಭಟಿಸಿದರು. ಪ್ರತಿ ದಿನವೂ ಕೊಠಡಿಯ ಹೊರ ಗೋಡೆಗೆ ತಗುಲಿಹಾಕಿದ್ದ ಉತ್ತಮ ಜಾತಿಯ ಬೋರ್ಡನ್ನು ಕಿತ್ತುಹಾಕುವುದೇ ಕೆಂಚಪ್ಪನವರ ಪ್ರತಿಭಟನೆಯ ಸ್ವರೂಪ. ಇವರು ಕೀಳುವುದು ಅವರು ಹಾಕುವುದು. ಕೊನೆಗೂ ಕೆಂಚಪ್ಪ ಈ ವಿಷಯದಲ್ಲಿ ಗೆದ್ದರಂತೆ. ಇಂಥ ಪ್ರತಿಭಟನೆಯ ಶಕ್ತಿ ಊರ್ಜಿತಗೊಳ್ಳುತ್ತಾ ಹೋಗಿದ್ದರೆ ಇವತ್ತಿನ ದೇಶದ ಪರಿಸ್ಥಿತಿ ಬೇರೆಯೇ ಆಗುತ್ತಿತ್ತೋ ಏನೋ. ಗಾಂಧೀಜಮಾನದ ಈ ಆದರ್ಶಗಳೆಲ್ಲವೂ ತಲೆಕೆಳಗಾಗಿ ಇವತ್ತು ನಿಂತಿವೆ. ಜಾತಿಯ ರಾಜಕೀಯದಿಂದಾಗಿ ಕಲುಷಿತಗೊಂಡಿರುವ ಇಂದಿನ ಸಾಮಾಜಿಕ ವ್ಯವಸ್ಥೆ ಎಂದೆಂದೂ ಸರಿಹೋಗುವುದೇ ಇಲ್ಲವೇನೋ ಎಂಬ ಅನುಮಾನ ಹುಟ್ಟಿಸುತ್ತಿದೆ. ಕೆಂಚಪ್ಪ ಎಂಥಾ ಪ್ರಜ್ಞಾವಂತರೆಂದರೆ ಅವರೆಂದೂ ಜಾತಿಯ ವಿಷಯದಲ್ಲಿ ಸೋಗಲಾಡಿತನ ಮಾಡಿದವರಲ್ಲ. ತಮ್ಮ ಜಾತಿಯೇ ಕಡುಬಡತನದಲ್ಲಿದ್ದಾಗ ಆ ಜಾತಿಯ ಜನಾಂಗವನ್ನು ಉಪೇಕ್ಷಿಸಿ ಅನ್ಯಜನಾಂಗವನ್ನು ಉದ್ದಾರ ಮಾಡುವ ಆದರ್ಶ ಅವರದ್ದಾಗಿರಲಿಲ್ಲ. ತಮ್ಮವರನ್ನು ಕೂಡಿಸಿಕೊಂಡೇ ಅನ್ಯರನ್ನೂ ಬೆಳೆಸಬೇಕೆಂಬ ವಿಶಾಲ ದೃಷ್ಟಿ ಅವರದು. ಹಾಗಾಗಿ ತಮ್ಮ ಜಾತಿಯ ಜನರ ಸೌಲಭ್ಯಗಳ ಬಗ್ಗೆ ಅವರು ಅಪರಿಮಿತವಾಗಿ ಹೋರಾಡಿದ್ದಾರೆ. ತಮ್ಮ ಜಾತಿಯ ಜನಾಂಗಕ್ಕೆಂದು ವಿದ್ಯಾರ್ಥಿ ನಿಲಯ 'ಕುಂಚಿಟಿಗ' ವಿನ್ನೂ ಅವರು ಚಿತ್ರದುರ್ಗದಲ್ಲಿ ಸ್ಥಾಪಿಸಿದ್ದಾರೆ. ಅದು ಈಗಲೂ ಇದೆ. ಬೆಂಗಳೂರಲ್ಲಿ ನಡೆದ ಕೂಂಚಿಟಿಗರ ಸಮ್ಮೇಳನದಲ್ಲಿ ಕುಂಚಿಟಿಗರನ್ನು ಒಕ್ಕಲಿಗ ಜಾತಿಯಿಂದ ಬೇರ್ಪಡಿಸಬೇಕು ಎಂಬ ಬಹಳ ಜನರ ಒತ್ತಾಯವನ್ನು ಅವರು ವಿರೋಧಿಸುವ ಧೈರ್ಯವನ್ನು ಮಾಡುತ್ತಾರೆ. ಆದರೆ ಬಹುಜನರ ಬೇಡಿಕೆಯಂತೆ ಅದು ಬೇರ್ಪಡುತ್ತದೆ. ಆದರೆ ಮುಂದೆ ಕೆಂಚಪ್ಪನವರ ನಿಲುವೇ ಸರಿಯಾಗಿತ್ತೆಂದು ಆ ಬಹುಜನರೆಲ್ಲರೂ ಪಶ್ಚಾತ್ತಾಪದಿಂದ ಒಪ್ಪಿಕೊಳ್ಳುತ್ತಾರೆ.

ವಕೀಲರು ಎಂದರೆ ಕೇಸುಗಳನ್ನು ಹಿಡಿಯುವುದು, ಆಕರ್ಷಕವಾಗಿ ಮಾತಾಡುವುದು, ಕೇಸು ಗೆದ್ದು ದುಡ್ಡು ಸಂಪಾದಿಸುವುದಷ್ಟೇ ಅಲ್ಲ ಎಂಬ ಬಹು ದೊಡ್ಡ ತಿಳುವಳಿಕೆ ಕೆಂಚಪ್ಪನವರಿಗಿತ್ತು. ಅವರ ಸಮಕಾಲೀನ ವಕೀಲರಿಗಿಂತ, ಅವರ ಸಮಕಾಲೀನ ರಾಜಕಾರಣಿಗಳ ಗ್ರಹಿಕೆಗಿಂತ ಕೆಂಚಪ್ಪ ಭಿನ್ನವಾಗಿದ್ದರು. ಅವರು ಅಪ್ಪಟ ಸಮಾಜವಾದಿಯಾಗಿದ್ದರು. ಅಂದಿನ ಪಿ.ಎಸ್.ಪಿಯ ಮುಖಂಡರಾಗಿದ್ದರು. ಕಾಂಗ್ರೆಸ್ಸನ್ನು ಲೋಹಿಯಾರಂತೆ ವಿರೋಧಿಸಿ ಆದ ಪಿಎಸ್‌ಪಿಯನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಕಾಂಗ್ರೆಸ್ ರಾಜಕೀಯವನ್ನು ಅವರು ಆ ಕಾಲಕ್ಕೇ ಅಲ್ಲಗಳೆದರು. ಕಾಂಗ್ರೆಸ್ಸಿನಲ್ಲೇ ಉಳಿದಿದ್ದರೆ ಅವರು ಇತರರಂತೆ ಮಂತ್ರಿ ಮುಖ್ಯಮಂತ್ರಿಯಾಗಿ ರಾರಾಜಿಸಬಹುದಿತ್ತು. ಅಂಥಾ ಹುದ್ದೆಗಳನ್ನು ಅವರೆಂದೂ ನಿರೀಕ್ಷಿಸಲಿಲ್ಲ. ಸಮಾಜವನ್ನು ಕಟ್ಟುವ ಕೆಲಸವೇ ಹೊರತು ರಾಜಕಾರಣ ಕುರ್ಚಿಗಳನ್ನು ಗಳಿಸುವುದಲ್ಲ ಎಂಬ ವಿವೇಕ ಅವರೊಳಗೆ ಯಾವಾಗಲೂ ಕೆಲಸ ಮಾಡಿದಂತಿದೆ. ಹಾಗಾಗಿಯೇ ಅವರು ಸಮಾಜವಾದೀ ಧೋರಣೆಯನ್ನು ಮೆಚ್ಚಿ ಅದರ ಭಾಗವಾಗಿ ಪ್ರಾಮಾಣಿಕತೆಯಿಂದ ದುಡಿದಿದ್ದಾರೆ.

ಚಿತ್ರದುರ್ಗದಲ್ಲಿ ವಕೀಲಿಕೆ ಆರಂಭಿಸುವ ಮುಂಚೆ ಅವರ ಚೊಚ್ಚಲು ವಕೀಲಿಕೆ ಆರಂಭಗೊಂಡದ್ದು ಶಿವಮೊಗ್ಗೆಯಲ್ಲಿಯೇ. ಅವರಿಗೆ ಅಪಾರವಾಗಿ ನೆರವಾದ ಸಿದ್ದೋಜಿರಾಯರ ಆಸೆಯೂ ಅವರು ಶಿವಮೊಗ್ಗೆಯಲ್ಲೇ ಲಾಯರಾಗಿರಬೇಕೆಂಬುದೇ ಆಗಿತ್ತು. ಒಂದು ವರ್ಷ ಅವರ ನೆರವಿನಿಂದಲೇ ಶಿವಮೊಗ್ಗಯಲ್ಲಿ ಈ ಕೆಲಸ ಮಾಡುತ್ತಾರೆ. ಬಬ್ಬೂರು ಬಿ. ಲಿಂಗೇಗೌಡ ಒತ್ತಾಯದ ದೆಸೆಯಿಂದಾಗಿ ಅವರು ತಮ್ಮ ವೃತ್ತಿಯನ್ನು ಚಿತ್ರದುರ್ಗಕ್ಕೆ ವರ್ಗಾಯಿಸಿಕೊಳ್ಳುತ್ತಾರೆ. ಅವರು ಶಿವಮೊಗ್ಗೆಯಿಂದ ಚಿತ್ರದುರ್ಗಕ್ಕೆ ಬರುವಾಗ ಸಿದ್ದೋಜಿರಾಯರು ಪ್ರೀತಿಯಿಂದ ನೀಡಿದ ಕಂಚಿನಕೊಡ ಮತ್ತು ತಂಬಿಗೆಯನ್ನು ಅಷ್ಟೇ ಕೃತಜ್ಞತೆಯಿಂದ ಹೊತ್ತು ತರುತ್ತಾರೆ. ಚಿತ್ರದುರ್ಗ ಜಿಲ್ಲೆ ಅವರ ಕಾರ್ಯಕ್ಷೇತ್ರವಾಗುತ್ತದೆ. ಅದು ವಕೀಲಿಕೆಯ ಜೊತೆಗೆ ಸಾಮಾಜಿಕ ಸೇವೆಯ ರಂಗಸ್ಥಳವೂ ಆಗುತ್ತದೆ. ಮುಂದೆ ಅವರು ಶಾಸಕರಾಗಿ ಆಯ್ಕೆಯಾದ ಮೇಲೆ ಹೈಕೋರ್ಟಿನ ವಕೀಲರಾಗಿ ಬೆಂಗಳೂರಿನಲ್ಲಿ ಕಛೇರಿ ತೆರೆಯುತ್ತಾರೆ. ಅವರಿಗೆ ಕಿರಿಯ ಲಾಯರಾಗಿ ಶ್ರೀ ಕೆ.ಎಚ್. ರಂಗನಾಥರು ಕೆಲಸ ಮಾಡುತ್ತಾರೆ. ಬೆಂಗಳೂರಲ್ಲಿದ್ದಾಗ ಅವರು ಮೈಸೂರಲ್ಲಿದ್ದ ಕವಿ ಅಡಿಗರನ್ನು ನೋಡಲು ನಮ್ಮ ನಾಡಿನ ಖ್ಯಾತ ಚಿತ್ರಕಲಾವಿದ ಪಿ.ಆರ್. ತಿಪ್ಪೇಸ್ವಾಮಿಯವರ ನೆರವಿನಿಂದ ಹೋಗುತ್ತಾರೆ. 'ಕಟ್ಟುವೆವು ನಾವು' ಅಡಿಗರು ಬರೆದ ಕವಿತೆ. ಅದರಿಂದ ಕೆಂಚಪ್ಪ ತುಂಬಾ ಆಕರ್ಷಿತರಾಗಿದ್ದರು. ಅದಕ್ಕಾಗಿಯೇ ಅವರನ್ನು ನೋಡಲು ಮೈಸೂರಲ್ಲಿ ಜೀಶಂಪ, ಪಿ.ಆರ್.ಟಿ. ಜೊತೆ ಸೈಕಲ್ ತುಳಿದೇ ಅಡಿಗರ ನರಸಿಂಹ ರಾಜಾ ಮೊಹಲ್ಲಾದ ಮನೆಗೆ ಹೋಗುತ್ತಾರೆ. ಅವರ ಕಾವ್ಯ ಪ್ರೀತಿಯೂ ದೊಡ್ಡದೇ. ಅಡಿಗರೊಡನೆ ಒಂದೆರಡು ಗಂಟೆ ಚರ್ಚಿಸುತ್ತಾ ಕಳೆಯುವುದೇ ಅವರ ಸಾಂಸ್ಕೃತಿ ವ್ಯಕ್ತಿತ್ವವನ್ನು ತೋರುವಂಥದು. ವಕೀಲರಾಗಿ ಅವರು ಏನು ಗಳಿಸಿದರೋ ಬಿಟ್ಟರೋ; ಅವರು ಒಬ್ಬ ಸಮಾಜ ಸೇವಕನಾಗಿ ಗಳಿಸಿದ ಹೆಸರಂತೂ ಅಮರವಾದದ್ದು.

*    *    *    *    *

# ಸಮಾಜ ಸೇವೆ

ಸಮಾಜ ಸೇವೆ ಎಂಬುದು ಹುಡುಗಾಟಿಕೆಯದಲ್ಲ. ಅದೊಂದು ವ್ರತ. ತುಂಬಾ ಕ್ರಿಯಾಶೀಲನಾದ, ಪರಿಶುದ್ಧನಾದ ಮನುಷ್ಯ ಮಾತ್ರ ಸಮಾಜದ ಸೇವಕನಾಗಬಲ್ಲ. ಸ್ವಲ್ಪ ಅಳ್ಳಕ ವ್ಯಕ್ತಿತ್ವದವನಾದರೆ ಜಾರಿಬೀಳುವುದು ಖಂಡಿತಾ. ಇಂಥ ಗುಣ ತೀರಾ ಅಪರೂಪಕ್ಕೆ ಸಿಕ್ಕುವುದು ಕೆಲವರಲ್ಲಿ ಮಾತ್ರ. ಒಂದು ಕಾಲದ ಹೋರಾಟಗಾರ ದಿನಕಳೆದಂತೆ ಅಧಿಕಾರದ ಆಸೆಯಿಂದ ಕುಸಿದು ಬೀಳುವ ಸಾಧ್ಯತೆಯೇ ಹೆಚ್ಚು ಗಟ್ಟಿಯಾದ ವ್ಯಕ್ತಿತ್ವದಲ್ಲಿ ಜನರ ಬಗೆಗಿನ ಅದಮ್ಯ ಪ್ರೀತಿ, ಕಟ್ಟುವ ಕನಸು, ಶ್ರದ್ಧೆಯ ತೀವ್ರತೆ, ಧ್ಯಾನಸ್ಥ ಮನಸ್ಥಿತಿ ಇರಬಲ್ಲದು. ಗಾಂಧೀಜಿ, ಲೋಹಿಯಾ ನಮ್ಮ ಯುಗ ಕಂಡ ಅಂಥ ಶ್ರೇಷ್ಠ ವ್ಯಕ್ತಿಗಳು. ಅವರ ಹಾದಿಯನ್ನೇ ಅನುಸರಿಸಿದವರು ಕೆಂಚಪ್ಪನವರು. ವಕೀಲರಾಗಿ ಕಾರ್ಯಾರಂಭ ಮಾಡುತ್ತಿದ್ದಂತೆಯೇ ಅವರ ಸಾಮಾಜಿಕ ಕೆಲಸಗಳೂ ಪ್ರಾರಂಭಗೊಂಡವು. 1933ರಲ್ಲಿ ಚಿತ್ರದುರ್ಗದಲ್ಲಿ ಕುಂಚಿಟಿಗರ ಸಾರ್ವಜನಿಕ ವಿದ್ಯಾರ್ಥಿ ನಿಲಯವನ್ನು ಅವರು ಪ್ರಾರಂಭಿಸಿದರು. ವಾಸ್ತವದಲ್ಲಿ ಅದು ಕುಂಚಿಟಿಗ ಎಂಬ ನಾಮಧೇಯ ಹೊತ್ತಿದ್ದರೂ ಅದು ನೆಪ ಮಾತ್ರವಾಗಿತ್ತು. ಅದು ಸಾರ್ವಜನಿಕ ಹಾಸ್ಟೆಲ್ ಆದ್ದರಿಂದ ಹರಿಜನ ವಿದ್ಯಾರ್ಥಿಗಳಿಂದ ಹಿಡಿದು ಎಲ್ಲ ಜಾತಿಯವರಿಗೂ ಅಲ್ಲಿ ಪ್ರವೇಶವಿತ್ತು. ಇಲ್ಲಿ ವಸತಿ ಊಟ ಎರಡೂ ವಿದ್ಯಾರ್ಥಿಗಳಿಗೆ ಲಭ್ಯವಿದ್ದವು. ಈ ಹಾಸ್ಟೆಲ್‌ಗೆ ಬೇಕಾದ ಫಂಡ್ ಕೂಡಿಸಲು ಅವರು ತಮ್ಮ ಜಾತಿಯ ಎರಿರುವ ಹಳ್ಳಿಗಳಲ್ಲೆಲ್ಲಾ ಸುತ್ತಾಡಿದರು: ವಾಹನ ಸೌಕರ್ಯವೇ ಇಲ್ಲದ ಆ ಕಾಲದಲ್ಲಿ ಬರಿಗಾಲಲ್ಲಿ ನಡೆದು ಈ ವಂತಿಗೆ ಕೂಡಿಸುವ ಕೆಲಸ ಮಾಡಿದರು. ಅವರು ಐಮಂಗಲದಿಂದ ಬದ್ದೀಕೆರೆಯವರೆಗೆ ಬರಿಗಾಲಲ್ಲಿ ನಡೆದು ಕಾಲಿನ ತುಂಬ ಗಾಯಗಳನ್ನು ಸಂಪಾದಿಸಿದ್ದು ನೆನೆದರೆ ಗಾಂಧೀಜಿಯ ಚಂಪಾರಣ್ಯದ ನಡಿಗೆ ಜ್ಞಾಪಕಕ್ಕೆ ಬರುತ್ತದೆ. ಒಂದು ಬಾಡಿಗೆ ಮನೆಯಲ್ಲಿ ಈ ವಿದ್ಯಾರ್ಥಿ ನಿಲಯ ನಡೆಯುತ್ತಿತ್ತು. 1934ರಲ್ಲೇ ಸುಮಾರು ಮೂವತ್ತೈದು ವಿದ್ಯಾರ್ಥಿಗಳು ಅದರಲ್ಲಿ ಲಾಭ ಪಡೆದರು. ಅವರಲ್ಲಿ ಹರಿಜನರು, ವಡ್ಡರು, ಲಂಬಾಣಿ, ಕ್ಷತ್ರಿಯ, ಮುಸ್ಲಿಂ ವಿದ್ಯಾರ್ಥಿಗಳೇ ಹೆಚ್ಚು. ಅಲ್ಲಿ ಅವರು ಒಂದು ಮನೆಯಲ್ಲಿ ಹಾಸ್ಟೆಲ್‌ಗೆ ಏರ್ಪಾಟು ಮಾಡಿ ಆಮೇಲೆ ಸುಮ್ಮನೆ ಕೈಕಟ್ಟಿ ಕೂಡಲಿಲ್ಲ. ಎಷ್ಟೇ ಆದರೂ ಕೆಂಚಪ್ಪ ಇಂಥದೇ ಹಾಸ್ಟೆಲ್‌ಗಳಲ್ಲಿದ್ದು ಓದಿದವರಲ್ಲವೆ. ಓದುವ ಅವಕಾಶ ಸಿಕ್ಕದೇ ಮೈಸೂರಿನಿಂದ ಶಿವಮೊಗ್ಗೆಗೆ ಹೋದವರಲ್ಲವೆ. ಅದರ ಅನುಭವ ಇದ್ದ ಕೆಂಚಪ್ಪ ಹಾಸ್ಟೆಲ್‌ನಲ್ಲಿ ಓದಿಗೆ ಸುಗಮವಾದ ವಾತಾವರಣ ನಿರ್ಮಿಸಲು ಹೆಣಗುತ್ತಾರೆ. ಪ್ರತಿನಿತ್ಯ ಬೆಳಗಿನ ಜಾವ 4.30 ಗಂಟೆಗೆ ವಿದ್ಯಾರ್ಥಿನಿಲಯಕ್ಕೆ ಬಂದು ವಿದ್ಯಾರ್ಥಿಗಳನ್ನು ಏಳಿಸಿ ಪಾಠ ಹೇಳಿಕೊಡುವ ಪರಿಪಾಠ ಇಟ್ಟುಕೊಳ್ಳುತ್ತಾರೆ. ಇವತ್ತು ಉಪನ್ಯಾಸಕರಾದವರು ಮನೆ ಪಾಠಗಳ ಮೂಲಕ ಲಕ್ಷಾಧೀಶ್ವರರಾಗುತ್ತಿರುವ ಸಂದರ್ಭ ನೆನೆದರೆ ಕೆಂಚಪ್ಪನವರ ಈ ಫ್ರೀ ಟ್ಯೂಷನ್ ಮಹತ್ವ ಎಷ್ಟು ಎಂಬುದರ ಅರ್ಥ ನಮಗಾದೀತು. ನೈಜ ಕಾಳಜಿಯಿಲ್ಲದಿದ್ದರೆ, ಆಮಿಶಗಳು ಕಾಡುತ್ತಿದ್ದರೆ ಇಂಥ ನಿಸ್ವಾರ್ಥ ಸೇವೆ ಅಸಾಧ್ಯ. ಅರ್ಪಣೆಯ ಮನೋಭಾವದಿಂದಲೇ ಅವರು ಈ ಕೆಲಸದಲ್ಲಿ ನಿರತರಾಗಿದ್ದರು. ತಾವು ಎಷ್ಟು ಕಷ್ಟದಿಂದ ಅಧ್ಯಯನ ಮಾಡಿದ್ದರೋ ಅಷ್ಟೇ ಶ್ರದ್ಧೆಯಿಂದ ತಾವು

ಕಲಿತದ್ದನ್ನು ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು. ತಮ್ಮಂತೆಯೇ ಮುಂದಿನ ಜನಾಂಗ ನಿರ್ಮಾಣಗೊಳ್ಳಬೇಕು, ಸಮಾಜದಲ್ಲಿ ಒಂದು ಸಮತೋಲನ ಉಂಟಾಗಬೇಕು ಎಂಬ ಕಳಕಳಿಯೇ ಅವರ ಈ ಕೈಂಕರ್ಯಕ್ಕೆ ಸ್ಫೂರ್ತಿ.

ಕೆಂಚಪ್ಪನವರು ಒಂದು ವಿಷಯದಲ್ಲಂತೂ ಭಾಗ್ಯವಂತರು. ಅದು ಅವರನ್ನೇ ಆಯ್ಕೆ ಮಾಡಿಕೊಂಡು ಸಂಗಾತಿಯಾದ, ಅನಕ್ಷರಸ್ಥೆಯಾಗಿದ್ದ ಶ್ರೀಮತಿ ದೇವಮ್ಮ. ಪತ್ನಿಯಾದವಳು ಗಂಡನ ಕೆಲಸಗಳಿಗೆ ಕುಮ್ಮಕ್ಕು ನೀಡದಿದ್ದರೆ ಆ ಕೆಲಸ ಮುಂದೆ ಸಾಗುವುದು ಕಷ್ಟ. ಇಂದಿನ ಮಹಿಳೆಯರು ದೇವಮ್ಮನವರಂಥ ಅವಿದ್ಯಾವಂತ ಹೆಣ್ಣುಮಗಳ ಹೃದಯಾಂತರಾಳವನ್ನು ಅರ್ಥ ಮಾಡಿಕೊಳ್ಳುವುದು ಅವಶ್ಯಕ. ಆಧುನಿಕ ಹೆಮ್ಮಾರಿಯ ಬೆಡಗಿಗೆ ಬೆನ್ನುಬಿದ್ದಿರುವ ಇಂದಿನ ಹೆಣ್ಣು ಮಕ್ಕಳು ತಾವು ಏನನನ್ನು ಕನಸುತ್ತಿದ್ದೇವೆ, ಯಾತಕ್ಕಾಗಿ ಬದುಕುತ್ತಿದ್ದೇವೆ ಎಂಬುದರ ಪರಿವೆಯೋ ಇಲ್ಲದೆ ಬದುಕು ನಡೆಸುತ್ತಿದ್ದಾರೆ. ಗಂಡ ಒಳ್ಳೆಯ ನೌಕರಿಯಲ್ಲಿದ್ದರೆ ಅವನು ಲಂಚಕೋರನಾಗಲೇಬೇಕೆಂದು ಪಣತೊಟ್ಟೇ ಅವನನ್ನು ಲಂಚಗೂಳಿ ಪಟ್ಟಕ್ಕೆ ಏರಿಸಿರುತ್ತಾರೆ. ಇಂಥ ಗುಣದ ಹೆಣ್ಣು ಮಕ್ಕಳು ಇವತ್ತೇ ಅಂತಲ್ಲ ಚರಿತ್ರೆಯುದ್ದಕ್ಕೂ ಸಿಕ್ಕಿಯೇ ಸಿಕ್ಕುತ್ತಾರೆ. ಇಂಥವರ ದೆಸೆಯಿಂದಲೇ ಮನು ಸ್ತ್ರೀಯರ ಸ್ವಾತಂತ್ರ್ಯವನ್ನು ನಿರಾಕರಿಸಿದನೆಂದೇ ಕಾಣಿಸುತ್ತದೆ. ಆದರೆ ಮನುವಿನ ಈ ಕಾನೂನು ದೇವಮ್ಮನವರಂಥವರಿಗೆ ಅನ್ವಯವಾಗುವುದೇ ಇಲ್ಲ. ಅವರು ಕೆಂಚಪ್ಪನವರೊಂದಿಗೆ ಜೀವನ ಪರ್ಯಂತ ಎಷ್ಟು ಸಹಕರಿಸಿದರೆಂದರೆ ಚಿತ್ರದುರ್ಗದ ಕುಂಚಿಟಿಗರ ಹಾಸ್ಟೆಲ್ ಚೆನ್ನಾಗಿ ನಡೆಯುತ್ತಿದ್ದದ್ದೇ ಆದರೆ ಅದು ಈ ಸಾಧ್ವಿ ದೇವಮ್ಮನವರಿಂದಲೇ. ಕೆಂಚಪ್ಪ ತಮ್ಮ ಬದುಕಿನುದ್ದಕ್ಕೂ ದೇವಮ್ಮನವರ ಈ ಕೈಂಕರ್ಯವನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿಕೊಂಡಿದ್ದಾರೆ. ಆ ವಿದ್ಯಾರ್ಥಿ ನಿಲಯಕ್ಕಾಗಿ ತಮ್ಮ ಬಳಿ ಇರುತ್ತಿದ್ದ ಹಣ, ಮನೆಯಲ್ಲಿರುತ್ತಿದ್ದ ದಿವಸ, ಧಾನ್ಯ ಎಲ್ಲವನ್ನೂ ಕೊಟ್ಟು ಸಲಹುತ್ತಿದ್ದರಂತೆ. ಅಷ್ಟೇ ಅಲ್ಲ ಕೆಲವು ವೇಳೆ ಹಾಸ್ಟೆಲಿನ ಮಕ್ಕಳಿಗೆ ತಾವೇ ಕೈಯಾರೆ ಅಡುಗೆ ಮಾಡಿ ನೀಡುತ್ತಿದ್ದರಂತೆ. ಕರ್ನಾಟಕ ರಾಜ್ಯದ ಮಂತ್ರಿಗಳಾಗಿದ್ದ ಕೆ.ಎಚ್. ರಂಗನಾಥ್, ಬಿ.ಎಲ್. ಗೌಡ ಅವರು ಆ ತಾಯಿಯ ಕೈಯಡುಗೆ ಉಂಡೇ ಮೇಲೆ ಬಂದವರು. ಮುಂದೆ ಬಿ.ಎಲ್. ಗೌಡರು ಕೆಂಚಪ್ಪನವರ ಮಗಳು ಜಯಮ್ಮನವರನ್ನೇ ಮದುವೆಯಾಗಿ ಆ ಅವರ ಋಣ ತೀರಿಸಿದಂತೆ ಕಾಣುತ್ತದೆ. ಕೆ.ಎಚ್. ರಂಗನಾಥರು ಈಗಲೂ ಕೆಂಚಪ್ಪನವರ ಮನೆತನದ ಎಲ್ಲರ ಜೊತೆಗೂ ಸಂಪರ್ಕವಿರಿಸಿಕೊಂಡಿದ್ದಾರೆ. ಒಂದೇ ಕುಟುಂಬದಲ್ಲಿ ಬೆಳೆದವರಂತೆ ಅನ್ಯೋನ್ಯವಾಗಿದ್ದಾರೆ. ಅದೆಲ್ಲಕ್ಕೂ ಕಾರಣ ಕೆಂಚಪ್ಪ, ದೇವಮ್ಮರ ಅವ್ಯಾಜ ಮಮತೆ. ಹಾಸ್ಟೆಲಿನ ಎಲ್ಲ ಜಾತಿಯ ಮಕ್ಕಳನ್ನೂ ದೇವಮ್ಮ ಕೆಂಚಪ್ಪ ತಮ್ಮ ಸ್ವಂತ ಮಕ್ಕಳಂತೆಯೇ ನೋಡಿಕೊಂಡದ್ದರ ಫಲ ಇದು. 1921ರ ಸುಮಾರಿಗೇ ಕೆಂಚಪ್ಪ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದವರು. ಕೊನೆಯವರೆಗೂ ಅವರು ಖಾದಿಯನ್ನೇ ಬಳಸಿದರು. ಹಾಗಾಗಿ ಗಾಂಧೀಜಿಯ ಮಾದರಿದಲ್ಲೇ ಸಾಮಾಜಿಕ ಸೇವೆಯನ್ನು ಒಂದು ವ್ರತದಂತೆ ಆಚರಿಸಿಕೊಂಡು ಬಂದವರು. ಅದೊಂದು ದಿವ್ಯ ಹುಚ್ಚು 'ಕಟ್ಟುವೆವು ನಾವು ಹೊಸ ನಾಡೊಂದನ್ನು, ರಸದ ಬೀಡೊಂದನು' ಎಂಬ ಕವಿತೆಯನ್ನೂ ಅದನ್ನು ಬರೆದ ಕವಿಯನ್ನೂ ಮೆಚ್ಚಿಕೊಂಡಿದ್ದ ಕೆಂಚಪ್ಪ ಬರೀ ಅದನ್ನು ಮೆಚ್ಚಿಕೊಳ್ಳುವುದಷ್ಟಕ್ಕೇ ಸೀಮಿತರಾಗಲಿಲ್ಲ. ಅದನ್ನು ಸಾಕಾರಗೊಳಿಸಲು ಶ್ರಮಿಸಿದರು.

* * * * *

# ಹೋರಾಟಗಾರ

ಕೆಂಚಪ್ಪನವರ ಯೌವನದಲ್ಲಿ ಗಾಂಧೀಜಿಯ ದನಿ ದೇಶದೆಲ್ಲೆಡೆ ಕೇಳಿ ಬರುತ್ತಿತ್ತು. ಕಿವುಡರನ್ನು ಬಿಟ್ಟರೆ ಉಳಿದೆಲ್ಲರೂ ಆ ದನಿಯನ್ನು ಕೇಳಿಸಿಕೊಳ್ಳುತ್ತಿದ್ದರು. ಜಾಣ ಕಿವುಡರೂ ಅದನ್ನು ಕೇಳಿಸಿಕೊಂಡು ಬೇರೊಂದು ನೆಲೆಯಲ್ಲಿ ಕೆಲಸ ಮಾಡುತ್ತಿದ್ದರು. ಕೆಂಚಪ್ಪರಂತಹ ಚುರುಕು ಕಿವಿಗಳಿಗೆ ಆ ದನಿ ಬೀಳದಿರುತ್ತದೆಯೇ. ಅವರು ಗಾಂಧೀಜಿಯಿಂದ ಪ್ರಭಾವಿತರಾದರು. 1935ರ ತನಕವೂ ಅವರು ಕಾಂಗ್ರೆಸ್ಸಿನಲ್ಲಿಯೇ ಇದ್ದರು. ನಂತರ ಪ್ರಜಾ ಸೋಷಲಿಷ್ಟರಾದರು. ಇಲ್ಲಿಯೂ ಕೆಂಚಪ್ಪನವರ ಸ್ವತಂತ್ರ ನಿರ್ಧಾರವನ್ನು ನಾವು ಕಾಣಬಹುದು. ಐಡಿಯಾಲಜಿಯ ಭಿನ್ನತೆ ಅತ್ಯಂತ ಸೂಕ್ಷ್ಮ ರಾಜಕಾರಣೆಯನ್ನೂ ಚುರುಕುಗೊಳಿಸುತ್ತದೆ. ಆ ಕಾಲದ ಸುಮಾರಿಗೆ ಲೊಹಿಯಾ, ಜೆ.ಪಿ. ದಂಡವತೆ ಮುಂತಾದವರು ಗಾಂಧಿಯ ನೆಲೆಯಿಂದ ಸ್ವಲ್ಪ ಭಿನ್ನರೆನ್ನುವಂತೆ ಆಲೋಚಿಸಿದವರು. ಅವರಂತೆಯೇ ಕೆಂಚಪ್ಪ ಕೂಡ ಈ ಸೋಷಲಿಸ್ಟ್ ತೆಕ್ಕೆಗೆ ಬಂದರು. ತೀವ್ರ ತೀವ್ರಗಾಮಿ ಎನ್ನಿಸಿಕೊಳ್ಳದೆಯೂ. ರ್‍ಯಾಡಿಕಲ್ ಆದ ಬದಲಾವಣೆಯ ತುಡಿತವಿದ್ದವನಿಗೆ ಇದು ಸಹಜ. ಗಾಂಧೀಜಿ ಹೇಳಿದ್ದರ ಬಗ್ಗೆ ನಡೆದಿದ್ದರ ಬಗ್ಗೆ ಅಪಾರ ಗೌರವವನ್ನಿಟ್ಟುಕೊಂಡೂ ಅದರ ಸಾಂಪ್ರದಾಯಿಕ ಜಡತೆಯನ್ನು ಇವರೆಲ್ಲ ಅಲ್ಲಗಳೆದು ಗಾಂಧಿಗಿಂತ ಬೇರೆ ನೆಲೆಯೊಂದನ್ನು ಸಿದ್ಧಪಡಿಸಿಕೊಂಡವರು. ಹಾಗಾಗಿ ಅವರು ಕಾಂಗ್ರೆಸ್ಸಿನಲ್ಲಿದ್ದಷ್ಟು ದಿವಸವೂ ಗಾಂಧಿಯ ಅನುಯಾಯಿಯೂ ವಿಭಿನ್ನ ವ್ಯಕ್ತಿತ್ವ ರೂಢಿಸಿಕೊಂಡವರು. ಇಂಥ ರಾಜಕೀಯ ನಿಲುವುಗಳಿಂದಲೇ ಕೆಂಚಪ್ಪ ತಮ್ಮ ಹೋರಾಟವನ್ನು ರೂಪಿಸಿಕೊಂಡವರು. ರಾಜಕೀಯವಾಗಿ ಕೆಂಚಪ್ಪ ಮೈಸೂರು ಸೀಮೆಯ ಮುಂದಾಳುಗಳಲ್ಲಿ ಒಬ್ಬರು. ಇವರ ಜೊತೆ ಇವರಷ್ಟೇ ನಿಸ್ವಾರ್ಥಿ ದೊಗ್ಗನಾಳಿನ ಶ್ರೀ ಕೊಟ್ರೆ ನಂಜಪ್ಪನವರೂ ಇದ್ದರು. ಕೊಟ್ರೆ ನಂಜಪ್ಪ ಮತ್ತು ಕೆಂಚಪ್ಪ ಎಂದೂ ಜೈಲು ಸೇರಲೇಬೇಕೆಂದು ಹಟ ಹಿಡಿದು ಚಳುವಳಿ ನಡೆಸಿದವರಲ್ಲ. ಕೆಂಚಪ್ಪನವರ ಹೆಸರು ಜೈಲಿನ ಲಿಸ್ಟ್‌ಗಳಲ್ಲಿ ಸಿಕ್ಕುತ್ತೆ. ಈ ನಂಜಪ್ಪನವರ ಹೆಸರು ಕೂಡ ಅಲ್ಲಿ ಸಿಕ್ಕುವುದಿಲ್ಲ. ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು ಹೋರಾಟ ನಡೆಸಿದವರು ನಂಜಪ್ಪ ಅಕಾಲ ಮರಣಕ್ಕೀಡಾಗದಿದ್ದರೆ ಕೆಂಚಪ್ಪನವರಿಗೆ ಕೊನೆಯವರೆವಿಗೂ ಸಾಥಿ ನೀಡುತ್ತಿದ್ದರೋ ಏನೋ. ಅಂತೂ ಸೆರೆಮನೆಯ ವಾಸಕ್ಕೆ ಕೆಂಚಪ್ಪನವರೂ ಹೊರತಾಗಲಿಲ್ಲ. 1938ರಲ್ಲಿ ಮದ್ಯಪಾನ ಸತ್ಯಾಗ್ರಹದಿಂದಾಗಿ ಇವರನ್ನು ಬಂಧಿಸಿ ಹಾಸನದ ಜೈಲಿನಲ್ಲಿಡಲಾಗಿತ್ತು. ಆದರೆ ಅವೆಂದೂ ಮುಂದೆ ಸ್ವಾತಂತ್ರ್ಯ ಹೋರಾಟಗಾರರ ಫಲವಾಗಿ ಪರಿವರ್ತಿಗೊಳ್ಳುವುದಿಲ್ಲ. ಇವರಿಗೆ ತಾಮ್ರಪತ್ರ ನೀಡಲಾದ ಜಿಲ್ಲಾಧಿಕಾರಿಯನ್ನೇ ಬೇಸ್ತುಬೀಳಿಸಿ ಕಳಿಸಿಕೊಟ್ಟ ಪ್ರಸಂಗವೂ ಇದೆ. ಚಳುವಳಿಯ ಕಾಲಕ್ಕೆ ಕೆಡಕೂ ಅಷ್ಟೇ ಪ್ರಭಾವಶಾಲಿಯಾಗಿ ಕೆಲಸಮಾಡುತ್ತಿರುವುದಲ್ಲವೆ? ಚಳವಳಿಕಾರರಲ್ಲಿ ಚಾಣಾಕ್ಷರೂ ಇರುತ್ತಾರೆ. ಚಳುವಳಿಯಲ್ಲಿ ಭಾಗವಹಿಸುತ್ತಲೇ ತಮ್ಮ ಸಹ ಚಳುವಳಿಕಾರರ ಗುಟ್ಟುಗಳನ್ನು ಸರಕಾರಿ ಅಧಿಕಾರಿಗಳಿಗೆ ತಿಳಿಸುವ ಏಜೆಂಟರೂ ಆಗಿರುತ್ತಾರೆ. ಅಂಥವರು ಈಗಲೂ ಇದ್ದಾರೆ ಹಿಂದೆಯೂ ಇದ್ದರು. ಜಿಲ್ಲಾಧಿಕಾರಿಗೆ ಕೆಂಚಪ್ಪ ಕೇಳುತ್ತಾರೆ. 'ಈ ತಾಮ್ರಪತ್ರ ನನಗೇಕೆ ಕೊಡುತ್ತೀರಿ' ಅದಕ್ಕೆ ಜಿಲ್ಲಾಧಿಕಾರಿ ನೀವು

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಭೂಗತ ಕೆಲಸ ಮಾಡಿದ್ದಾಕ್ಕಾಗಿ ಎಂದಾಗ 'ನನಗಿಂತ ಹೆಚ್ಚಾಗಿ ಮತ್ತು ಚೆನ್ನಾಗಿ ಭೂಗತ ಕೆಲಸ ಮಾಡಿದವರಿದ್ದಾರೆ, ಅವರಿಗೆ ಇದು ಸಲ್ಲಬೇಕು.' ಎನ್ನುತ್ತಾರೆ ಅವರಲ್ಲಿ ಇಬ್ಬರ ಹೆಸರನ್ನೂ ಜಿಲ್ಲಾಧಿಕಾರಿಗೆ ಹೇಳುತ್ತಾರೆ. ಅವರೆಂಥ ಕೆಲಸ ಮಾಡಿದರು ಎಂದು ಜಿಲ್ಲಾಧಿಕಾರಿ ಕೇಳಲು '1939ರಿಂದ 1941ರತನಕ ನಾವು ಹೆಂಡದ ಅಂಗಡಿ ಮುಂದೆ ಪಿಕೆಟಿಂಗ್ ಮಾಡುತ್ತಿದ್ದೆವು ಪ್ರಾಣಿಗಳನ್ನು ಹೊಡೆಯುವುದಕ್ಕಿಂತಾ ಬಿರುಸಾಗಿ ಸತ್ಯಾಗ್ರಹಿಗಳನ್ನು ಹೊಡೆಸುವುದರಲ್ಲಿ ಪ್ರಸಿದ್ದರಾಗಿದ್ದವರು ಅಂದಿನ ಜಿಲ್ಲಾಧಿಕಾರಿಗಳು. ಅವರೊಂದಿಗೆ ಈ ಮಹನೀಯರು ಇಬ್ಬರೂ ಇದಕ್ಕಾಗಿ ಪಿತೂರಿ ಮಾಡಿದರು ನಾವು ಪಿಕೆಟಿಂಗ್ ಮಾಡುವಾಗ ಹೆಂಡ ಕುಡಿದವರ ಬಾಯಿಂದ ನಮ್ಮತ್ತ ಇವರು ಉಗಿಸಿದ್ದಾರೆ. ಪೋಲಿಸ್ ಪೇದೆಯಿಂದ ಎದೆಗೂ ಒದೆಸಿದ್ದಾರೆ. ಇದಕ್ಕಿಂತ ಅಂಡರ್‌ಗ್ರೌಂಡ್ ಕೆಲಸ ಏನು ಬೇಕು ಸ್ವಾಮಿ'. ಕೆಂಚಪ್ಪನವರ ಈ ಮಾತುಗಳೇ ರೂಪಕಾತ್ಮಕ ಶಕ್ತಿಯುಳ್ಳವು. ಹೀಗೆ ಪಿತೂರಿ ಮಾಡಿದ್ದವರೇ ಮುಂದೆ ಸಭ್ಯರಂತೆ ವರ್ತಿಸಿ ದೊಡ್ಡ ದೊಡ್ಡ ಹುದ್ದೆಗಳನ್ನೂ ಅಲಂಕರಿಸಬಲ್ಲವರು. ಸಮಾಜವೆನ್ನುವುದನ್ನು ತಾವು ಆಟ ಆಡಿಸುವ ವಸ್ತು ಎಂದು ತಿಳಿದ ಈ ಕುತಂತ್ರಿಗಳಿಂದಲೇ ಅದು ಕಾಲದಿಂದ ಕಾಲಕ್ಕೆ ಯಕ್ಕುಟ್ಟಿ ಹೋಗುತ್ತಿರುತ್ತದೆ. ಕಿತ್ತೂರನ್ನು ನಾಶಮಾಡಿದ ಮಲ್ಲಪ್ಪಶೆಟ್ಟಿಯ ವಂಶಸ್ಥರು ಇವರು. ಅವರಿಂದ ಮುಂದುವರಿದ ಸಂತಾನವೇ ಇಂದು, ಇಂದಿನವರ ಸಂತಾನವೇ ಮುಂದು ಈ ಸಮಾಜವನ್ನು ಹೀಗೆ ಹಾದಿತಪ್ಪಿಸುತ್ತಿರುತ್ತಾರೆ. ಅದು ಚರಿತ್ರೆಯ ವ್ಯಂಗ್ಯ.

ಸ್ವಾತಂತ್ರ್ಯ ಚಳುವಳಿ ತನ್ನ ಬಿರುಸನ್ನು ಮತ್ತಷ್ಟು ತೀವ್ರಗೊಳಿಸಿಕೊಂಡಿದ್ದು 1942 ರ ಸುಮಾರಿಗೆ, ಕ್ವಿಟ್ ಇಂಡಿಯಾ ಕರೆಯನ್ನು ಗಾಂದಿ ನೀಡಿದ ಮೇಲೆ. ಈ ಚಳುವಳಿ ಆರಂಭಗೊಳ್ಳುವ ಮುನ್ನಾದಿನ ಕೆಂಚಪ್ಪನವರನ್ನು ಅರೆಸ್ಟ್ ಮಾಡುವ ಸುದ್ದಿ ಹೇಗೋ ಏನೋ ಕೆಂಚಪ್ಪನವರಿಗೇ ತಿಳಿಯುತ್ತದೆ. ಮಧ್ಯರಾತ್ರಿಯ ಸಮಯ ಅದು. ಅಮಾವಾಸ್ಯೆಯ ಕತ್ತಲಿನಲ್ಲೇ ತಪ್ಪಿಸಿಕೊಳ್ಳಲು ತಮ್ಮ ಸೈಕಲ್ಲೇರಿ ಚಳ್ಳಕೆರೆಗೆ ಹೊರಡುತ್ತಾರೆ. ಅಲ್ಲಿ ಗೆಳೆಯ ಹರಿಹರಪ್ಪನವರು ಅಬಕಾರಿ ಇನ್‌ಸ್ಪೆಕ್ಟರಾಗಿ ಕೆಲಸ ಮಾಡುತ್ತಿದ್ದರು. ಕೆಂಚಪ್ಪ ಅವರ ಆಶ್ರಯಕ್ಕೆ ಬಿದ್ದರು. ಹರಿಹರಪ್ಪ ಸರಕಾರಿ ಅಧಿಕಾರಿ ಆದರೂ ಅವರು ಮಿತ್ರ ತಪ್ಪಿಸಿಕೊಳ್ಳಲು ಆಗ ನೆರವು ನೀಡಿದರು. ಅದು ಸ್ವಾತಂತ್ರ್ಯ ಪ್ರೇಮವೂ ಹೌದು, ಮಿತ್ರ ಪ್ರೇಮವೂ ಹೌದು. ಮತ್ತೆ ಅಲ್ಲಿಂದ ತಪ್ಪಿಸಿಕೊಂಡರು. ಆಗ ತಮ್ಮ ಬಟ್ಟೆಯನ್ನು ಕಳಚಿ ಹರಿಹರಪ್ಪನವರ ಬಟ್ಟೆ ಧರಿಸಿ ಮಾರುವೇಧಾರಿಗಳಾಗಿ ಪರಶುರಾಮಪುರ, ಕ್ಯಾದಿಗುಂಟೆ ತಲುಪಿ ಬೆಳಗಾಗುತ್ತಿದ್ದಂತೆಯೇ ಅಲ್ಲಿನ ನರಸಪ್ಪನವರ ಮನೆಯಲ್ಲಿ ತಿಂಡಿ ತಿಂದು ಮತ್ತೆ ತಮ್ಮ ಪ್ರಯಾಣ ಮುಂದುವರಿಸಿದರು. ಅಲ್ಲಿಂದ ಅವರು ಬಸ್ಸಿನ ಮೂಲಕ ಹಿಂದೂಪುರ ಸೇರಿದರು. ಆಗ ಹಿಂದೂಪುರ ಮದ್ರಾಸ್ ಪ್ರಾಂತಕ್ಕೆ ಸೇರಿತ್ತು. ಅಲ್ಲಿ ಮೈಸೂರು ಪೊಲೀಸರು ಏನೂ ಮಾಡುವಂತಿರಲಿಲ್ಲ. ಅಲ್ಲಿನ ಒಂದು ತೋಟದಲ್ಲಿ ಕ್ರಾಂತಿಕಾರಿಗಳ ಗುಂಪು ಸೇರಿತ್ತು. ಅಲ್ಲಿ 15 ದಿನಗಳ ಕಾಲ ಕೆಂಚಪ್ಪ ಅವರೊಡನೆ ಭೂಗತ ಚಟುವಟಿಕೆ ನಡೆಸಿದರು. ವೇಷ ಬದಲಿಸಿಕೊಂಡು ಹರಿಯಬ್ಬೆಗೆ ಬಂದು ಅಲ್ಲಿಂದ ಹಿರಿಯೂರಿನ ಬಳಿ ಇರುವ ರಂಗನಾಥಪುರ ತಲುಪಿ ಅಲ್ಲಿಂದಲೇ ಭೂಗತ ಚಳುವಳಿ ನಡೆಸಿದರು. ಕೊನೆಯ ತನಕವೂ ಅವರು ರಂಗನಾಥಪುರದಲ್ಲೇ ನೆಲೆಯೂರಿದರು. ಚಳುವಳಿ ಬಿರುಸಾದಂತೆಲ್ಲ ಇವರ ಹಿಂದೆ ಪೋಲಿಸರೂ ಚುರುಕಾಗಿದ್ದರು. ದಸ್ತಗಿರಿ ವಾರಂಟು

ಇವರ ಮೇಲಿತ್ತು. ಇವರು ತಪ್ಪಿಸಿಕೊಂಡು ಓಡಾಡುತ್ತಿದ್ದರು. ಬ್ಯಾಡಗಿ, ಹಾವೇರಿ, ಹಿರೇಕೆರೂರು, ಶಿರಾಳಕೊಪ್ಪ, ಹಾನಗಲ್ ಮುಂತಾದ ಸ್ಥಳಗಳಿಂದ ಚಳುವಳಿಗಾರರನ್ನು ಕರೆಸಿಕೊಂಡು ಕೊಟಗಿ ಈಶ್ವರಪ್ಪನವರ ತೋಟದಲ್ಲಿ ಅಡಗಿಸಿಟ್ಟು ಚಳುವಳಿ ಕೆಲಸ ಮಾಡಿಸುತ್ತಿದ್ದರು.

ಕೆಂಚಪ್ಪನವರನ್ನು ಪತ್ತೆ ಹಚ್ಚುವುದು ಅಷ್ಟು ಸುಲಭ ಇರಲಿಲ್ಲ. ಸರಕಾರಕ್ಕೆ ತಲೆನೋವಾಗಿದ್ದರು ಕೆಂಚಪ್ಪ. ಸರಕಾರ ಮಸಲತ್ತು ಮಾಡಿ ಇವರ ಷಡ್ಡಕ ಪೊಲೀಸ್ ಇನ್ಸ್‌ಸ್ಪೆಕ್ಟರ್ ಟಿ.ಎಚ್. ರಂಗಪ್ಪನವರನ್ನು ಬಿಟ್ಟಿತು. ಸಂಬಂಧದ ನೆಪದಲ್ಲಿ ಇದು ಸಾಧ್ಯವೂ ಇತ್ತು. ಆದರೆ ಕೆಂಚಪ್ಪನವರ ಪತ್ನಿ ದೇವಮ್ಮ ಬೆಳಗಿನ ಜಾವ ಮನೆಗೆ ಬಂದು ಕೆಂಚಪ್ಪನವರ ಸುಳಿವನ್ನು ಕೇಳಲು ಅವರನ್ನು ಗದರಿಸಿ 'ಇಲ್ಲಿಂದ ನೀವು ಮೊದಲು ಹೊರಡಿ' ಎಂದು ಬಿಡುತ್ತಾರೆ. ಗಂಡನ ಚಳುವಳಿಯ ಕಾರ್ಯವನ್ನು ಪತ್ನಿ ದೇವಮ್ಮ ಮನಸಾರ ಬೆಂಬಲಿಸುತ್ತಿದ್ದುದಕ್ಕೆ ಇದಕ್ಕಿಂತ ಬೇರೆ ಸಾಕ್ಷೀಬೇಕೆ.

ಕೆಂಚಪ್ಪ ಮೆಚ್ಚಿಕೊಂಡಿದ್ದ ಕೊಟ್ರೆನಂಜಪ್ಪ ಇವರ ನಾಯಕರಾಗಿದ್ದವರು. ನಂಜಪ್ಪ ಅಷ್ಟೇನೂ ವಿದ್ಯಾವಂತರಲ್ಲ. ಕೆಂಚಪ್ಪ ದೊಡ್ಡ ವಿದ್ಯೆ ಸಂಪಾದಿಸಿದ್ದವರು. ಆದರೆ ಅವರು ನಮ್ಮ ನಾಯಕ ಕೊಟ್ರೆ ನಂಜಪ್ಪನವರು ಎಂದು ತುಂಬಿದ ಅಭಿಮಾನದಿಂದ ಹೇಳುತ್ತಿದ್ದರು. ಒಂದು ದಿನ ರಾತ್ರಿ 12ರ ಸಮಯಕ್ಕೆ ನಂಜಪ್ಪ ಇವರ ಮನೆಗೆ ಬರುತ್ತಾರೆ. ದೇವಮ್ಮ ಅವರಿಗೆ ಊಟಕ್ಕೆ ಬಡಿಸುತ್ತಾರೆ. ನಂಜಪ್ಪ ನಿದ್ರೆ ಇಲ್ಲದೆ ಬಳಲಿದ್ದರು. ಅಂದು ರಾತ್ರಿ ಇಬ್ಬರೂ ಪೋಲೀಸರ ಬಲೆಗೆ ಸಿಕ್ಕು ಬೀಳುತ್ತಾರೆ. ಹೀಗೆಯೇ ಇನ್ನೊಮ್ಮೆ ಪೋಲೀಸರು ಬಂಧಿಸಲು ಬಂದಾಗ ಅವರು ಬಸ್ ಏರಿ ತಪ್ಪಿಸಿಕೊಳ್ಳಲು ನೋಡುತ್ತಾರೆ. ಪೋಲಿಸರು ಅದೇ ಬಸ್ಸ್‌ನ್ನು ಹಿಡಿಯುತ್ತಾರೆ. ಹೊಳಲ್ಕೆರೆ ಬಳಿ ಬಸ್ಸು ಬರುತ್ತಿದ್ದಂತೆಯೇ ಮೊದಲೇ ಡ್ರೈವರನಿಗೆ ಸೂಚನೆ ನೀಡಿದ್ದಂತೆ ಅವನು ಬಸ್ಸಿನ ವೇಗವನ್ನು ಕೊಂಚ ಕಡಿಮೆ ಮಾಡಿದ ತಕ್ಷಣ ಇವರು ಅದರಿಂದ ಧುಮುಕಿ ನಂಜಪ್ಪನವರ ಊರಾದ ದೊಗ್ಗನಾಳಿಗೆ ಓಡಿಹೋಗಿ ಅಲ್ಲಿಂದ ನಂಜಪ್ಪನವರನ್ನೂ ಸೇರಿಕೊಂಡು ತಪ್ಪಿಸಿಕೊಳ್ಳಲು ಪ್ರಯಾಸಪಡುತ್ತಾರೆ. ಆಗ ಅವರು ಪೋಲಿಸರ ಕಣ್ಣುತಪ್ಪಿಸಲು ಹುಲ್ಲುಬಣವೆಯಲ್ಲಿ ಬಚ್ಚಿಟ್ಟುಕೊಂಡು ಅವರ ಮುಂದೆಯೇ ಹಾದು ಹೋದ ಪೋಲೀಸರಿಂದ ತಪ್ಪಿಸಿಕೊಂಡ ಉದಾಹರಣೆಯೂ ಇದೆ.

ಕೆಂಚಪ್ಪ ಹುಟ್ಟು ಹೋರಾಟಗಾರ. ಅವರ ಕೊನೆಯ ಗಳಿಗೆಯವರೆಗೂ ಆ ಮನೋಭಾವ ಕೊಂಚವೂ ತಗ್ಗಲಿಲ್ಲ. ವ್ಯವಸ್ಥೆ ಅವರನ್ನು ಕುಸಿಯುವಂತೆ ಮಾಡಿದಾಗಲೂ ಅವರೆಂದೂ ಎದೆಗುಂದಿದವರಲ್ಲ. ಆದರೆ ತಮ್ಮೆದುರೇ ತಾವು ಕಟ್ಟಲು ಪ್ರಯತ್ನಿಸಿದ ಸೌಧ ಕುಸಿಯುತ್ತಿರುವುದನ್ನು ಕಂಡು ಬೇಸರ ಪಟ್ಟು ಕೊಂಡವರು.

* * * * *

# ವಿರೋಧ ಪಕ್ಷದ ನಾಯಕ

1935ರಲ್ಲಿ ಸೋಷಲಿಸ್ಟ್ ಪ್ರಭಾವದಿಂದಾಗಿ ಸೋಷಲಿಸ್ಟ್ ಪಾರ್ಟಿಯ ಸದಸ್ಯರಾದ ಕೆಂಚಪ್ಪನವರು. ಸರ್ವರಿಗು ಸಮಪಾಲು, ಸಮಬಾಳು ಎಂಬ ತತ್ವದಡಿ ತಮ್ಮ ತಾತ್ರಿಕ ಗ್ರಹಿಕೆಯನ್ನು ರೂಪಿಸಿಕೊಂಡವರು. ಕಾಂಗ್ರೆಸ್ಸಿನಲ್ಲಿದ್ದಾಗಲೇ ಅವರು ಪ್ರಜಾ ಪ್ರತಿನಿಧಿ ಸಭೆಗೆ ಬೇರಾವ ಅಭ್ಯರ್ಥಿಯೂ ಗಳಿಸದಷ್ಟು ಮತಗಳನ್ನು ಗಳಿಸಿ ಆಯ್ಕೆಯಾಗಿದ್ದವರು. 1935 ರಿಂದ 1952ರವರೆಗೂ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದವರು. ಈ ಅವಧಿಯಲ್ಲಿ ಅವರು ಗಾಯತ್ರಿ ಜಲಾಶಯಕ್ಕೆ ಜಯಚಾಮರಾಜ ಒಡೆಯರಿಂದ ಅಡಿಗಲ್ಲು ಹಾಕಿಸಿದರು. ಪ್ರತಿ ಹಳ್ಳಿಗೂ ರಸ್ತೆ, ಬಾವಿ, ಪ್ರಾಥಮಿಕ ಶಾಲೆ, ಐದು ಹಳ್ಳಿಗಳಿಗೆ ಒಂದರಂತೆ ಒಂದು ಪ್ರೌಢಶಾಲೆ, ಐದಾರು ಮೈಲಿಗೊಂದು ಆಸ್ಪತ್ರೆ ಇರಬೇಕೆಂಬುದು ಅವರ ಸಂಕಲ್ಪವಾಗಿತ್ತು. ಇವರ ಪ್ರಯತ್ನದಿಂದಾಗಿ ಅವರು ಇವುಗಳಲ್ಲಿ ಮಮುಕ್ಕಾಲು ಭಾಗ ಕೆಲಸವನ್ನು ಅವಧಿಯಲ್ಲೇ ಮಾಡಿ ಮುಗಿಸಿದ್ದೂ ಇದೆ. ಒಬ್ಬ ರಾಜಕಾರಣಿಯಾದವನಿಗೆ ಕನಸುಗಳಿರಬೇಕು ಅವುಗಳನ್ನು ನನಸು ಮಾಡಲು ಸತತ ಪ್ರಯತ್ನವೂ ಇರಬೇಕು. ಅದಕ್ಕೇ ಅವರು ಎಲ್ಲಿ ಸಾಧ್ಯ ಇಲ್ಲ ಎನ್ನುವಷ್ಟು ಕಡೆಗಳಲ್ಲೂ ಪ್ರಯಾಸಪಟ್ಟ ರಸ್ತೆಗಳನ್ನು ನಿರ್ಮಿಸಲು ನೆರವಾದರು. 1949-52 ರವರೆಗೆ ಇದ್ದ ಭೀಕರ ಬರಗಾಲವನ್ನು ಎದುರಿಸಲು ಖಾಯಾ ಮತ್ತು ಹಂಗಾಮಿ ಪರಿ. ಹಾರ ಕಾರ್ಯಗಳನ್ನು ಸರಕಾರದಿಂದ ಹಟ ಹಿಡಿದು ಮಾಡಿಸಿದರು. ಖಾಯಂ ಪ್ರಚಾರಕ್ಕಾಗಿಯೂ ಕೆಂಚಪ್ಪ ಶ್ರಮಿಸಿದರು. ಖಾದಿ ಬೋರ್ಡಿನ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ ಇಂದಿಗೂ ಅನುಕರಣೀಯ. ಅವರ ಖಾದಿಬೋರ್ಡಿನ ಅಧ್ಯಕ್ಷಗಿರಿಯಲ್ಲಿ ಕಾರ್ಮಿಕರಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳಷ್ಟು ಸಂಬಳ ಬರುವಂತೆ ನೋಡಿಕೊಂಡರು. 17 ಉಪ ಕೇಂದ್ರಗಳನ್ನು ಸ್ಥಾಪಿಸಿದರು. ಕೆ. ಹನುಮಂತಯ್ಯ ಇವರ ಕಾರ್ಯಸ್ಥಳಕ್ಕೆ ಭೇಟಿ ನೀಡಿ ಅವರನ್ನು ಮನಸಾರೆ ಹೊಗಳುತ್ತಾರೆ. ಇಲ್ಲಿನ ಖಾದಿ ಎಷ್ಟು ಪ್ರಸಿಧವಾಗಿತ್ತೆಂದರೆ ಬಂಗಾಳ, ಬಿಹಾರ, ಉತ್ತರಪ್ರದೇಶ, ಮಧ್ಯಪ್ರದೇಶಗಳಿಂದಲೂ ಬೇಡಿಕೆ ಇತ್ತು. ಗಾಂಧೀಜಿಯ ಗುಡಿ ಕೈಗಾರಿಕೆಯ ಪರಿಕಲ್ಪನೆಗೆತಕ್ಕಂತೆ ಕೆಂಚಪ್ಪ ಕೆಲಸ ನಿರ್ವಹಿಸಿದ್ದರ ಫಲ ಇದು. ಮುನ್ನೋಟವೇ ಇಲ್ಲದ ರಾಷ್ಟ್ರ ನಾಯಕರು ಗಾಂಧಿಯನ್ನು ಮೂಲೆಗೆ ಬಿಸಾಡಿ ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಿ ದೇಶವನ್ನು ದುಸ್ಥಿತಿಗೆ ತಂದುಬಿಟ್ಟರು. ಇಂಥ ನಾಯಕತ್ವಕ್ಕೆ ಬದಲಿಯಾಗಿ ಕೆಂಚಪ್ಪನವರಂಥವರು ನಾಯಕರಾಗಿದ್ದಿದ್ದರೆ ದೇಶದ ಕತೆಯೇ ಬೇರೆಯಾಗುತ್ತಿತ್ತು. ಇದಕ್ಕೆ ಸಂಶಯವಿಲ್ಲ. ಅವರು ವಿರೋಧ ಪಕ್ಷದ ನಾಯಕರಾದ ಮೇಲೆ ಅವರು ವಿಧಾನ ಸಭೆಯಲ್ಲಿ ಮಂಡಿಸುವ ಚರ್ಚೆಗಳಲ್ಲಿ ಇದು ಎದ್ದು ಕಾಣುತ್ತದೆ. ಒಳನೋಟ, ಮುನ್ನೋಟಗಳಿಲ್ಲದ ರಾಜಕೀಯ ನಾಯಕರ ಅನಾಯಕತ್ವದಿಂದಾಗಿ ದೇಶ ಈ ದುರಂತವನ್ನು ಎದುರಿಸಬೇಕಾಗಿರುವುದು ಕರುಣಾಜನಕವಾದದ್ದು. ಜಾಗತೀಕರಣದಂಥ ಬಲಿಷ್ಠ ಹೊಡೆತಗಳಿಂದ ಸುಧಾರಿಸಿಕೊಳ್ಳುವುದಕ್ಕೆ ಸಾಧ್ಯವೇ ಇಲ್ಲದಷ್ಟು ಕುಸಿಯುತ್ತಿರುವ ಇಂದಿನ ಹಳ್ಳಿಗಳ ಅನೇಕ ಖಾಯಿಲೆಗಳಿಗೆ ಗುಡಿಕೈಗಾರಿಕೆಗಳು, ಮದ್ದಾಗಿ ಕೆಲಸ ಮಾಡಬಲ್ಲವು. ಕೆಂಚಪ್ಪ ಅದನ್ನು ತಮ್ಮ ತಾರುಣ್ಯದಲ್ಲೇ ಮಾಡಿದ್ದಾರೆ. ರಾಜಕೀಯ ಮುತ್ಸದ್ದಿತನ ಎಂದರೆ ಮಂತ್ರಿ, ಶಾಸಕ, ಮುಖ್ಯ ಮಂತ್ರಿಯಾಗುವುದಲ್ಲ. ಶ್ರದ್ದೆಯಿಂದ ಸೇವೆ ಮಾಡುವುದು ಎಂಬ ವ್ಯಾಖ್ಯಾನವನ್ನು

ಬರೆದವರು ಈ ಕೆಂಚಪ್ಪನವರು. ಅವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಸಂದರ್ಭದಲ್ಲಿ ಅಲ್ಲಿ ಏನನ್ನು ಪ್ರತಿ ಪಾದಿಸಿದರೆಂಬುದಕ್ಕೆ ಸರಿಯಾದ ನನಗೆ ತಕ್ಷಣ ದೊರೆಯಲಿಲ್ಲ. ಆದರೆ ಆಗಿನ ದಿವಾನ, ರಾಜರ ಜಂಟಿ ಪ್ರಯತ್ನ ಸುತ್ಯರ್ಹವಾಗಿಯೇ ಇದ್ದದ್ದು ಚರಿತ್ರೆಯಿಂದ ತಿಳಿದು ಬರುತ್ತದೆ. ಅದಕ್ಕೆ ಅನುಗುಣವಾಗಿಯೇ ಕೆಂಚಪ್ಪ ಕೆಲಸ ನಿರ್ವಹಿಸಿರುತ್ತಾರೆ ಎಂಬುದನ್ನು ಯಾರೂ ಸಂಶಯಿಸಬೇಕಾಗಿಲ್ಲ. ಆದರೆ ಅವರು 1957-62 ಅವಧಿಗೆ ಹಿರಿಯೂರು ವಿಧಾನಸಭಾ ಕ್ಷೇತ್ರದಿಂದ ಆಯ್ಕೆಗೊಂಡು ಶಾಸಕರಾಗಿ ನಂತರ ವಿರೋಧ ಪಕ್ಷದ ನಾಯಕರಾಗಿ ಮಾಡಿದ ಕೆಲಸ ಅದ್ವಿತೀಯವಾದದ್ದು. ಒಬ್ಬ ನಾಯಕ ವಿಧಾನ ಸಭೆಯೊಳಗೆ ಏನು ಮಾಡಬೇಕು, ಏನು ಮಾತನಾಡಬೇಕು. ವರ್ತನೆಗಳು ಹೇಗಿರಬೇಕು. ಎಂಬುದನ್ನು ನಮ್ಮ ರಾಜಕಾರಣಿಗಳು ಅವಶ್ಯಕವಾಗಿ ಗಮನಿಸಬೇಕು. ಅದೊಂದು ಅತ್ಯಂತ ಜವಾಬ್ದಾರಿಯ ಕೆಲಸ ಎಂಬುದನ್ನೂ ಅವರು ಗಮನದಲ್ಲಿಟ್ಟುಕೊಳ್ಳಬೇಕು. ಕೆಂಚಪ್ಪ ಹಾಗೇ ಇದ್ದರು.

ವಿರೋಧ ಪಕ್ಷದ ನಾಯಕರಾಗಿ ಅವರು ಮಂಡಿಸಿದ ಚರ್ಚೆಗಳಲ್ಲಿ ಮುಟ್ಟದ ವಿಷಯಗಳೇ ಇಲ್ಲ. ವಿಧಾನ ಸಭೆಯ ನಡವಳಿಗಳಿಂದ ಹಿಡಿದು ಕೃಷಿ, ನೀರಾವರಿ, ನಗರೀಕರಣ, ವಿದ್ಯಾಭ್ಯಾಸ ಆರೋಗ್ಯ, ಕೋರ್ಟು ವ್ಯವಹಾರ, ಹಳ್ಳಿಗಳ ಸಮಸ್ಯೆ ಮುಂತಾದ ಹಲವು ಕ್ಷೇತ್ರಗಳನ್ನು ಕೂಡಿಸಿಕೊಂಡೇ ಅವರ ಮಾತುಗಳಿವೆ. ಚರ್ಚೆಯನ್ನೂ ತರ್ಕಬದ್ಧವಾಗಿ, ಅರ್ಥಪೂರ್ಣವಾಗಿ ಮಂಡಿಸುತ್ತಿದ್ದರೆಂಬುದಕ್ಕೆ ಮುಂದೆ ಆಯ್ದುಕೊಟ್ಟಿರುವ ಅವರ ಭಾಷಣಗಳು, ಚರ್ಚೆಗಳು ಉದಾಹರಣೆಯಾಗಿ ಇವೆ. ಅವುಗಳನ್ನು ಗಮನಿಸಿದರೆ ಕೆಂಚಪ್ಪನವರಿಗಿದ್ದ ತರ್ಕಶಾಸ್ತ್ರ, ಸಾಮಾನ್ಯ ಜ್ಞಾನ, ಕನ್ನಡ, ಇಂಗ್ಲೀಷ್ ಭಾಷೆಗಳ ಮೇಲಿನ ಹಿಡಿತ ಅಸಾಧಾರಣವಾದವೆಂಬುದನ್ನು ಎಂಥ ವೈರಿಯೂ ಒಪ್ಪಿಕೊಳ್ಳಬೇಕು. ಸೋಷಲಿಸ್ಟರಾಗಿದ್ದ ಕೆಂಚಪ್ಪನವರು ಸಹಜವಾಗಿಯೇ ಕೃಷಿಯ ಬಗ್ಗೆ ಆಳವಾಗಿ ಅಧ್ಯಯನ ನಡೆಸಿದವರು. ಶಿವಮೊಗ್ಗ ಜಿಲ್ಲೆಯಲ್ಲಿ ಸೋಷಲಿಸ್ಟರಿಂದಾಗಿಯೇ ಕಾಗೋಡು ಸತ್ಯಾಗ್ರಹ ನಡೆದದ್ದು ಈ ಗೇಣಿ ಪರವಾಗಿಯೇ. ಅಲ್ಲಿ ಆಳು ಒಡೆಯ ಭೇದದಲ್ಲಿ ಟೆನೆಂಟ್ ಮತ್ತು ಮಾಲೀಕನಿಗಿರುವ ಸಂಬಂಧ ವ್ಯತ್ಯಾಸಗಳನ್ನು ಕೂಲಂಕಷವಾಗಿ ವಿವರಿಸುವ ಕೆಂಚಪ್ಪನವರ ರೀತಿ ಬಡವರ ಬಗ್ಗೆ ಅವರಿಗಿದ್ದ ಕಾಳಜಿಯನ್ನು ಎತ್ತಿ ತೋರುವಂಥದು. ಆಳುವ ಪಕ್ಷಗಳು ಮಂಡಿಸುವ ಚರ್ಚೆಗಳಲ್ಲಿ ಅನೇಕ ಲೋಪದೋಷಗಳು ಇದ್ದೇ ಇರುತ್ತವೆ. ವಿರೋಧ ಪಕ್ಷ ಅವನ್ನು ಆ ಕೊರತೆಗಳನ್ನು ಎತ್ತಿ ತೋರಿಸಿ ಅವುಗಳನ್ನು ಸರಿಪಡಿಸುವ ಜವಾಬ್ದಾರಿಯನ್ನು ಪ್ರಾಮಾಣಿಕವಾಗಿ ಹೊತ್ತುಕೊಳ್ಳಬೇಕು. ಅನೇಕ ಬಾರಿ ವಿರೋಧ ಪಕ್ಷ ಆಳುವ ಪಕ್ಷದೊಂದಿಗೆ ಕೈಜೋಡಿಸಿ ಜನವಿರೋಧೀ ಶಾಸನಗಳನ್ನು ಜಾರಿಗೊಳಿಸಿರುವ ಅಪಾಯಗಳು ಚರಿತ್ರೆಯಲ್ಲಿ ದೊರಕುತ್ತವೆ. Land holding ಗೆ ಸಂಬಂಧಿಸಿದಂತೆ ಜತ್ತಿ ಸಮಿತಿ ಒಂದು ರಿಪೋರ್ಟ್ ನೀಡಿರುತ್ತದೆ. ಆ ರಿಪೋರ್ಟ್‌ಗೆ ಸಂಬಂಧಿಸಿ ಕೆಂಚಪ್ಪನವರು ಮಂಡಿಸುವ ವಾದವನ್ನು ಮುಂದೆ ರಾಜಕಾರಣಿಗಳಾಗ ಬಯಸುವವರು ಹಾಗೂ ಹಾಲೀ ರಾಜಕಾರಣಿಗಳು ಗಮನಿಸಲೇಬೇಕು. ಕನಿಷ್ಠ ಮತ್ತು ಪರಮಾವಧಿಯ ಪ್ರಮಾಣದ ಜಮೀನನ್ನೂ ಹೊಂದುವ ಸರಕಾರೀ ಧೋರಣೆಯೇ ದೋಷ ಪೂರ್ಣ ಎಂದು ವಾದಿಸುತ್ತಾ ಅದರ ಅವೈಜ್ಞಾನಿಕ ಹಂಚಿಕೆಯ ಕ್ರಮವನ್ನು ತೀಕ್ಷ್ಣವಾಗಿ ಟೀಕಿಸುತ್ತಾರೆ. ಈ ವಾದ ಮಂಡಿಸುವ ಸಂದರ್ಭದಲ್ಲಿ ಆಳುವ ಪಕ್ಷದವರೊಬ್ಬ ಪಿ.ಎಸ್.ಪಿಯ

ತತ್ವ ಏನು ಎಂದು ಲೇವಡಿಯ ಪ್ರಶ್ನೆ ಕೇಳುತ್ತಾರೆ. ಅದಕ್ಕೆ ಕೆಂಚಪ್ಪನವರ ಉತ್ತರ ಮಾರ್ಮಿಕವಾದದ್ದು. ಆ ಪಾರ್ಟಿಯ ತತ್ವದ ಪ್ರಕಾರ ಒಂದು ವ್ಯಕ್ತಿಗೆ ಕನಿಷ್ಠ ಆದಾಯ ತಿಂಗಳಿಗೆ ನೂರು ರೂಪಾಯಿ ಗರಿಷ್ಠ ಒಂದು ಸಾವಿರ ರೂಪಾಯಿ ಮೀರಬಾರದೆಂಬುದು. ಅದನ್ನು ಸ್ಪಷ್ಟಪಡಿಸಿ ದೇಶದ ಪ್ರತಿಯೊಂದು ವ್ಯಕ್ತಿಯ ಆದಾಯ ಈ ಅನುಪಾತದೊಳಗೇ ಇರಬೇಕು ಎಂದು ಹೇಳುತ್ತಾರೆ. ಸೀಲಿಂಗ್ ಲಿಮಿಟ್ ಒಬ್ಬೊಬ್ಬರಿಗೆ ಒಂದೊಂದು ರೀತಿ ಇದ್ದರೆ ಅದು ಜನತೆಗೆ ಒದಗಿಸುವ ನ್ಯಾಯ ಅಲ್ಲವೇ ಅಲ್ಲ ಎಂದು ತೀವ್ರವಾಗಿ ವಾದಿಸುತ್ತಾರೆ. ಖುಷ್ಕಿ ಮತ್ತು ತರಿ ಜಮೀನುಗಳಿಗೆ ಕಂದಾಯ ಫಿಕ್ಸ್ ಮಾಡುವಾಗ ಸರಕಾರದ ಅವೈಜ್ಞಾನಿಕ ಕ್ರಮವನ್ನೂ ಅವರು ಟೀಕಿಸುತ್ತಾರೆ. ಒಣಭೂಮಿ ನೀರಾವರಿ ಕಕ್ಷೆಗೆ ಬಂದಾಗ ಅದಕ್ಕೆ ಹಾಕುವ ಕಂದಾಯದ ಬಗ್ಗೆಯೂ ಮಾತಾಡುತ್ತಾರೆ. ಅವರಿಗೆ ರೈತರ ಕಷ್ಟ ಏನೆಂಬುದು ಚೆನ್ನಾಗಿಯೇ ಗೊತ್ತಿತ್ತು. ಸ್ವಂತ ಜಮೀನಿಲ್ಲದಿದ್ದರೂ ಯಾರದೋ ಭೂಮಿಯಲ್ಲಿ ಉಳುಮೆ ಮಾಡಿದ ಕೃಷಿ ಕಾರ್ಮಿಕನ ಕಷ್ಟವೂ ಅವರ ಅರಿವಿಗೆ ತೀರಾ ಚಿಕ್ಕಂದಿನಲ್ಲಿಯೇ ಬಂದಿತ್ತು. ಹಾಗಾಗಿ ಅವರು ಕೃಷಿಕೂಲಿಗಳ ಬಗ್ಗೆ, ಜಮೀನಿನ ಮಿತಿಯ ಬಗ್ಗೆ, ನೀರಾವರಿಯ ಬಗ್ಗೆ ಆಡುವ ಮಾತುಗಳೆಲ್ಲವೂ ಅನುಭವದಿಂದ ವೇದ್ಯವಾದಂಥದು. ನೀರಾವರಿ ಮತ್ತು ಇತರೆ ಕೃಷಿ ಭೂಮಿಯಲ್ಲಿ ಬೆಳೆದ ಬೆಳೆಯ ಅರ್ಧದಷ್ಟನ್ನು 'ಆದಾಯ' ಎಂದು ಪರಿಗಣಿಸುವ ವಿಧಾನವನ್ನೂ ಅವರು ಒಪ್ಪುವುದಿಲ್ಲ. ಒಂದು ಕುಟುಂಬಕ್ಕೆ ಅಂದರೆ ಐದು ಜನರಿರುವ ಒಂದು ಕುಟುಂಬಕ್ಕೆ 4½ ಎಕರೆ ಸೀಲಿಂಗ್ ಮಾಡಿದರೆ ಐದು ಜನಕ್ಕಿಂತ ಹೆಚ್ಚಿಗೆ ಇರುವ ಕುಟುಂಬದ ಬಗ್ಗೆ ಏನು. ಒಂದು ಕುಟುಂಬದಲ್ಲಿ ಐದು ಜನ ಇರಬಹುದು. ಇಪ್ಪತ್ತೈದು ಜನ ಇರಬಹುದು. ಇದನ್ನು ನಿರ್ಧರಿಸುವುದು ಹೇಗೆ ಎಂಬ ಪ್ರಶ್ನೆ ಎತ್ತುತ್ತಾರೆ. ಆದ್ದರಿಂದ ಸೀಲಿಂಗ್ ಎನ್ನುವುದು ಎಲ್ಲರಿಗೂ ಸಮನಾಗಿರಬೇಕೆಂದೇ ಅವರು ತಮ್ಮ ಸ್ಪಷ್ಟ ನಿಲುವನ್ನು ಮಂಡಿಸುತ್ತಾರೆ.

ಕೋರ್ಟು ಫೀ ಬಗ್ಗೆ ಅವರು ಮಾಡುವ ವಾದ ಅತ್ಯಂತ ಅಪರೂಪದ್ದು. ನ್ಯಾಯಾಂಗದ ಪರಿಕಲ್ಪನೆಗೆ ಸಂಬಂಧಿಸಿದಂತೆ ಜನತೆಗೆ ಉಚಿತ ನ್ಯಾಯ ದೊರಕಬೇಕೆಂಬುದೇ ಅವರ ಇಂಗಿತ. ಕೋರ್ಟಿಗೆ ಸ್ಟಾಂಪ್ ರೂಪದಲ್ಲಿ ಬೆಲೆಕಟ್ಟುವ ಪದ್ಧತಿಯೇ ಅವೈಜ್ಞಾನಿಕ ಅದನ್ನು ಹಿಂದಿದ್ದುದಕ್ಕಿಂತ ಜಾಸ್ತಿ ಈಗ ಮಾಡಿದರೆ ಅದು ಮತ್ತಷ್ಟು ನ್ಯಾಯವನ್ನು ಕಿತ್ತುಕೊಳ್ಳುವ ಕ್ರಮವಾಗುತ್ತದೆಂದೇ ವಾದಿಸುತ್ತಾರೆ. ಸಂಜೆ (Suit) ದಾವೆಯ ಮೌಲ್ಯ ಮತ್ತು ಫೀಜುಗಳು ಒಂದೊಂದು ಜೂಜಿನ ಕುದುರೆಯಂತೆ ಓಡುವ ರೀತಿ ಅವರಲ್ಲಿ ಅಸಮಾಧಾನವನ್ನು ಹುಟ್ಟಿಸುತ್ತೆ. ಇಲ್ಲಿ ಅವರು ಸಮಾಜವಾದೀ ನೆಲೆಯಿಂದಲೇ ಇದನ್ನು ಹೇಳುತ್ತಾರೆ. ಹೀಗೆ ಬೆಲೆಕಟ್ಟುವ, ಫೀ ನಿಗದಿ ಮಾಡುವಲ್ಲಿ ಅದು ಸಾಹುಕಾರರಿಗೆ ಉಪಯೋಗವೋ ಪ್ರತಿವಾದಿಗೆ ಉಪಯೋಗವೋ ಎಂಬ ಪ್ರಶ್ನೆಯನ್ನೂ ಎತ್ತುತ್ತಾರೆ. ಅವರು ಎಷ್ಟು ಚೆನ್ನಾಗಿ ಇದನ್ನು ಅರ್ಥಮಾಡಿಕೊಂಡಿದ್ದರೆಂಬುದಕ್ಕೆ ಒಂದು ಉದಾಹರಣೆ ನೀಡಬಹುದು. '10,000 ರೂಪಾಯಿನ ಕೇಸ್ ಹಾಕುವವನೆಂದ ಮಾತ್ರಕ್ಕೆ ಅವನು ಮನೆಯ ತುಂಬಾ ಹಣವನ್ನಿಟ್ಟುಕೊಂಡಿರುತ್ತಾನೆಯೆ?' ಒಂದು ವೇಳೆ ಸಾಹುಕಾರರೇ ಕೊಡಬೇಕೆಂದರೂ ನ್ಯಾಯ ಎನ್ನುವುದು ಲಾಭದ ದೃಷ್ಟಿಯಿಂದ ಮಾಡಿದ್ದೇದ ಎಂದೂ ಪ್ರಶ್ನಿಸುತ್ತಾರೆ. ಇಲ್ಲಿ ಅವರು

ಬಡತನ ಪರ ಅಥವಾ ಶ್ರೀಮಂತರ ವಿರೋಧ ಎಂದು ಭಾವಿಸುವುದೇ ಇಲ್ಲ. ನ್ಯಾಯ ಎನ್ನುವ ಅಮೂರ್ತ ಕಲ್ಪನೆ ಅತ್ಯಂತ ತತ್ವಶಾಸ್ತ್ರೀಯ ಮಟ್ಟದ್ದು. ಅದನ್ನು ಗ್ರಹಿಸಬೇಕಾಗಿರುವುದೂ ಅಮೂರ್ತದ ನೆಲೆಯಿಂದಲೇ ಜನರಿಗೆ ಸುಲಭವಾಗಿ ನ್ಯಾಯ ದೊರಕಬೇಕೇ ಹೊರತು ಅವರನ್ನು ಹೈರಾಣು ಮಾಡುವುದಲ್ಲ. ಜಡ್ಜ್‌ಗಳ ಬಗ್ಗೆ ಕೂಡ ಅವರ ತಕರಾರಿದೆ. ಒಳ್ಳೆಯ ಜಡ್ಜಿಗಳೂ ಇದ್ದಾರೆ ಕೆಟ್ಟ ಜಡ್ಜಿಗಳೂ ಇದ್ದಾರೆ. ಹೀಗಿದ್ದಾಗ ಸರಿಯಾದ ನ್ಯಾಯ ದೊರಕಿಸುರ ಜರಾಬ್ದಾರಿ ಶಾಸಕಾಂಗದ ಮೇಲೇ ಇದೆ ಎನ್ನುವುದು ಅವರ ನಿಲುವು. ಹೀಗೆ ಅವರು ಜಡ್ಜ್‌ಗಳ ಬಗ್ಗೆ ಹೇಳಿದ್ದು ನ್ಯಾಯಾಂಗ ನಿಂದನೆಯಾಗುತ್ತದೋ ಹೇಗೋ ಬಹುಶಃ ಇರಲಿಕ್ಕಿಲ್ಲ. ಯಾಕೆಂದರೆ ಸ್ವತಃ ಅತ್ಯುತ್ತಮ ವಕೀಲರಾಗಿದ್ದ ಕೆಂಚಪ್ಪನವರಿಗೆ ಇದು ತಿಳಿಯದ್ದೇನೂ ಅಲ್ಲ. ಜೊತೆಗೆ ನ್ಯಾಯಾಂಗ ಶೀಘ್ರ ವಿಲೇವಾರಿ ಬಗ್ಗೆ ಅಂದೇ ಅವರು ಪ್ರಶ್ನಿಸುತ್ತಾರೆ. ಅದಕ್ಕೆ ಜಡ್ಜುಗಳ ನೇಮಕ ಪ್ರಮಾಣಕ್ಕನುಗುಣವಾಗಿಲ್ಲ ಎನ್ನುವುದು ಅವರ ಆಕ್ಷೇಪ 'Justice delayed is worse than justice denied' ಎಂಬ ತತ್ವ ಅವರ ಈ ವಿಚಾರದ ಹಿಂದೆ ಕೆಲಸ ಮಾಡಿದೆ. ನ್ಯಾಯದ ಮಾರಾಟ ಸಲ್ಲದ್ದು ಎಂಬುದು ಅವರ ದೃಢ ನಿಲುವು. ಅವರು ಇಂಗ್ಲೆಂಡಿನಲ್ಲಿ ಬಡವರಿಗೆ ಸಹಾಯವಾಗುವ ಕಾನೂನುಗಳಿವೆ ಇಲ್ಲಿಯೂ ಅಂಥದೇ ಪದ್ಧತಿ ಜಾರಿಗೊಳಿಸಬೇಕು ಎಂದು ಒತ್ತಾಯಿಸುತ್ತಾರೆ. ಹೀಗೆ ಅವರು ನಿಶ್ಯಕ್ತ, ಬಡ ಜನರ ಬಗ್ಗೆ ತಮ್ಮ ಕಳಕಳಿಯನ್ನು ಕಾನೂನು ಬದ್ಧವಾಗಿ, ಹಕೊತ್ತಾಯವಾಗಿ ತೋರಿಸಿಕೊಳ್ಳುತ್ತಾರೆ.

ನೀರಾವರಿ ಬಗ್ಗೆಯಂತೂ ಅವರಿಗಿರುರ ಜ್ಞಾನ ಅಪರಿಮಿತವಾದದ್ದು. ಬಾವಿ ತೋಡಿಸುವ ಅಂದರೆ ನೀರನ್ನು ಜಮೀನುಗಳಿಗೆ ಒದಗಿಸುವ ಬಾಬ್ತು ಒಂದು ಕಾನೂನಿನ ಚರ್ಚೆಯಾಗುವಾಗ ಒಂದು ಕ್ಲಾಜ್ ಬಗ್ಗೆ ಹೇಳುವ ಅವರ ಮಾತುಗಳು ಗಮನಾರ್ಹ. ಒಂದು ಬಾವಿ ತೋಡಲು ಸರ್ಕಾರ ದುಡ್ಡುಕೊಟ್ಟರೆ ಅದಕ್ಕೆ ಕಾಂಟ್ರಿಬ್ಯೂಷನ್ ಮೊಬಲಗನ್ನೂ ತೆಗೆದುಕೊಳ್ಳಬೇಕೆಂಬ ಭಾವನೆ ಈ ಕ್ಲಾಜಿನಿಂದ ಉಂಟಾಗುತ್ತದೆ. ಬಾವಿಗೆ ಇದು ಅನ್ವಯವಾಗಕೂಡದು. ಏಕೆಂದರೆ ನೀರನ್ನು ಎತ್ತಿ ಸಾಗುವಳಿ ಮಾಡುವುದರಿಂದ ಇದು ಅನ್ವಯವಾಗಕೂಡದು ಎಂದೇ ವಾದಿಸುತ್ತಾರೆ. 'Irrigation work' ಇದರ ಡೆಫಿನಿಷನ್ ಬಗ್ಗೆ ಹೇಳುತ್ತಾರೆ. ಒಂದು ಕ್ಲಾಜಿನಲ್ಲಿ ಪದಗಳ ಬಳಕೆ ಅನಿರ್ದಿಷ್ಟವಾಗಿರಬಾರದು. ಅದರೊಳಗೆ ಬಳಸಿರುವ ಬಾವಿ, ತಲಪರಿಗೆ ಶಬ್ದಗಳನ್ನು ತೆಗೆದು ಹಾಕಬೇಕು ಎಂದೂ ಒತ್ತಾಯಿಸುತ್ತಾರೆ. ಅವರಿಗೆ ಮಾತುಗಳನ್ನು ಹೇಗೆ ಬಳಸಬೇಕೆಂಬ ಪರಿಜ್ಞಾನ ಸ್ಪಷ್ಟವಾಗಿಯೇ ಇದೆ. ಇದಕ್ಕೆ ಸಂಬಂಧಿಸಿದಂತೆ ಬೇರೊಂದು ಉದಾಹರಣೆ ನೀಡುವುದಾದರೆ ಅವರು 'Logic' ಬಗೆ ಹೇಳುವುದನ್ನು ಗಮನಿಸಬೇಕು. ಅವರು ತರ್ಕಶಾಸ್ತ್ರವನ್ನು ಚೆನ್ನಾಗಿಯೇ ಅಧ್ಯಯನ ಮಾಡಿದ್ದರೆಂದು ತೋರುತ್ತದೆ. ಈಗಿನ ರಾಜಕಾರಣಿಗಳನೇಕರಿಗೆ ಆ ಶಬ್ದವೇ ಗೊತ್ತಿಲ್ಲ. ಶಬ್ದ ಗೊತ್ತಿದ್ದರೂ ಅದರ ಅರ್ಥವಂತೂ ಗೊತ್ತಿರುವುದಿಲ್ಲ. ಗೊತ್ತಿದ್ದರೂ ಅದು ತಪ್ಪಾಗಿ ಗೊತ್ತಿರುತ್ತದೆ. ತರ್ಕವೆಂದರೆ ವಾದ ಮಾಡುವುದು, ಜಗಳ ಮಾಡುವುದೆಂದೇ ಅವರೆಲ್ಲ ತಪ್ಪಾಗಿ ಅರ್ಥೈಸಿಯಾರು. ಆದರೆ ಕೆಂಚಪ್ಪ ಶಾಸ್ತ್ರೋಕ್ತವಾಗಿ ಅದನ್ನು ಕಲಿತವರಾಗಿದ್ದರು. ವಾಸ್ತವವಾಗಿ

Logic ವಿಚಾರ ಮತ್ತು ವಿಚಾರವನ್ನು ಮತ್ತೊಬ್ಬರಿಗೆ ಹೇಳುವ ವಾಹಕವಾದ ಭಾಷೆಯ ಬಗ್ಗೆ ಅಧ್ಯಯನ ಮಾಡುವ ಶಾಸ್ತ್ರ. ಅದಕ್ಕಾಗಿ ಅದು ಕೆಲವು ತತ್ವಗಳನ್ನು ರೂಪಿಸಿರುತ್ತದೆ. ಕೆಂಚಪ್ಪನವರಿಗೆ ಅದು ಗೊತ್ತಿತ್ತು. 'ಅವರು ಹೇಳುವ ಈ ಮಾತುಗಳನ್ನು ನೋಡಿ According to the principles of Logic, when we define a word it should have true sense, so that it can have a correct meaning have you used or detained the words corectly? it is logic and reason that convince a person logic has not been the Criterian in defining words in this bill' ಇವೆಲ್ಲ ಅವರಿಗಿದ್ದ ವೈಚಾರಿಕ ಸ್ಪಷ್ಟತೆಯನ್ನೂ, ಅದನ್ನು ಅಭಿವ್ಯಕ್ತಿಸುವ ಭಾಷೆಯ ಬಗ್ಗೆ ಇದ್ದ ಅವರ ಪ್ರೌಢಿಮೆಯನ್ನೂ ಎತ್ತಿ ತೋರಿಸುವಂಥವು. ರಾಷ್ಟ್ರಮಟ್ಟದಲ್ಲಿ ಲೋಹಿಯಾ ಈ ರೀತಿಯ ರಾಜಕಾರಣಿಯಾಗಿದ್ದವರು. ಅವರು ಮೌಲ್ಯಯುಕ್ತವಾದ ಅನೇಕ ಗ್ರಂಥಗಳನ್ನು ರಚಿಸಿದರು. 'ಪುಸ್ತಕ ವಿಮುಖತೆ ರಾಜಕಾರಣಿಗಳ ಶತ್ರು' ಎಂದೇ ಸಾರಿದವರು. ಕೆಂಚಪ್ಪನವರು ಹಾಗೆ ಗ್ರಂಥಗಳನ್ನು ರಚಿಸಿದವರಲ್ಲವಾದರೂ ಅವರ ಚಿಂತನೆ ಪ್ರೌಢ ನೆಲೆಯನ್ನು ಅನೇಕ ಸಮಾಜವಾದೀ ರಾಜಕಾರಣಿಗಳಲ್ಲಿ ಇಂಥ ಗುಣವನ್ನು ಕಾಣಬಹುದು. ನಮ್ಮ ಕಾಲದ ಜೆ.ಎಚ್. ಪಟೇಲ್, ಬಂಗಾರಪ್ಪ, ಎಂ.ಪಿ. ಪ್ರಕಾಶ್ ಈ ದೃಷ್ಟಿಯಿಂದ ಮುಖ್ಯರಾದವರು. ಕೆಂಚಪ್ಪ ಅಗಾಧ ಓದುಗರಾಗಿದ್ದವರು. ಅವರ Favourate passtime ತತ್ವಶಾಸ್ತ್ರವನ್ನು ಆಳವಾಗಿ, ಅಧ್ಯಯನ ಮಾಡುವುದು, ಅರ್ಥಶಾಸ್ತ್ರವನ್ನು ಅಧ್ಯಯನ ಮಾಡುವುದು ಎಂದೇ ದಾಖಲಾಗಿದೆ. ಕಾಲಕಳೆಯಲು ಸಾಮಾನ್ಯವಾಗಿ ನಾವೆಲ್ಲಾ ಮಾಡುವುದು ಕತೆ, ಕಾದಂಬರಿಗಳನ್ನೂ ಓದುವುದು ಈ ವ್ಯತ್ಯಾಸವೇ ಕೆಂಚಪ್ಪನವರ ಗಾಂಭೀರ್ಯವನ್ನು ನಮ್ಮೆದುರು ತೆರೆದಿಡಬಲ್ಲದು. ಅವರ ಹವ್ಯಾಸದಲ್ಲಿ ತೋಟಗಾರಿಕೆ, ವ್ಯಾಯಾಮ, ಮತ್ತು ಹಸುಗಳನ್ನು ಸಾಕುವುದು ಎಂದಿದೆ. ಇನ್ನೂ ಅಪರೂಪಕ್ಕೆ ವಿಶೇಷ ಆಸಕ್ತಿಗಳೆಂದರೆ ಸಹಕಾರೀ ಚಳುವಳಿ, ಗ್ರಾಮೀಣ ಕೈಗಾರಿಕೆ, ಸ್ಥಳೀಯ ಸಂಸ್ಥೆಗಳು ಎಂದಿದೆ. ಇವೆಲ್ಲ ಬೇರೆ ಬೇರೆಯಾದವುಗಳಲ್ಲ. ಅವರ ತತ್ವಶಾಸ್ತ್ರ, ಅರ್ಥಶಾಸ್ತ್ರ ಅಧ್ಯಯನ ಚಿಂತನೆಯ ಭಾಗಗಳಾದರೆ ಆ ಚಿಂತನೆಗನುಗುಣವಾಗಿಯೇ ಅವರ ವಿಶೇಷ ಆಸಕ್ತಿಗಳು ರೂಪುಗೊಂಡಿವೆ. ಇವೆಲ್ಲ ಒಬ್ಬ ವ್ಯಕ್ತಿಯಲ್ಲಿ ಕ್ರೋಢೀಕರಣವಾಗಿದ್ದರೆ ಅವನ ದೇಹ ಸದೃಢವಾಗಿರಬೇಕು, ಮನಸ್ಸು ಪ್ರಫುಲ್ಲವಾಗಿರಬೇಕು ಅದಕ್ಕೆ ಅವರ ಹವ್ಯಾಸಗಳು ಸಹಕರಿಸಿದೆ.

ಇಷ್ಟೆಲ್ಲ ಇರುವ ಕೆಂಚಪ್ಪನವರು ಬಿಗಿ ಮುಖದ, ಗಾಂಭೀರ್ಯದ, ಒಂಚೂರೂ ನಗದ ವ್ಯಕ್ತಿತ್ವದವರಲ್ಲ. ಅವರ ಭಾಷಣ, ಚರ್ಚೆಗಳನ್ನು ಗಮನಿಸಿದರೆ ಇದು ನಮ್ಮ ಅರಿವಿಗೆ ಬರುತ್ತದೆ. ಭಾಷಣ, ಚರ್ಚೆಗಳಲ್ಲಿ ಅವರು ಬಳಸುವ ದೃಷ್ಟಾಂತಗಳು ಈ ರೀತಿಯ ನಗು ತರಿಸುವಂಥವೇ ಆಗಿದ್ದವು. ಒಮ್ಮೆ ಒಂದು ಬಿಲ್ ಬಗ್ಗೆ ವಾದಿಸುವಾಗ ಈ ಬಿಲ್ಲು ಹೇಗಿದೆ ಎಂದರೆ ಬೇಳುಕಾಳು, ಕಾರ ಉಪ್ಪು ಹುಳಿ ಹಾಕಿ ತಿಳಿಸಾರನ್ನು ನೀಡಿದಂತಿದೆ ಎನ್ನುತ್ತಾರೆ. ನಗುವಿಗೂ ಒಂದು ಗಂಭೀರತೆ ಇದೆ ಎಂಬುದನ್ನು ಇದು ತೋರಿಸುತ್ತದೆ.

ಅವರು ವಿಧಾನ ಸಭೆಯ ಕಲಾಪಗಳ ಬಗ್ಗೆಯೂ ಆಳವಾಗಿ ತಿಳಿದು ಕೊಂಡವರಾಗಿದ್ದರು. ಸ್ಪೀಕರ್ ಸಾಮಾನ್ಯವಾಗಿ ಚರ್ಚೆಗಾಗಿ ವಿರೋಧ ಪಕ್ಷದ ಸದಸ್ಯರನ್ನು ತಮ್ಮ ಕೊಠಡಿಗೆ ಕರೆಸುವುದು ಸರ್ವೇಸಾಮಾನ್ಯ. ಆದರೆ ಕೆಂಚಪ್ಪನವರ ಪ್ರಕಾರ ಅದು ಪದೇ ಪದೇ ಆಗಬಾರದು. ಗಹನ ಮತ್ತು ಬಗೆಹರಿಸಲಾಗದ ಪ್ರಶ್ನೆಗಳಿದ್ದಾಗ ಹಾಗೆ ಮಾಡಬಹುದೆಂಬುದು ಅವರ ಅಭಿಪ್ರಾಯ. ಕಾರ್ಯಕಲಾಪಗಳನ್ನು ವೈಜ್ಞಾನಿಕವಾಗಿ ನಿಗದಿಪಡಿಸಬೇಕೆಂದೇ ಅವರು ಹೇಳುತ್ತಿದ್ದರು. ಚರ್ಚೆಗಿಟ್ಟಿರುವ ವಿಷಯದ ಆಳ ಅಗಲಗಳನ್ನು ಮನದಟ್ಟು ಮಾಡಿಕೊಂಡೇ ಕಾಲನಿಗದಿ ಸರಿಯಾದದ್ದು ಎಂದು ಅವರು ಹೇಳುತ್ತಾರೆ. ಜನರ ಹಣವನ್ನು ವ್ಯರ್ಥ ಮಾಡಬಾರದು. ವಿಧಾನ ಕಲಾಪದ ನಿಗದಿತ ಅವಧಿಯಲ್ಲೇ ಅಜೆಂಡಾದ ಎಲ್ಲಾ ಚರ್ಚೆ ಸಾಧ್ಯವಾಗಬೇಕು ಮತ್ತು ಅವು ಇತ್ಯರ್ಥವಾಗಬೇಕು ಎಂದೇ ಅವರ ಅಭಿಪ್ರಾಯ.

ಹಳ್ಳಿಗಳ ಬಗ್ಗೆ ಅವರಿಗೆ ಎಲ್ಲಿಲ್ಲದ ವ್ಯಾಮೋಹ. ಕೊಳೆಗೇರಿಯ ಬಗ್ಗೆ ಒಮ್ಮೆ ಪ್ರಶ್ನೆ ಬಂದಾಗ ಅವರು ನಗರಗಳಲ್ಲಿ ಮಾತ್ರ ಸ್ಲಂ ಇರುವುದಿಲ್ಲ ಅದು ಹಳ್ಳಿಗಳಲ್ಲೂ ಇರುತ್ತದೆ. ಎಂಬ ತಿಳಿವಳಿಕೆಯನ್ನು ಸಭೆಗೆ ಅರುಹುತ್ತಾರೆ. ಹಳ್ಳಿಗೆ ಹಳ್ಳಿಯೇ ಇವತ್ತು ಸ್ಲಂಥರ ಕಾಣಿಸುವಾಗ ಅಲ್ಲಿ ಸಂ ಬೇರೆಯಾಗಿ ಇರಲು ಇಂದು ಸಾಧ್ಯವೇ ಇಲ್ಲ. ಅರು ನಿಜ. ಆದರೆ ನಗರ ಕೇಂದ್ರಿತ ರಾಜಕಾರಣಿಗಳಿಗಿರುವ ಸ್ಲಂನಕಲ್ಪನೆಯೇ ಬೇರೆ. ಗ್ರಾಮ ಕೇಂದ್ರಿತ ರಾಜಕಾರಣಿಯಾದ ಕೆಂಚಪ್ಪನವರಿಗಿರುವ ಕಲ್ಪನೆಯೇ ಬೇರೆ. ಅದಕ್ಕೇ ಅವರು ಹಳ್ಳಿಯಲ್ಲಿರುವ, ಆಸ್ಪತ್ರೆ, ಶಾಲೆ, ಶೌಚಾಲಯಗಳ ಬಗ್ಗೆ ಗಮನ ಸೆಳೆಯುತ್ತಾರೆ. ರಸ್ತೆ ಆಸ್ಪತ್ರೆ ಶಾಲೆ ಇವು ಅಭಿವೃದ್ಧಿಯ ದೊಡ್ಡ ಸಂಕೇತಗಳು. ಅದರ ಅರಿವು ಕೆಂಚಪ್ಪನವರಿಗಿತ್ತು. ಅವರ ಭಾಷಣ, ಚರ್ಚೆಗಳಲ್ಲಿ ಇದು ಸ್ಪಷ್ಟವಾಗಿ ಅಭಿವ್ಯಕ್ತವಾಗಿದೆ.

* * * * *

# ಸಮಾಪ್ತಿ

ಅವರು ಒಮ್ಮೆ ಮಾತ್ರ ವಿಧಾನ ಸಭೆಗೆ ಆಯ್ಕೆಯಾದದ್ದು ಮತ್ತೆ. ಅವೆರೆಂದೂ ವಿಧಾನ ಸಭೆಯನ್ನು ನೋಡಲಿಲ್ಲ. ಅವರು ವಿಧಾನಸಭೆಯನ್ನು ಮತ್ತೆ ಪ್ರವೇಶಿಸದಂತೆ ತಡೆದ ಶಕ್ತಿಗಳಿಗೇನೂ ಕಡಿಮೆ ಇಲ್ಲ. ಆದರೆ ಅತ್ಯಂತ ನಿಷ್ಠಾವಂತ ರಾಜಕಾರಣಿಯಾದ ಕೆಂಚಪ್ಪನವರು ಅದಕ್ಕಾಗಿ ಹಲುಬುತ್ತಾ ಕೂಡಲಿಲ್ಲ. ಶಾಸಕ ಸ್ಥಾನ ಹೋದ ಮೇಲೂ ಅವರು ಅವರಿಗೆ ಪ್ರಿಯವಾದ ಸಮಾಜ ಸೇವೆಯಲ್ಲೇ ಉಸಿರಿರುವ ತನಕ ಉಳಿದರು.

ಅವರ ಕೊನೆಯ ದಿನಗಳು ಸಾಮಾಜಿಕವಾಗಿ ಅಷ್ಟೇನೂ ಸುಖಿಯಾದವಲ್ಲ ಎನ್ನಿಸುತ್ತದೆ. ಎಲ್ಲಾ ಪ್ರಾಮಾಣಿಕ ಜೀವಿಗಳನ್ನೂ ಕವಿಯಬಹುದಾದ ಖಿನ್ನತೆ, ಅಸಹಾಯಕತೆ, ಅವರನ್ನೂ ಕವಿದಿದ್ದಂತೆ ತೋರುತ್ತದೆ. ಅವರ ವೈಯಕ್ತಿಕ ಜೀವನ ಶಾಂತವಾಗಿದ್ದಂತೇ ತೋರುತ್ತದೆ. ಅವರ ಶ್ರೀಮತಿಯವರ ಜೊತೆ ರಂಗನಾಥಪುರದಲ್ಲಿ ತಮ್ಮ ಮಗನ ಬಳಿ ಅವರಿಗೆ ಪ್ರಿಯರಾದ ಹಸು ಸಾಕಣೆ, ಕೃಷಿ ಇತ್ಯಾದಿಗಳನ್ನು ಮಾಡಿಕೊಂಡು ನೆಮ್ಮದಿಯಾಗಿಯೇ ಇದ್ದರು. ಆದರೆ ಅವರಲ್ಲಿ ಸಾಮಾಜಿಕವಾದ ಇಳಿಮುಖ ದುಃಖ ಹುಟ್ಟಿಸಿದ್ದಂತೆ ಕಾಣುತ್ತದೆ. ತಮ್ಮ ಕಣ್ಣೆದುರೇ ಸಮಾಜ ಮತ್ತಷ್ಟು ಭ್ರಷ್ಟಗೊಳ್ಳುವುದನ್ನು ಅವರು ಸಹಿಸಿಕೊಳ್ಳುವುದು ಅಸಾಧ್ಯವಾಗಿತ್ತು. ನಮ್ಮ ನಾಡಿನ ಖ್ಯಾತ ಚಿತ್ರಕಲಾವಿದರೂ, ಚಿತ್ರದುರ್ಗ ಜಿಲ್ಲೆಯವರೂ ಆದ ದಿ| ಪಿ.ಆರ್. ತಿಪ್ಪೇಸ್ವಾಮಿಯವರು ಕೆಂಚಪ್ಪನವರ ಬಗ್ಗೆ ವರ್ಷಗಳ ಹಿಂದೆ ಕೆಂಚಪ್ಪನವರು ಬದುಕಿದ್ದಾಗಲೇ 'ಹೋರಾಟಗಾರ ಕೆಂಚಪ್ಪ' ಎಂಬ ಕಿರುಪು?ಸ್ತಕ ರಚಿಸಿದ್ದಾರೆ. ಅದಕ್ಕೆ ಡಾ|| ಹಾ.ಮಾ. ನಾಯಕರ ಮುನ್ನುಡಿಯೂ ಇದೆ. ಅದರಲ್ಲಿ ಕೆಂಚಪ್ಪ ತಮ್ಮ ಕೊನೆಗಾಲದಲ್ಲಿ ಹೇಳುವ ಮಾತುಗಳನ್ನು ದಾಕಲಿಸಿದ್ದಾರೆ. "ನಾವು ವಿಚಿತ್ರವಾದ ಕಾಲದಲ್ಲಿದ್ದೇವೆ. ನಾವೆಂದೂ ಎಣಿಸದಿದ್ದ ಘಟನೆಗಳು ದಿನ ದಿನವೂ ನಮ್ಮ ಕಣ್ಣ ಮುಂದೆ ನಡೆಯುತ್ತಿವೆ. ಎಲ್ಲ ವಿಧದಲ್ಲೂ ಹದಗೆಟ್ಟಿರುವ ಕಾಲದಲ್ಲಿ ನಾವು ಮಾನ ಮರ್ಯಾದೆ ಉಳಿಸಿಕೊಂಡು ಬಾಳುವುದು ಹೇಗೆಂಬುದೇ ತಿಳಿಯದಾಗಿದೆ. ಹೇಳುವುದೊಂದು, ಮಾಡುವುದೊಂದು. ಇದು ಇಂದಿನ ರೀತಿಯಾಗಿದೆ ಹಳಬರಾದ ನಮಗೆ ಇದಕ್ಕೆ ಹೊಂದಿಕೊಂಡು ಹೋಗುವುದು ಹೇಗೆಂದೇ ತುಂಬಾ ಯೋಚನೆಯಾಗಿದೆ" ದಟ್ಟ ವಿಷಾದದ ಮಾತುಗಳಿವು. ಅಸಹಾಯಕತೆಯ ಪರಮಾವಧಿ ಇದು. ಅವರಿಗೇ ಅವರ ಹೋರಾಟದ ಬದುಕು ವ್ಯರ್ಥವಾಯಿತಲ್ಲಾ ಎಂಬ ಸಂಕಟ ಕಾಡಿದ್ದಿರಲೂಬಹುದು. ಅದಕ್ಕೆ ತಕ್ಕ ಘಟನೆಗಳೂ ಅವರ ಮುಂದೆಯೇ ಜರುಗುತ್ತಲೇ ಇದ್ದವು. ಕಳೆದ ಶತಮಾನದ ಎಂಬತ್ತರ ದಶಕ ಅತಿ ದಾರುಣ ದಶಕವಾಗಿಯೂ ಇತ್ತು. ಕೆಂಚಪ್ಪ ಆ ದಶಕದಲ್ಲಿಯೇ ತೀರಿಕೊಂಡದ್ದು. ಅವರು ಕಣ್ಮರೆಯಾಗಿದ್ದು 2.10.1989ರಲ್ಲಿ ಎಪ್ಪತ್ತೈದರ ವಯಸ್ಸಿನಲ್ಲಿ ಅವರಾಡಿದ ಮಾತುಗಳಿವು. 80ರ ದಶಕವಂತೂ ತೀವ್ರ ಪಲ್ಲಟಗಳಿಗೆ ಒಳಗಾದ ಕಾಲ. ಆಧುನಿಕತೆಯ ಹುಚ್ಚು ವ್ಯಾಮೋಹದ ಪ್ರವಾಹದಲ್ಲಿ ಕೊಚ್ಚಿ ಹೋಗುವಂತಿದ್ದ ದುಷ್ಟಕಾಲ ಅದು. ಕೆಂಚಪ್ಪ ಇದೆಲ್ಲ ನೋಡುತ್ತಾ ಏಕಾಂಗಿತನಕ್ಕೆ ಒಳಗಾಗಿರಬಹುದು.

ಅತ್ಯಂತ ಪ್ರಾಮಾಣಿಕನಾದವ ತಾನೇ ಇಂಥ ಪರಿಸ್ಥಿತಿಯಲ್ಲಿ ತೀವ್ರ ಏಕಾಂಗಿತನಕ್ಕೆ ಈಡಾಗಿ ಬಿಡುವ ದುರಂತ ಇದು. 60ರ ದಶಕದಲ್ಲೇ ಇದರ ಪೂರ್ವ ಸೂಚನೆ ಅವರಿಗೆ ಸಿಕ್ಕಿರುತ್ತದೆ. ಅದನ್ನು ಪಿ.ಆರ್.ಟಿ. ವಿವರಿಸಿದ್ದಾರೆ. "ಕೆಂಚಪ್ಪನವರು ತಮ್ಮ ಜನಾಂಗಕ್ಕಾಗಿ, ದುಡಿಯುತ್ತಿದ್ದುದನ್ನು ಕಂಡು ಸಹಿಸದ ಜನ ಇರದಿರಲಿಲ್ಲ. ಇವರಿಗೆ ಕೀರ್ತಿ ಬರುವುದನ್ನು ತಪ್ಪಿಸಬೇಕೆಂದು ಅವರು ಎಷ್ಟೋ ಬಾರಿ ಸಂಚು ಹೂಡಿದ್ದುಂಟು. ಹಿರಿಯೂರಿನ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಸಂಬಂಧಿಸಿದ ಒಂದು ಪ್ರಸಂಗವನ್ನಿಲ್ಲಿ ಉಲ್ಲೇಖಿಸಬಹುದು. 1965ರ ಆಗಸ್ಟ್ 2 ರಂದು ಸೋಮವಾರ ಬೆಳಗ್ಗೆ ಹಿರಿಯೂರು ಪೋಲೀಸ್ ಸ್ಟೇಷನ್ನಿನ ಮುಂದೆ ಕೆಂಚಪ್ಪನವರು ರಸ್ತೆಯಲ್ಲಿ ಬರುತ್ತಿದ್ದರು. ಒಬ್ಬ ಕಾನ್‌ಸ್ಟೇಬಲ್ ಇವರನ್ನು ಠಾಣೆಗೆ" ಬರುವಂತೆ ಕರೆದ. ಠಾಣೆಯ ಬಾಗಿಲಲ್ಲಿ ಚಿತ್ರದುರ್ಗದ ಡೆಪ್ಯುಟಿ ಸೂಪರಿಂಟೆಂಡೆಂಟ್ ಇವರಿಗೆ ಹೇಳಿದರು. "ನೀವು ದೊಡ್ಡಮನುಷ್ಯರು, ಹಾಗೆಲ್ಲಾ ಮಾಡಬಾರದು" ಎಂದು 'ನೀವು ಹೇಳುವುದು ನನಗೆ ಅರ್ಥವಾಗಲಿಲ್ಲ. ಏನದು? ಎಂದರು ಕೆಂಚಪ್ಪನವರು ಅಧಿಕಾರಿಯಿಂದ ಉತ್ತರ ಬರಲಿಲ್ಲ' 'ಇವನ್ನೇನು ನೋಡುತ್ತೀಯೋ ಇಡೋ ಲಾಕಪ್ಪಿನಲ್ಲಿ' ಎಂದರು ಅವರು. 'ಏಕಪ್ಪಾ ನಾನೇನು ಮಾಡಿದ್ದೇನೆ? ವಾರಂಟಿದೆಯೇನಪ್ಪ? ಎಂದು ಕೆಂಚಪ್ಪನವರು ಕೇಳಿದರು. 'ಎಳೆದುಕೊಂಡು ಹೋಗಿ ಕೂಡಿಡಿ" ಎಂದು ಆಜ್ಞೆ ಬಂತು. ಲಾಕಪ್ಪಿನಲ್ಲಿದ್ದ ಇಬ್ಬರು ಬಂದಿಗಳನ್ನು ಹೊರಕ್ಕೆ ಬರಮಾಡಿ ಆ ಸಣ್ಣ, ದುರ್ವಾಸನೆಯ, ತಿಗಣೆಗಳ ದಂಡು ಹರಿಯುತ್ತಿದ್ದ ಕೊಠಡಿಯಲ್ಲಿ ಕೆಂಚಪ್ಪನವರನ್ನು ನೂಕಿ ಬೀಗ ಹಾಕಿದರು. ಅಲ್ಲಿ ಇವರು ಒಂದು ಗಂಟೆ ಇದ್ದ ನಂತರ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಹೊಸದುರ್ಗದ ಇನ್ನೊಬ್ಬ ಪೊಲೀಸ್ ಅಧಿಕಾರಿ ಕೆಂಚಪ್ಪನವರನ್ನು ಹೊರಗೆ ಬರಮಾಡಿಕೊಂಡರು. ಬೀದಿಯಲ್ಲಿದ್ದ ಪೊಲೀಸ್ ಜೀಪನ್ನು ಹತ್ತಿ ಎಂದರು. 'ನಾನೇನು ಮಾಡಿದ್ದೇನೆ, ವಾರಂಟಿದೆಯೇ' ಎಂದು ಮತ್ತೆ ಕೆಂಚಪ್ಪನವರು ಕೇಳಿದರು. ಇವರೇನೂ ಮಾತಾಡಲಿಲ್ಲ. ಇವರನ್ನು ಹೊಸದುರ್ಗದ ಪೊಲೀಸ್ ಠಾಣೆಗೆ ತಂದರು. ಅಲ್ಲಿ ಹಿರಿಯೂರು ತಾಲ್ಲೂಕಿನ ಒಬ್ಬ ಪರಿಚಿತರು ಪೊಲೀಸ್ ಇನ್ಸ್‌ಪೆಕ್ಟರ್ ಕೋಣೆಯಲ್ಲಿ ತಿಂಡಿ ತಿನ್ನುತ್ತಾ ಸಲ್ಲಾಪದಲ್ಲಿ ತೊಡಗಿದ್ದರು. ಕೆಂಚಪ್ಪನವರನ್ನು ಬೇರೆ ಕೋಣೆಗೆ ಕರೆದೊಯ್ದರು. ಅದು ಅತಿ ಕಿರಿದಾದುದು. ನಾಲ್ಕು ಸೀಸೆಗಳಷ್ಟಾದರೂ ಫಿನೈಲನ್ನು ಗೋಡೆ ನೆಲಕ್ಕೆ ಸುರಿದಿದ್ದರು. ಊದುಬತ್ತಿಯ ಹೊಗೆ ತುಂಬಿತ್ತು. ಅಲ್ಲಿ ಒಂದು ಗಂಟೆ ಇದ್ದರೆ. ಕೆಲವರಿಗೆ ಸಾವೇ ಬರುವಂತಿತ್ತು. ಇವರನ್ನು ಅಲ್ಲಿ ಕೂಡಿ ಹಾಕಿದರು. ಇವರನ್ನು ಹೊರಗೆ ಕರೆತಂದಾಗ ಮತ್ತೆ ಕೆಂಚಪ್ಪನವರು ಅದರೊಳಗೆ ಹೋಗಲು ನಿರಾಕರಿಸಿದರು. ಇವರನ್ನು ಬೇರೊಂದು ಕೊಠಡಿಯಲ್ಲಿಟ್ಟರು. ಕೆಂಚಪ್ಪನವರನ್ನು ಲಾಕಪ್ಪಿನಲ್ಲಿಟ್ಟಿದ್ದ ಸುದ್ದಿ ಹೊಸದುರ್ಗದ ಜನರಿಗೆ ಹೇಗೋ ತಿಳಿಯಿತು. 250 ರಿಂದ 300 ಜನರು ಸೇರಿಕೊಂಡು ಪೋಲೀಸರನ್ನು ತರಾಟೆಗೆ ತೆಗೆದುಕೊಂಡರು. ರಾತ್ರಿ 8 ಗಂಟೆ ಸುಮಾರಿಗೆ ಪೋಲೀಸರು ಮತ್ತೆ ಜೀಪಿನಲ್ಲಿ ಕೂರಿಸಿ ಹಿರಿಯೂರು ಠಾಣೆಗೆ ಕರೆ ತಂದರು. ಇವರಿಂದ ಬೆಳಗ್ಗೆ ಕಸಿದು ಕೊಂಡಿದ್ದ ಹಣವನ್ನು ಹಿಂದಕ್ಕೆ ಕೊಟ್ಟು 'ನಿಮ್ಮನ್ನು ಬಿಟ್ಟಿದ್ದೇವೆ ನೀವು ಈಗ ಹೋಗಬಹುದು' ಎಂದರು 'ನನ್ನನ್ನು ಏತಕ್ಕೆ ಖೈದು ಮಾಡಿದಿರಿ? ವಾರಂಟು ಇದ್ದರೆ

ಕೊಡಿ" ಎಂದು ಮತ್ತೆ ಕೆಂಚಪ್ಪನವರು ವಿಚಾರಿಸಿದರು. ಇದಕ್ಕೆ ಉತ್ತರವೇ ಬರಲಿಲ್ಲ" ಅವರ ಇಳಿವಯಸ್ಸಿನಲ್ಲಿ ಈ ಘಟನೆ ನಡೆದದ್ದು. ಆದರೆ ಅದು ಬ್ರಿಟಿಷ್ ಇಂಡಿಯಾದಲ್ಲಲ್ಲ. ಸ್ವತಂತ್ರ ಭಾರತದಲ್ಲಿ. ಪ್ರಜಾಪ್ರಭುತ್ವದ ದೊಡ್ಡ ಅಣಕದಂತೇ ಇದು ಭಾಸವಾಸುತ್ತದೆ. ಪೋಲೀಸರು, ರಾಜಕಾರಣಿಗಳು, ಶಾಮೀಲಾದರೆ ಸೂಕ್ಷ್ಮ ಮನುಸ್ಸುಗಳಿಗೆ ಎಂಥಾ ಆಘಾತವಾದೀತು. ಆ ಕಾಲಕ್ಕೇ ಇಂಥಾದ್ದಾದರೆ ಇಂದು ಊಹಿಸುವುದೂ ಕಷ್ಟ. ಕೆಂಚಪ್ಪನವರ ಏಕಾಂಗಿ ತನ, ಅಸಹಾಯಕತೆ ಎಂಥವನ್ನೂ ಕಣ್ಣೀರು ತರಿಸುತ್ತೆ. ಅಷ್ಟು ದೊಡ್ಡ ಹೋರಾಟಗಾರ ಕೊನೆಗೆ ನಿಶ್ಯಕ್ತನಾಗಿಬಿಡುವ ಪರಿ ಗ್ರೀಕ್ ದುರಂತ ನಾಟಕಗಳ ನಾಯಕನ ಸ್ಥಿತಿಯನ್ನು ನೆನಪಿಗೆ ತರುತ್ತದೆ. ಭಾರತದ ದುರ್ದೈವವೇ ಇಂಥದು. ಶಾಪಗ್ರಸ್ಥ ದೇಶ ಇದು ಅಂತ ಒಂದು ಕ್ಷಣ ಅನ್ನಿಸಿ ಇಡೀ ಮನಸ್ಸು ದಿವ್ಯ ಮೌನದಲ್ಲಿ ನೆಲೆಸಿಬಿಡುತ್ತದೆ. ಆದರೂ ಅವರೇನೂ ಸುಮ್ಮನಾಗಲಿಲ್ಲ. ಅದಕ್ಕಾಗಿ ಅವರು ಅಕ್ರಮ ಬಂಧನಕ್ಕಾಗಿ ಕ್ರಿಮಿನಲ್ ಮೊಕದ್ದಮೆ ಹೂಡುತ್ತಾರೆ. ಎಷ್ಟೇ ಆಗಲಿ ಹೋರಾಟಗಾರ ಅಲ್ಲವೆ ಅವರು. ಆದರೆ ಡೆಪ್ಯುಟಿ ಸೂಪರಿಂಟೆಂಡೆಂಟ್ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್‌ರ ಮೇಲೆ ಸರ್ಕಾರದ ಅನುಮತಿ ಇಲ್ಲದೆ ಮೊಕದ್ದಮೆ ನಡೆಸಲಾಗದೆಂದು ವಜಾ ಮಾಡಲಾಯಿತು. ಪಾಪದ ಕಾನ್‌ಸ್ಟೇಬಲ್‌ಗಳ ಮೇಲೆ ಕೇಸು ಮುಂದುವರಿಸುವ ಇರಾದೆ ಕೆಂಚಪ್ಪರಿಗಿರಲಿಲ್ಲ. ಅಲ್ಲಿಗೇ ಅದನ್ನು ಅವರು ಬಿಟ್ಟು ಬಿಟ್ಟರು.

ಪತ್ನಿ ದೇವಮ್ಮನವರು ತೀರಿದ ನಂತರ ಅವರ ಏಕಾಂಗಿತನ ಮತ್ತಷ್ಟು ಹೆಚ್ಚಾಯಿತು. ಅವರ ಜೀವದ ಒಂದು ಭಾಗವೇ ಆಗಿದ್ದ ಆ ತಾಯಿ ಹೋದಮೇಲೆ ಅವರು ಜರ್ಝರಿತರಾದರು. ಮಕ್ಕಳೆಲ್ಲರೂ ಒಂದು ಸ್ಥಿತಿಯಲ್ಲಿದ್ದರು. ತಮ್ಮ ಹೆಣ್ಣು ಮಕ್ಕಳಾದ ಸುಮತಿ, ಸುಶೀಲಮ್ಮ, ಜಯಮ್ಮ, ಸುನೀತಮ್ಮ, ಡಾ|| ಯಶೋಧರಮ್ಮರನ್ನು ಗಣ್ಯರಾದ ವ್ಯಕ್ತಿಗಳಿಗೇ ಮದುವೆ ಮಾಡಿಕೊಟ್ಟಿದ್ದರು. ಅವರ ಅಳಿಯ ಬಿ.ಎಲ್. ಗೌಡರು ಮಂತ್ರಿಗಳೂ ಆಗಿದ್ದು ಹೆಸರು ಮಾಡಿದವರು. ಏಕೈಕ ಪುತ್ರ ಜ್ಞಾನಪ್ರಕಾಶ್, ರಂಗನಾಥಪುರದಲ್ಲೇ ವ್ಯವಸಾಯ ಮಾಡುತ್ತಿದ್ದರು. ವೈಯಕ್ತಿಕವಾಗಿ ಕೌಟುಂಬಿಕವಾಗಿ ಅವರಿಗೆ ಅಂಥಾ ಕಷ್ಟಗಳೇನೂ ಬಂದಿರಲಿಲ್ಲ. ಆದರೆ ಅವರ ಸಾಮಾಜಿಕ ಕಳಕಳಿಯಲ್ಲಿ ಅವರು ನೋವಿಗೀಡಾಗಿದ್ದರು. ಕುಟುಂಬ ನೆಮ್ಮದಿಗಿಂತ ಸಾಮಾಜಿಕ ನೆಮ್ಮದಿ ಅವರಿಗೆ ಮುಖ್ಯವೆನಿಸಿತ್ತು. ಎಲ್ಲ ದೊಡ್ಡ ಜೀವಗಳಿಗೆ ಇದೇ ಅಲ್ಲವೆ ದೊಡ್ಡದು. ಚಿತ್ರದುರ್ಗ ಜಿಲ್ಲೆ ಕಂಡ ಅಪರೂಪದ ರಾಜಕಾರಣಿ, ಮುತ್ಸದ್ದಿ ಸಮಾಜ ಸೇವಕ ಅವರು. ಅವರ ಕಣ್ಮರೆ ಒಂದು ವ್ಯಕ್ತಿಯ ಕಣ್ಮರೆ ಅಲ್ಲ. ಅದು ಒಂದು ಮೌಲ್ಯ ಸಮೂಹದ ಕಣ್ಮರೆ.

* * * * *

ವೇಷವ ಹೊತ್ತ ಹಿರಿಯರು ಈಶ್ವರ ಧ್ಯಾನದಲಿರಬೇಕು
ವೇಷವ ತೋರಿ ಗ್ರಾಸಕ್ಕಾಗಿ ಆಸೆ ಮಾಡಿ
ಲೋಗರ ಮನೆಯ ಕಾದು, ಗ್ರಾಸವ ಪಡೆದು
ಉದರವ ಹೊರೆವ ವೇಷವು
ವೇಶಿಯಿಂದಲೂ ಕರಕಷ್ಟ ಕಾಣಾ ರಾಮನಾಥ

- ದೇವರದಾಸಿಮಯ್ಯ

# ಭಾಗ-೨

## ಕೆ. ಕೆಂಚಪ್ಪ

## ವಿಧಾನ ಸಭೆಯ ವಿಶಿಷ್ಟ ಮಾತುಗಳು

ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಗೆ ಸತ್ತುದು ಕೋಟಿ
ಗುಹೇಶ್ವರಾ ನಿಮಗಾಗಿ ಸತ್ತವರಾರನೂ ಕಾಣೆ

- ಅಲ್ಲಮ ಪ್ರಭು

# ಗೇಣಿ ಪರವಾಗಿ

ಈಗ ನಾವು ಗೇಣೀಶಾಸನವನ್ನು ಮಾಡುವಾಗ ಪೂರ್ವಭಾವಿಯಾಗಿ ಈ ವರದಿಯನ್ನು ಆಲೋಚನೆ ಮಾಡುವಾಗ ಯಾವನು ಹೊಲ ಮಾಡುತ್ತಾನೋ ಅವನನ್ನು ಹೊಲದ ಒಡೆಯನನ್ನಾಗಿ ಮಾಡಬೇಕು ಎನ್ನುವ ಭಾವನೆಯನ್ನು ನಾವು ಎಷ್ಟರ ಮಟ್ಟಿಗೆ ಇಟ್ಟಿದ್ದೇವೆ ಎನ್ನುವುದನ್ನು ಆಲೋಚನೆ ಮಾಡಿ ನೋಡಿದರೆ ಅದು ತೀರ ಕಡಿಮೆಯಾಗಿದೆ.

ಇದನ್ನು ನಾವು ಸ್ಥೂಲವಾಗಿ ಪರಿಶೀಲನೆ ಮಾಡಿ ನೋಡಿದರೆ ಇದರಲ್ಲಿ ಏನು ಹೇಳಿದ್ದಾರೆಂದರೆ ಯಾರಾದರೊಬ್ಬ ಗೇಣೀದಾರನು ಒಂದು ಜಮೀನನ್ನು ಸಾಗುವಳಿ ಮಾಡುತ್ತಿದ್ದರೆ ಅಂಥವನಿಗೆ ಆ ಜಮೀನನ್ನು ಯಾರು ಸಾಗುವಳಿಗೆ ಕೊಟ್ಟಿದ್ದಾರೋ ಅಂಥ ಭೂ ಮಾಲೀಕ ಇಷ್ಟಪಟ್ಟರೆ ಅವನು ಈ ಒಂದು ಫ್ಯಾಮಿಲಿ ಹೋಲ್ಡಿಂಗಿನ ಪರಿಮಿತಿಗೆ ಒಳಪಡುವ ಜಮೀನನ್ನು ಗೇಣೀದಾರನಿಂದ ತಪ್ಪಿಸಿ ತಗೆದುಕೊಳ್ಳಬಹುದು ಎಂದು ಹೇಳಿದ್ದಾರೆ. ಇದಕ್ಕೂ ಒಂದು ಸೀಲಿಂಗನ್ನು ನಿಗದಿ ಮಾಡಿದ್ದಾರೆ. ಆದರೆ ಇಂಥ ಒಂದು ನೀತಿಯನ್ನು ಎಂದರೆ ಕನಿಷ್ಠ ಅಥವಾ ಪರಮಾವಧಿಯ ಪ್ರಮಾಣದ ಜಮೀನನ್ನು ಇಟ್ಟುಕೊಳ್ಳುವ ಧೋರಣೆಯನ್ನು ಯಾವ ಕ್ರಮ ಅನುಸರಿಸಿ ಮಾಡಿದ್ದಾರೆ ಎಂದು ನಾನು ಕೇಳುತ್ತೇನೆ. ಮೊದಲನೆಯದಾಗಿ ಈ ದಿವಸ ಇವರು ಯಾವ ಯಾವ ಗೇಣಿ ಮಾಡತಕ್ಕ ರೈತನಿದ್ದಾನೋ ಅಂಥವನಿಗೆ ಒಡೆತನವನ್ನೇನಾದರೂ ಕೊಡುತ್ತಿದ್ದಾರೆಯೇ ಎಂದು ನೋಡಿದರೆ, ಅದಿಲ್ಲ ಎಂದು ಉತ್ತರ ಬರುತ್ತದೆ. ಈ ದಿವಸ ಯಾವ ರೈತ ಟೆನೆಂಟ್ ಆಗಿದ್ದಾನೋ ಅಂಥವನಿಗು ಮತ್ತು ಜಮೀನಿನ ಮಾಲಿಕನಾಗಿರತಕ್ಕಂಥವನಿಗೂ ಎಷ್ಟೆಷ್ಟು ಜಮೀನಿರಬೇಕೆಂದು ಕನಿಷ್ಠ ಮತ್ತು ಪರಮಾವಧಿ ನಿಗದಿಯನ್ನು ನಿರ್ಧರಿಸುವ ವಿಚಾರದಲ್ಲಿ ಇವರು ಯಾವ ರೀತಿ ನೀತಿಗಳನ್ನು ಅನುಸರಿಸಿದ್ದಾರೆಂಬುದನ್ನೀಗ ನಾವು ಮೊದಲು ಪರಿಶೀಲಿಸಬೇಕಾಗಿದೆ. ನಮ್ಮ ದೇಶ ಮತ್ತು ನಮ್ಮ ಸಮಾಜದಲ್ಲಿರತಕ್ಕ ಜನರಲ್ಲಿ ಬಹುಭಾಗ ವ್ಯವಸಾಯಗಾರರು ಇದನ್ನ ಪರಿಶೀಲಿಸುವುದಾದರೆ ಒಂದು ಸಂಸಾರದವರು 1,200/- ರೂಪಾಯಿಗಳ ವರಮಾನ ಬರತಕ್ಕ ಜಮೀನು ಎಷ್ಟಾಗುತ್ತದೋ ಅಷ್ಟನ್ನು ಒಂದು ಫ್ಯಾಮಿಲಿ ಹೋಲ್ಡಿಂಗಿನಪರಿಮಿತಿಯೆಂಬುದಾಗಿ ತೀರ್ಮಾನ ಕೈಗೊಂಡಿದ್ದಾರೆ. ಇದರ ನಾಲ್ಕೂವರೆಯಷ್ಟು ಉತ್ಪತ್ತಿ ಬರುವಂಥ ಜಮೀನಿಗಿತಲೂ ಮೀರಿ ಯಾರಿಗೂ ಭೂಮಿ ಇರಬಾರದೆಂದು ಒಂದು ಸೀಲಿಂಗ್ ಲಿಮಿಟ್ಟನ್ನು ಹಾಕಿದ್ದಾರೆ. ಆ ಸೀಲಿಂಗ್ ಲಿಮಿಟ್ ಎಷ್ಟೆಂದರೆ ಪರಮಾವಧಿ ಉತ್ಪತ್ತಿ 5,100 ರೂಪಾಯಿಗಳು ಇದರ ಮೇಲ್ಪಟ್ಟು. ಅವರು ಮತ್ತೇನು ಹೇಳಿದ್ದಾರೆಂದರೆ–ಒಂದು ಸಂಸಾರದಲ್ಲಿ ಐದು ಜನರು ಮಾತ್ರ ಇದ್ದರೆ ಅಂಥಹ ವಿಚಾರದಲ್ಲಿ ಸೀಲಿಂಗ್ ಲಿಮಿಟ್ಟನ್ನು ಇಟ್ಟುಕೊಳ್ಳಬಹುದೆಂದು ಹೇಳಿದ್ದಾರೆ. ನಮ್ಮ ದೇಶದಲ್ಲಿ ಅಂಥ ದೊಡ್ಡ ದೊಡ್ಡ ಜಮೀನ್ದಾರರುಗಳಿರುವುದು ಬಹಳ ಕಡಿಮೆ. ನಮ್ಮ ದೇಶದಲ್ಲಿರತಕ್ಕ ವ್ಯವಸಾಯಗಾರರಾಗಲಿ ಬಹು ಮಂದಿ ಮಧ್ಯಮ ವರ್ಗದ ವ್ಯವಸಾಯಗಾರರು. ಹೀಗಿರುವಾಗ ಇವರ ವಿಚಾರದಲ್ಲಿ ಫ್ಯಾಮಿಲಿ ಹೋಲ್ಡಿಂಗ್ ಮತ್ತು

ಸೀಲಿಂಗ್ ಲಿಮಿಟ್‌ನ್ನು ನಿಗದಿ ಮಾಡುವಾಗ ಇವರು 5,400 ರೂಪಾಯಿಗಳನ್ನು ಪರಿಮಾವಧಿ ಅಂತರವನ್ನಾಗಿ ಗೊತ್ತು ಮಾಡಿದ್ದಾರೆ. ಆದರೆ ಈ ಪರಮಾವಧಿ ಅಂತರವನ್ನು ಇವರು 5,000ಕ್ಕೆ ಅಲ್ಲದಿದ್ದರೆ 10,000ಕ್ಕೆ ಇಟ್ಟುಕೊಳ್ಳಲಿ. ನಾನು ಬೇಡವೆನ್ನುವುದಿಲ್ಲ. ಕನಿಷ್ಠ ಪರಿಮಿತಿಯನ್ನು ಅವರು ಎಷ್ಟಕ್ಕಾದರೂ ಇಟ್ಟು ಕೊಳ್ಳಲಿ. ಆದರೆ ಮೊದಲು ನಾವು ಈ ಸಮಸ್ಯೆಯನ್ನು ಪರಿಶೀ'ಲನೆ ಮಾಡುವಾಗ' ಮುಂದೆ ಅನುಸರಿಸಬೇಕಾದ ನೀತಿರೀತಿಗಳಿರಬೇಕೆಂಬುದನ್ನು ವಿಮರ್ಶಿಸಬೇಕಾಗಿದೆ ಇದೇ ರೀತಿ ದೇಶದಲ್ಲಿರತಕ್ಕ ಪ್ರತಿಯೊಂದು ವರ್ಗದ ವರಮಾನವನ್ನು ನಾವು ಪರಿಗಣಿಸಬೇಕಾಗಿದೆ. ಅದರೆ ಇದೇ ಸಭೆಯಲ್ಲಿ ಕೆಲವು ದಿವಸಗಳ ಹಿಂದೆ ಸರ್ಕಾರಿ ನೌಕರರ' ಮಾಸಿಕ' ಸಂಬಳ ಸಾರಿಗೆ ವಿಚಾರ ಚರ್ಚೆಯಾಗುತ್ತಿದ್ದಾಗ ಕನಿಷ್ಟ ಮತ್ತು ಪರಮಾವಧಿ ಪರಿಮಿತಿಯ ಅಂತರವನ್ನು 35 ರಷ್ಟು ಮಾತ್ರ ಇಟ್ಟುಕೊಂಡಿದ್ದೇವೆಂದು ಹೇಳಿದರು. ಒಬ್ಬ ನೌಕರನಿಗೆ ತಿಂಗಳಿಗೆ 30–40 ರೂಪಾಯಿಗಳ ಸಂಬಳ ಬಂದರೆ ಮತ್ತೊಬ್ಬ ನೌಕರನಿಗೆ ತಿಂಗಳಿಗೆ 1,800–1,900 ರೂಪಾಯಿಗಳ ಸಂಬಳ ಕೊಡಲಾಗುತ್ತದೆ. ಇದು ಎಷ್ಟು ವ್ಯತ್ಯಾಸವಾಗಿ ಕಾಣುತ್ತಿದೆ! ಹೀಗೆಯೇ ನಾವು ಎಲ್ಲರೂ ಮತ್ತು ಪ್ರತಿಯೊಬ್ಬರೂ ಸಮಾಜದ ಒಂದು ಅಂಗವೆಂದು ಹೇಳಿಕೊಳ್ಳುತ್ತಿರುವಾಗ ಹೀಗೆ ಸಮಾಜದ ಪ್ರತಿಯೊಂದು ಅಂಗಕ್ಕೂ ಇರಬೇಕಾದ ಆಸ್ತಿ ಎಷ್ಟೆಂಬುದನ್ನು ನಿಗದಿ ಮಾಡುವಾಗ ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿ ಮಾಡುವುದು ಎಷ್ಟು ಅಸಂಬುದ್ಧವಾಗಿ ಕಾಣುತ್ತಿದೆ! ನಮ್ಮ ಸಮಾಜದಲ್ಲಿ ಒಂದು ಭಾಗದ ಜನರಿಗೆ ಅನುಕೂಲಪರಿಸ್ಥಿತಿಯನ್ನೊದಗಿಸಿಕೊಟ್ಟು ಇನ್ನೊಬ್ಬರಿಗೆ ಅನಾನುಕೂಲ ಉಂಟು ಮಾಡುವುದು ಯಾವ ನ್ಯಾಯ! ಇದೇನು ತಾವು ಜಾರಿಗೆ ತರಲು ಹೊರಟಿರುವ ಸಮಾಜವದ ತತ್ವ!

ಆದುದರಿಂದಲೇ ನಾನು ಕೇಳುತ್ತಿರುವುದು ತಾವು ಈ ರಿಪೋರ್ಟ್‌ನ್ನು ಮಂಡಿಸುವಾಗ ಈ ವಿಚಾರಗಳನ್ನೆಲ್ಲಾ ಸರಿಯಾಗಿ ವಿವರಿಸಿ ತಿಳಿಸಿದ್ದರೆ ಚೆನ್ನಾಗಿತ್ತು ಎಂದು. ಈಗ ತಾವು ರೈತವಾರಿ ಪಂಗಡದಲ್ಲಿ ಈ ರೀತಿಯ ಒಂದು ಬದಲಾವಣೆಯನ್ನು ಮಾಡುವಾಗ ನಮ್ಮ ಸಮಾಜದಲ್ಲಿರತಕ್ಕ ವರ್ಗಗಳೆಷ್ಟು, ಯಾವ ಯಾವ ಉದ್ಯೋಗಗಳಲ್ಲಿ ಜನರು ತೊಡಗಿದ್ದಾರೆ, ಅವರ ಸಂಪಾದನೆ ಏನಿದೆ ಎನ್ನುವುದನ್ನು ಸರ್ಕಾರದವರು ಈ ದಿವಸ ಆಲೋಚನೆ ಮಾಡಿ ಈ ಕಾರ್ಯವನ್ನು ಕೈಕೊಂಡಿದ್ದಾರೆಯೇ! ಅದೂ ಹೋಗಲಿ, ವ್ಯವಸಾಯದ ಕಸಬಿನಲ್ಲಿರತಕ್ಕವರಿಗೆ ವಾರ್ಷಿಕ ಉತ್ಪನ್ನ 1,400 ರೂಪಾಯಿಗಳಿಂದ ಹಿಡಿದು 5,000 ರೂಪಾಯಿಗಳವರೆಗೂ ಇರಬಹುದೆಂದು ಒಂದು ಪರಮಾವಧಿ ಎಲ್ಲೆಯನ್ನು ನಿರ್ಧರಿಸಬೇಕೆಂದು ಹೇಳಲಾಗಿದೆ. ಈ ಒಂದು ಸಂಪಾದನೆಯನ್ನಾದರೂ ಆ ವರ್ಗದಲ್ಲಿರತಕ್ಕವರೆಲ್ಲರಿಗೂ ಒಂದೇ ಸಮನಾಗಿ ಅನ್ವಯಿಸುವಂತೆ ಏನದರೂ ಮಾಡಿದ್ದಾರೆಯೇ ಎಂದರೆ ಅದೂ ಇಲ್ಲ. ಈ ರೀತಿಯ ಒಂದು ಅಭಿಪ್ರಾಯಕ್ಕೆ ಬರಲು ಕಾರಣವೇನೆಂಬುದರ ವಿಚಾರದಲ್ಲಿ ಏನಾದರೂ ಹೇಳಿದ್ದಾರೆಯೇ ಎಂದು ಹುಡುಕಿದರೆ–ಈ ಬಗ್ಗೆ ಅವರು ಒಂದು ಚಕಾರ ಶಬ್ದ ಕೂಡ ಹೇಳಿಲ್ಲ. ಇದನ್ನೆಲ್ಲಾ ನೋಡಿದರೆ

ಸರ್ಕಾರದವರ ಉದ್ದೇಶ ರೈತನ ಹಿತಸಾಧನೆಗೆಂದು ಹೇಳುತ್ತಾ, ಈ ರೀತಿ ಒಬ್ಬೊಬ್ಬರಿಗೂ ಇಷ್ಟೊಂದು ಅಂತರವನ್ನು ಕಲ್ಪಿಸಿ ಕಡೆಗೆ ರೈತನಾಗಿರುವ ಗೇಣೀದಾರರನ್ನೂ ಮತ್ತು ಜಮೀನು ಮಾಲೀಕರನ್ನೂ ತಪ್ಪು ದಾರಿಗೆಳೆಯಲು ಹೀಗೆ ಮಾಡುತ್ತಿದೀರೆಂದು ನನಗೆ ಅನ್ನಿಸುತ್ತಿದೆ. ಇಲ್ಲಿಯತನಕ ಇವರು ಹೇಳುತ್ತಿದ್ದ ತತ್ವ ಏನೆಂದರೆ ಯಾರು ಜಮೀನಿನಲ್ಲಿ ವ್ಯವಸಾಯ ಮಾಡುತ್ತಿದ್ದಾನೋ ಅವನೇ ಭೂಮಿಗೆ ಒಡೆಯನಾಗಬೇಕು ಎಂಬುದಾಗಿ. ಆದರೆ ಆ ರೀತಿ ಆ ದಿವಸ ಹೇಳಿದ್ದೇ ಒಂದು; ಈ ದಿವಸ ಮಾಡುತ್ತಿರುವುದೇ ಒಂದು. ಹೀಗಾದರೆ ಇದು ಏನು ದೇಶಕ್ಕೆ ಒಳ್ಳೆಯದನ್ನು ಮಾಡಿತು! ಈ ವರದಿಯಲ್ಲಿ ಗೇಣೀದಾರನಿಗೂ ಒಂದು ಸೀಲಿಂಗ್ ಲಿಮಿಟ್, ಭೂ ಮಾಲೀಕರಿಗೂ ಒಂದು ಸೀಲಿಂಗ್ ಲಿಮಿಟ್ ಹಾಕಿದ್ದಾರೆ. ಆದರೆ ಈ ಸೀಲಿಂಗ್ ಲಿಮಿಟ್ ಒಬ್ಬೊಬ್ಬರಿಗೂ ಒಂದೊಂದು ರೀತಿಯಾಗಿದೆ. ಈ ವಿಚಾರಗಳಿಗೆಲ್ಲಾ ತಾವು ಹೆಚ್ಚಿನ ಗಮನ ಕೊಡಬೇಕು. ಮಹಾತ್ಮ ಗಾಂಧಿಯವರೇ ಅವರು ಸ್ವತಃ ಬರೆದಿರುವ ಒಂದು ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ. "ಕೃಷಿಗಾರರ ವಿಚಾರದಲ್ಲಿ ಯಾವ ಒಂದು ಶಾಸನ ತರಬೇಕಾದರೂ ಬಹಳ ಎಚ್ಚರಿಕೆಯಿರಬೇಕು, ಬಹಳ ಹುಷಾರಿನಿಂದ ಅದನ್ನು ಮಾಡಬೇಕು ; ನಮ್ಮ ದೇಶದಲ್ಲಿ ಬಹು ಜನರು ಈ ಕೃಷಿಯಲ್ಲಿ ತೊಡಗಿದ್ದಾರೆ. ಅವರ ಕನಿಷ್ಠ ಮತ್ತು ಪರಮಾವಧಿ ಉತ್ಪತ್ತಿಯನ್ನು ನಿರ್ಧರಿಸುವಾಗ ಸಮಾಜದಲ್ಲಿ ಹೆಚ್ಚು ಅಂತರವಿರಬಾರದು; ನಮ್ಮ ಸಮಾಜದಲ್ಲಿ ಪ್ರತಿಯೊಂದು ಉದ್ಯೋಗದಲ್ಲೂ ಇರತಕ್ಕ ಜನರ ಉತ್ಪತ್ತಿಗೂ ಈ ಕೃಷಿಗಾರರ ಉತ್ಪತ್ತಿಗೂ ಹೆಚ್ಚು ಅಂತರವಿರಬಾರದು; ಹೀಗೆ ಎಲ್ಲಾ ದೃಷ್ಟಿಗಳಿಂದಲೂ ಪರಿಶೀಲನೆ ಮಾಡಿ. ಅನಂತರ ಆ ತತ್ವಗಳನ್ನು ಜಾರಿಗೆ ತರಬೇಕೇ ವಿನಾ ಕೇವಲ ಈ ರೈತಾಪಿ ವರ್ಗಕ್ಕೇ ಒಂದು ಇತಿಮಿತಿಯನ್ನುಂಟು ಮಾಡಿದರೆ ಅದು ದೊಡ್ಡ ತಪ್ಪಾದೀತು" ಎಂದು ಹೇಳಿದ್ದಾರೆ.

ಸ್ವಾಮೀ, ಒಂದು ವಿಚಾರ ಹೇಳುತ್ತೇನೆ. ತಮಗೆ ನಾನು ಮಾತನಾಡುವುದು ಇಷ್ಟವಿಲ್ಲದಿದ್ದರೆ ನಾನು ಕುಳುತುಕೊಂಡುಬಿಡುತ್ತೇನೆ. ತಮಗೆ ಸಮಾಧಾನವಾಗದಿದ್ದರೆ ನಾನು ಮಾತನಾಡುವುದೇ ಬೇಡ ಏತಕ್ಕೆಂದರೆ ನಾನು ಈಗಾಗಲೆ ಒಂದು ಪುಟದಿಂದ ಓದಿ ಹೇಳಿದ್ದೇನೆ. ಅದನ್ನು ಮೇಲೆ ಹೇಳಿದ "Shadow of Mahatma" ಎನ್ನುವ ಪುಸ್ತಕದಿಂದ ಓದಿಕೊಳ್ಳಲಿ ಎಂದು ಹೇಳುತ್ತಿದ್ದೇನೆ.

* ಚರ್ಚೆ ಮುಂದುವರೆಯುತ್ತದೆ. ಒಬ್ಬ ಪಿ.ಎಸ್.ಪಿ. ಸದಸ್ಯರು (ರಾಮಪ್ಪ) ಹೇಳಿದ್ದನ್ನು ಅವರ ವಯಕ್ತಿಕ ಅಭಿಪ್ರಾಯವೋ ಅಥವಾ ಅವರಪಕ್ಷದ ಅಭಿಪ್ರಾಯವೋ ಎಂದು ಡಿ. ದೇವರಾಜ ಅರಸರು ಕೇಳಿದಾಗ ಕೆಂಚಪ್ಪನವರು ಅವರ ಪಕ್ಷದ ಪರವಾಗಿ ದನಿ ಎತ್ತಿ ಮಾತು ಮುಂದುವರಿಸುತ್ತಾರೆ.

ಸ್ವಾಮೀ, ನಮ್ಮ ಪಿ.ಎಸ್.ಪಿ. ಎಂದರೆ ಪ್ರಜಾಸೋಷಿಯಲಿಸ್ಟು ಪಾರ್ಟಿಯ ತತ್ವ ಏನು ಎನ್ನುವ ಪ್ರಶ್ನೆಯನ್ನು ಕೇಳಿದ್ದರಿಂದ ಹೇಳಬೇಕಾಗಿದೆ. ನಮ್ಮ ಪ್ರಜಾಸೋಷಿಯಲಿಸ್ಟು ಪಾರ್ಟಿಯ ತತ್ವ ಪ್ರತಿಯೊಂದು ಭಾಗದಲ್ಲಿಯೂ ಸಹ ಮತ್ತು ಸಮಾಜದ ಪ್ರತಿಯೊಂದು

ಸೆಕ್ಷನ್ನಿನಲ್ಲಿಯೂ ಸಹ ಕನಿಷ್ಟ ಸಂಬಳ ತಿಂಗಳಿಗೆ ಒಂದುನೂರು ರೂಪಾಯಿಗಳಿರಬೇಕೆಂದು. ಮತ್ತು ಪರಮಾವಧಿ ಒಂದು ಸಾವಿರ ರೂಪಾಯಿಗಳ ಮೇಲ್ಪಟ್ಟು ಇರಬಾರದು ಎನ್ನುವುದನ್ನು ಸ್ಪಷ್ಟವಾಗಿ ಹೇಳಿದ್ದೇವೆ. ಆದರೆ ಅದೇ ಕಾಂಗ್ರೆಸ್ಸಿನಲ್ಲಿ ಅವರು ಯಾವ ಸ್ಟೇಟ್ ಮೆಂಟಿನಲ್ಲಿಯೂ ಹೇಳಲಿಲ್ಲ. ಈ ರೀತಿಯಾಗಿ 'ಬ್ಲಫ್' ಮಾಡುವುದನ್ನು ನಾವು ಕಲಿತಿಲ್ಲ ಮತ್ತು ನೀವು ಅ ರೀತಿಯಾಗಿ ಮಾಡುವುದೂ ಸರಿಯಾದುದಲ್ಲ. Sri R.M. Dodmani Hegde (Deputy Minister for Planning and Development) On a point of order, Sir. The Leader of the opposition has used the word "Bluff" Which in my opinion, is unparliamentary.

ಅಧ್ಯಕ್ಷರು:- unparliamentary ಅಲ್ಲ ಎಂದು ತೀರ್ಪು ನೀಡುತ್ತಾರೆ.

ಆದುದರಿಂದ ನಾನು ಇನ್ನು ಮುಂದೆ ಹೋಗುತ್ತೇನೆ. ಈ ಪ್ರಶ್ನೆಯನ್ನು ಎತ್ತಿದ್ದು ಬಹಳ ಒಳ್ಳೆಯದಾಯಿತು. ಇದಕ್ಕೆ ಆಗಲೇ ಉತ್ತರ ಕೊಟ್ಟಿದ್ದೇನೆ. ಆದುದರಿಂದ ನಾನು ನಮ್ರತೆಯಿಂದ ಕೇಳಿಕೊಳ್ಳುತ್ತೇನೆ ಮತ್ತು ನಮ್ಮ ಮಾನ್ಯಮಿತ್ರರು, ಆಡಳಿತ ನಡೆಸುತ್ತಿರುವವರು ತಮ್ಮ ಪಾಲಿಸಿ ಸ್ಟೇಟ್‌ಮೆಂಟಿನಲ್ಲಿ ತಮ್ಮ ಮೂಲತತ್ವ ಏನು ಎನ್ನುವುದನ್ನು ತಿಳಿಸಿ, ಅದನ್ನು ಪ್ರತಿಯೊಂದು ಭಾಗಕ್ಕೂ ಯಾವ ರೀತಿಯಾಗಿ ಅನ್ವಯಿಸುತ್ತೀರಿ ಎನ್ನುವುದನ್ನು ಹೇಳುವುದು ಅಗತ್ಯ. ಈ ರೀತಿಯಾದ ವಿವರಗಳನ್ನು ಈ ಜತ್ತಿ ಸಮಿತಿಯ ರಿಪೋರ್ಟಿನಲ್ಲಿ ಹೇಳಲೇಬೇಕಾಗುತ್ತದೆ. ಇಲ್ಲದೆ ಹೋದರೆ ನಿಮ್ಮ ಮಾತಿನಲ್ಲಿ ತಿರುಳು ಎಳ್ಳಷ್ಟು ಇಲ್ಲದೆ ನಿಮ್ಮ ವಾದದ ದಿವಾಳಿತನ ಏನು ಎನ್ನುವುದು ಸಿಕ್ಕಿದ ಹಾಗಾಗುತ್ತದೆ.

ಸ್ವಾಮಿ, ನಾನು ಆಗಲೇ ಹೇಳುತ್ತಿದ್ದೆ. ಈ ಕಾನೂನು ಜಾರಿಗೆ ಬರುವುದಕ್ಕಿಂತ ಮುಂಚಿತವಾಗಿ ಯಾವ ಯಾವ ಗೇಣೀದಾರರನನ್ನು ಬಿಡಿಸಿದ್ದಾರೋ ಅವರೆಲ್ಲರಿಗೂ, ಯಾವತಗಾದೆಯನ್ನೂ ಮಾಡದೆ ಅವರಿಗೆ ಹೊಲ ಮಾಡತಕ್ಕ ಅಧಿಕಾರ ಕೊಡಬೇಕು; ಮತ್ತು ಅವರಿಗೆ ಹೊಲದ ಒಡೆತನವನ್ನು ಕೊಡಬೇಕು ಎನ್ನತಕ್ಕದ್ದು ಮೊದಲನೆಯದು. ಇದು 1948 ನೆಯ ಇಸ್ವಿಯಿಂದ ಪ್ರಾರಂಭವಾಗಬೇಕು. ಅದರ ಹಿಂದೆ ಕೆಲವಾರು ವರ್ಷ ಜಮೀನನ್ನು ಮಾಡತಕ್ಕವರು ಮುಂದೆ ಆ ಜಮೀನು ಮಾಡುವ ಉತ್ತೇಜನವನ್ನು ಇಟ್ಟುಕೊಳ್ಳ ಬೇಕಾದದ್ದು ಅಗತ್ಯ. ಎರಡನೆಯದು ಪರಿಮಿತಿ ಎನ್ನುವ ವಿಚಾರದಲ್ಲಿ ಈಗ ತಾನೆ ಕೆಲವಾರು ವಿಚಾರಗಳು ಉದ್ಭವಿಸಿವೆ. ಫ್ಯಾಮಿಲಿ ಹೋಲ್ಡಿಂಗ್ಸ್ನ್ನು 46 ಭಾಗ ಅತ್ಯಾವಶ್ಯಕವಾದ ಭಾಗವಾಗಿ ಇಲ್ಲಿ ನಿಗದಿಮಾಡಿದ್ದಾರೆ. ಜತ್ತಿ ಸಮಿತಿಯವರ ಮುಖ್ಯ ಶಿಫಾರ್ಸುಗಳ ಸಾರಾಂಶದ ವರದಿಯ ಎಂಟನೆಯ ಪುಟದಲ್ಲಿ ಈ ರೀತಿ ಹೇಳಿದೆ:

"**Family Holding :-** The Committee are of the view that the family holding in Mysore may be defined as an extent of land which would give to the owner-cultivator. the net income of Rs. 1.200 per annum"

ಇದು ಸಂಸಾರದ ಹೋಲ್ಡಿಂಗ್ ಎಂದು ಇಟ್ಟುಕೊಳ್ಳತಕ್ಕ ವಿಚಾರ ಮತ್ತೆ ಅದು ಕೆಳಗೆ ಸೀಲಿಂಗ್ ಎನ್ನತಕ್ಕದ್ದಕ್ಕೆ ಹೀಗೆ ಹೇಳಿದೆ.

"**Ceilings.....**The Committee recommended that as in the Hyderabad Act, the ceiling on existing holdings under personal cultivation may be 4½ family holdings"

ಅಂದಮೇಲೆ ಈಗಾಗಲೇ ಪ್ರಶ್ನೆ ಮಾಡಿರತಕ್ಕ ಮಾನ್ಯ ಸದಸ್ಯರಿಗೆ ಇದನ್ನು ಓದುವುದರ ಮೂಲಕ ಸಮಾಧಾನವಾಗಿರಬಹುದು ಎಂದು ಹೇಳುತ್ತೇನೆ. ನಮ್ಮ ಸಮಾಜದಲ್ಲಿರುವ ನಾನಾ ಭಾಗದ ಜನತೆಯ ವರಮಾನವನ್ನು ನಿಗದಿಮಾಡುವಾಗ ವ್ಯವಸಾಯಗಾರನನ್ನು ನೋಯಿಸುವುದು ಒಳ್ಳೆಯದಲ್ಲ. ಬೇರೆಯವರಿಗೆ ಅನ್ವಯಿಸುವ ಹಾಗೆ ಮಾಡಬೇಕು. ಇಲ್ಲಿ ಫ್ಯಾಮಿಲಿ ಹೋಲ್ಡಿಂಗ್ ನಿವ್ವಳ ವರಮಾನ 1,200 ರೂಪಾಯಿ ಇರಬೇಕು ಎಂದು ಹೇಳಿದ್ದಾರೆ. ಮತ್ತೊಂದು ಕಡೆ ಅತ್ಯಧಿಕ ವರಮಾನ 4ಳ ಯಷ್ಟು ಎಂದರೆ ಐದು ಸಾವಿರ ಚಿಲ್ಲರೆ ಇರಬೇಕೆಂದು ಹೇಳಿದ್ದಾರೆ. 4ಳ ಎನ್ನುವುದಕ್ಕೆ ಬದಲು ಹತ್ತರಷ್ಟು ಇಟ್ಟುಕೊಂಡ ಹಾಗಾಗುತ್ತಿದೆ. ಉದಾಹರಣೆಗೆ ಒಂದು ಫ್ಯಾಮಿಲಿ ಹೋಲ್ಡಿಂಗಿಗೆ ಕನಿಷ್ಠ ವರಮಾನ ತಿಂಗಳಿಗೆ 100 ರೂಪಾಯಿ ಮತ್ತು ಅತ್ಯಧಿಕ ವರಮಾನ 1,000 ರೂಪಾಯಿಗಳೆಂದರೆ ಒಂದು ವರ್ಷಕ್ಕೆ ಕನಿಷ್ಠ ವರಮಾನ 1,200 ರೂಪಾಯಿ ಮತ್ತು ಅತ್ಯಧಿಕ ವರಮಾನ 12,00 ಇರಬೇಕು ಎಂದರೆ ಹತ್ತರಷ್ಟು ಆಗುತ್ತದೆ. ಅದನ್ನು ಹೇಳಿಲ್ಲ. ಅದರ ಬದಲು ಅತ್ಯಧಿಕ ವರಮಾನ 4ಳ ಯಷ್ಟು ಒಂದು ಸಂಸಾರಕ್ಕೆ ಇರಬೇಕು ಎಂದು ಹೇಳಿದ್ದಾರೆ. ಒಂದು ಸಂಸಾರದಲ್ಲಿ ಐದು ಜನಗಳಿಗಿಂತ ಹೆಚ್ಚಾಗಿದ್ದರೆ ಎರಡುರಷ್ಟು ಇಟ್ಟುಕೊಳ್ಳಬಹುದು ಎಂದರೆ ಹತ್ತು ಸಾವಿರ ಚಿಲ್ಲರೆ ಎಂದು ಹೇಳಲ್ಪಟ್ಟಿದೆ. ನಾನು ಕೇಳುತ್ತೀರೆ ಇದನ್ನು ಯಾವುದಾದರೂ ಒಂದು ನಿಗದಿಯಾದ ಮಾರ್ಗವನ್ನು ಅನುಸರಿಸಿ ಮಾಡಿದೆಯೇ? 46 ಯಷ್ಟು ವ್ಯತ್ಯಾಸವನ್ನು ಇಲ್ಲಿ ಇಟ್ಟುಕೊಂಡಿದ್ದಾರೆ. ಆದರೆ ಜೀವನ ಮಾರ್ಗದಲ್ಲಿ ಪ್ರತಿಯೊಂದು ಭಾಗದ ಜನಾಂಗಕ್ಕೂ ಸಹ 4ಳ ಭಾಗ ಇಟ್ಟುಕೊಂಡರೆ ಅದನ್ನು ಒಪ್ಪಿಕೊಳ್ಳೋಣ. ಒಂದು ಕಡೆ ತಿಂಗಳಿಗೆ 100 ರೂಪಾಯಿ ಕನಿಷ್ಠ ವರಮಾನ ಮತ್ತು 1,000 ರೂಪಾಯಿ ಅತ್ಯಧಿಕ ವರಮಾನ ಎಂದು ಹೇಳುತ್ತಾರೆ. ಆಗ ಕನಿಷ್ಠ ವರಮಾನ ಒಂದು ವರ್ಷಕ್ಕೆ 1,200 ಮತ್ತು ಅತ್ಯಾಧಿಕ ವರಮಾನ 12,000 ಸಾವಿರ ರೂಪಯಿ ಆಗುತ್ತದೆ. ಆದ್ದರಿಂದ ತಮ್ಮ ಪಾಲಿಸಿಯಲ್ಲಿ ಏನಿದೆ ಎಂದು ಹೇಳಬೇಕು ? ಇದು ಬರಿ ವ್ಯವಸಾಯಗಾರರಿಗೆ ಅನ್ವಯಿಸತಕ್ಕ ಒಂದು ತತ್ವವನ್ನು ಜನತೆಯ ಪ್ರತಿಯೊಂದು ಭಾಗಕ್ಕೂ ಅನ್ವಯಿಸುವಂತೆ ನಾವು ನಿಗದಿ ಮಾರ್ಗವನ್ನು ಅನುಸರಿಸುತ್ತಾ ಇಲ್ಲ. ನಗರದಲ್ಲಿ ಒಂದು ನಮೂನೆ, ವರ್ತಕರಿಗೆ ಒಂದು ನಮೂನೆ, ಫ್ಯಾಕ್ಟರಿ ಮಾಲೀಕರಿಗೆ, ಬ್ಯಾಂಕ್ ಡೈರೆಕ್ಟರಿಗೆ ಮತ್ತೊಂದು ನಮೂನೆ ಇಟ್ಟುಕೊಂಡು ಈ ರೀತಿ ಭಿನ್ನ ಭಾವ ಹುಟ್ಟಿಸಿರುವುದು ಜನತೆಯಲ್ಲಿ ಅಸಮಾಧಾನಕ್ಕೆ ಕಾರಣವಾಗಿದೆ ಎಂದು ಹೇಳುತ್ತೇನೆ. ಈ ವಿಚಾರದಲ್ಲೂ ಸಹ ನಮ್ಮ ಪ್ರಜಾ ಸೋಷಿಯಲಿಸ್ಟ್ ಪಕ್ಷದವರ ನಿಲವು ಕನಿಷ್ಠ 100 ರೂಪಾಯಿ

ಇರಬೇಕೆಂಬುದು. ಹೀಗೆ ತಾವು ಕನಿಷ್ಠ ಎಷ್ಟಾದರೂ ಇಟ್ಟು ಕೊಳ್ಳಿರಿ, ಅತ್ಯಾಧಿಕ ಎಷ್ಟಾದರೂ ಇಟ್ಟು ಕೊಳ್ಳಿರಿ ಪ್ರತಿಯೊಂದು ಜನಾಂಗದ ಪ್ರತಿಯೊಂದು ಅಂಗಕ್ಕೂ ಅದು ಅನ್ವಯಿಸುವ ರೀತಿಯಲ್ಲಿ ಇರಬೇಕು ಎನ್ನುವುದೇ ನನ್ನ ಅಭಿಪ್ರಾಯ: ಮತ್ತು ಇನ್ನು ಮುಂದೆ ನಿಗದಿಮಾಡುವಾಗ ಯಾವುದನ್ನು ಇಟ್ಟುಕೊಂಡು ಯಾವ ಮಾರ್ಗ ಅನುಸರಿಸುತ್ತಾರೆ. 1952ನೆಯ ಇಸವಿಯಲ್ಲಿ ಭೂಮಿಯಲ್ಲಿ ಬೆಳೆದ ಮಾಲಿನ ಖರೀದಿಯ ಬೆಲೆಯನ್ನು ಇಟ್ಟುಕೊಂಡು ಲೆಕ್ಕಮಾಡಿ ನಿಗದಿ ಮಾಡುತ್ತಾರೆಯೇ? ಇದು ಎಷ್ಟರ ಮಟ್ಟಿಗೆ ಸಮಂಜಸವಾಗಿದೆ ಎಂಬುದನ್ನು ಆಲೋಚನೆ ಮಾಡಬೇಕು. ಏತಕ್ಕೆಂದರೆ 1952-53 ನೆಯ ಇಸವಿಯಲ್ಲಿ ಧಾರಣಿ ವಾಸಿ ತುಂಬ ಹೆಚ್ಚಾಗಿತ್ತು ಈ ವರದಿಯಲ್ಲಿ ಒಂದು family holding ಎಂದರೆ ಒಂದು ಸಂಸಾರಕ್ಕೆ ನಿಗದಿ ಮಾಡಿದ ಭೂಮಿ ಎಷ್ಟು ಎಂಬುದಕ್ಕೆ ಒಂದು ವರ್ಷಕ್ಕೆ ನಿವ್ವಳ ಉತ್ಪನ್ನ 1,200 ರೂಪಾಯಿ ಬರುವಷ್ಟು ಭೂಮಿ ಎಂದು ಹೇಳಿದೆ ಅಂದರೆ gross income 2,400 ರೂಪಾಯಿಗಳಷ್ಟು ಬರುತ್ತದೆ ಎಂದ ಹಾಗಾಯಿತು ಒಟ್ಟು ಉತ್ಪನ್ನದಲ್ಲಿ 1,200 ರೂಪಾಯಿ ಖರ್ಚು ಆಗುವುದು ಹಾಗು ನಿವ್ವಳ ಉತ್ಪತ್ತಿ 1,200 ರೂಪಾಯಿ ಬರುತ್ತದೆ. ಎಂದು ಹೇಳಿದ ಹಾಗೆ ಆಗುವುದು. ಈ ರೀತಿಯಾಗಿ ಲೆಕ್ಕ ಮಾಡುವುದರಿಂದ ವ್ಯವಸಾಯದ ಬಗ್ಗೆ ಸರಿಯಾದ ಅರಿವು ಇದೆ ಎಂದು ನನಗೆ ಎನಿಸುವುದಿಲ್ಲ. ನೀರಾವರಿ ಜಮೀನು ಇದ್ದರೆ ನಾಲ್ಕರಲ್ಲಿ ಒಂದು ಭಾಗ ಮತ್ತು ಖುಷ್ಕೆ ಜಮೀನು ಇದ್ದರೆ ಮೂರರಲ್ಲಿ ಒಂದು ಭಾಗ ಖರ್ಚು ಬರುತ್ತದೆಂದು ಮತ್ತೊಂದು ಕಡೆ ಹೇಳಿದ್ದಾರೆ. ಈ ರೀತಿ ಲೆಕ್ಕ ಮಾಡುವುದರಿಂದ ಎಷ್ಟು ತಪ್ಪು ಹೆಜ್ಜೆ ಇಟ್ಟಿದ್ದಾರೆ ಎಂಬುದನ್ನು ಆಲೋಚನೆ ಮಾಡಬೇಕು. ಒಂದು ಎಕರೆ ಭೂಮಿಯಲ್ಲಿ ಹತ್ತು ಪಲ್ಲ ಭತ್ತ ಬರುತ್ತದೆಂದು ಇಟ್ಟುಕೊಳ್ಳೋಣ. ಒಂದು ಪಲ್ಲ ಭತ್ತಕ್ಕೆ 20 ರೂಪಾಯಿಗಳ ಕರವಂತೆ ಹತ್ತು ಪಲ್ಲಭತ್ತಕ್ಕೆ 200 ರೂಪಾಯಿ ಉತ್ಪತ್ತಿ ಬರುತ್ತದೆ. ಇದರಲ್ಲಿ 100 ರೂಪಾಯಿ ಅಷ್ಟೇ ಖರ್ಚು ಆಗುತ್ತದೇನು? ಜಮೀನು ಕಂದಾಯ, ಬೀಜ, ಗೊಬ್ಬರ ಇವುಗಳಿಗೆಲ್ಲಾ ಅರ್ದದಷ್ಟೇ ಖರ್ಚು ಬರುತ್ತದೇನು? ವ್ಯವಸಾಯ ಮಾಡಿರತಕ್ಕವರು ವ್ಯವಸಾಯದ ಅನುಭವವುಳ್ಳವರು ಈ ರೀತಿಯಾಗಿ ಹೇಳತಕ್ಕಂಥಾದ್ದೇನು? ಇನ್ನೊಂದು ವಿಚಾರ. ಖುಷ್ಕಿ ಜಮೀನು ಇದ್ದರೆ ಎಷ್ಟು ಬರುತ್ತದೆ, ಡ್ರೈಲ್ಯಾಂಡ್ ಇದ್ದರೆ ಎಷ್ಟು ಬರುತ್ತದೆ ನೋಡೋಣ.

''In respect of personally cultivated lands, the net income should be taken as half the average produce for lands with assured irrigation and 1/2 the average gross produce for other lands as determined by the Land Commision''

ಎಂದು ಹೇಳಿದೆ. ಖರ್ಚು ಕಡಿಮೆ ಬರುತ್ತದೆ ಎಂಬ ಭಾವನೆ ಇದು ಕೊಡುತ್ತದೆ. ಇದು ನಿಜವೇ? ಇದರಿಂದ ಎಷ್ಟೋ ಅನ್ಯಾಯವಾಗುತ್ತದೆ? ಇದನ್ನೆಲ್ಲ ನಿಗದಿ ಮಾಡುವಾಗ ಆಲೋಚನೆ ಮಾಡಬೇಕಾಗಿತ್ತು, ಇದು ವ್ಯವಸಾಯದ ನಿಜವಾದ ಅನುಭವಕ್ಕೆ ವಿರೋಧವಾದದ್ದು. ಇನ್ನು ಸೀಲಿಂಗಿನ ಬಗ್ಗೆ ಈರೀತಿ ಹೇಳಿದೆ:

"The ceiling on existing holdings under personal cultivation may be 4 1/2 family holdings as against Three family holdings for future acquisition. The ceiling may be doubled where the family consists of more than five members.

ಇದನ್ನು ಯಾವ ಆಧಾರದ ಮೇಲೆ ಮಾಡಿದ್ದಾರೆ? ಒಂದು ಸಂಸಾರದಲ್ಲಿ 25 ಜನ ಇರಬಹುದು. ಒಂದು ಸಂಸಾರದಲ್ಲಿ ಐದು ಜನಕ್ಕೆ ಮೇಲ್ಪಟ್ಟು ಇದ್ದರೆ ಎರಡರಷ್ಟು ಇರಬೇಕು ಎಂಬುದನ್ನು ಯಾವ ಆಧಾರದ ಮೇಲೆ ಮಾಡಿದ್ದಾರೆ? ಒಂದು ಸಂಸ್ಥಾರದಲ್ಲಿ ಐವತ್ತು ಜನ ಅಥವಾ ಇನ್ನೂ ಹೆಚ್ಚಿಗೆ ಜನ ಇರಬಹುದು. ಅದು ಸಂಸಾರವಲ್ಲವೇ? ಉತ್ಪತ್ತಿ ಎಷ್ಟು ಬರುತ್ತದೆ ಎಂಬುದನ್ನು ಆಲೋಚನೆ ಮಾಡಬೇಕಾದುದು ಅವಶ್ಯಕವಾಗಿದೆ. The ceiling may be doubled where the family consists of more than five members. ಒಂದು ಸಂಸಾರದಲ್ಲಿ ಐದು ಜನಕ್ಕೆ ಮೇಲ್ಪಟ್ಟು ಇದ್ದರೆ ಅಂದರೆ ನೂರು ಜನ ಒಂದು ಸಂಸಾರದಲ್ಲಿ ಇದ್ದರೆ ಏನು ಮಾಡಬೇಕು? ಈ ರೀತಿ ceiling double ಮಾಡಬೇಕು ಎಂದು ಹೇಳುವುದು ಯಾವ ನೈತಿಕ ಮಟ್ಟ? ಯಾವ ಧರ್ಮ ಮಾರ್ಗ ಇದು? ತಾವು ಇದನ್ನು ಆಲೋಚನೆ ಮಾಡಬೇಕು. ಹಿಂದು ಸ್ಥಾನದಲ್ಲಿ ಎಲ್ಲ ಪ್ರಾಂತಗಳಲ್ಲಿ fragmentation and consolidation of lands ಬಗ್ಗೆ ಕಾನೂನು ಮಾಡಿದ್ದಾರೆ. ಅದರೆ ನಮ್ಮಲ್ಲಿ ಮಾಡಿಲ್ಲ. ತುಂಡು ಭೂಮಿಗಳನ್ನು ಒಟ್ಟು ಗೂಡಿಸಿ ಸಾಗುವಳಿ ಮಾಡುವುದರಿಂದ ಲಾಭ ವಾಗುತ್ತದೆ. ಕಾಫೀ ಪ್ಲ್ಯಾಂಟೇಷನ್ ವಿಚಾರದಲ್ಲಿ ಇಟ್ಟುಕೊಂಡಿರುವ ಧೋರಣೆಯನ್ನು ನೋಡಿದರೆ ಧನಿಕರಿಗೂ ಬಡವರಿಗೂ ಇನ್ನೂ ಹೆಚ್ಚು ಅಂತರ ಉಂಟು ಮಾಡುವ ಸನ್ನಿವೇಶ ಕಂಡು ಬರುತ್ತದೆ. ಯಾಲಕ್ಕಿ ಮತ್ತು ಕಾಫೀ ಪ್ಲ್ಯಾಟೇಷನ್ನಿನ ವಿಚಾರದಲ್ಲಿ ಸರಿಯಾದ ನೀತಿಯನ್ನು ಇಟ್ಟುಕೊಂಡಿಲ್ಲ. ಅಲ್ಲದೆ ಇನ್ನೊಂದು ಪಕ್ಷಪಾತ ಮನೋಭಾವನೆಯನ್ನು ತೋರಿಸಿದ್ದಾರೆ. ಅದು ಏನೆಂದರೆ, ಕಾಫಿ ಪ್ಲಾಂಟೇಷನ್ನಿಗಾಗಲಿ, ರಬ್ಬರ್ ಪ್ಲಾಂಟೇಷನ್ನಿರಿಗಾಗಲಿ ತೋರಿಸತಕ್ಕ ಮನೋಭಾವನೆಯನ್ನು ಒಂದು ಅಡಿಕೆ ಪ್ಲಾಂಟೇಷನ್ನಿಗೆ, ಒಂದು ತೆಂಗಿನ ಪ್ಲಾಂಟೇಷನ್ನಿಗೆ ಏಕೆ ತೋರಿಸಲಿಲ್ಲ? ಈ ವಿಚಾರವನ್ನು ಕೂಲಂಕುಷವಾಗಿ ಆಲೋಚನೆ ಮಾಡಬೇಕು. ಅವರ ಮನೋಭಾಗದಲ್ಲಿ ಒಂದು ಕಂಪ್ಯಾಕ್ಟ್ ಏರಿಯಾ ಅಂದರೆ ಒಂದೇ ಭಾಗದಲ್ಲಿರುತ್ತದೆಯೇ? ಅದನ್ನು ಸರಿಯಾಗಿ ನೋಡಬೇಕು ಎನ್ನುವ ಮನೋಬಾವನೆ ಇರುವ ಹಾಗೆ ಅರ್ಥ ಬರುತ್ತದೆ ಒಂದು ಕಾಪಿ ತೋಟ ಬೆಳೆಸ ಬೇಕಾದರೆ,ಒಂದು ಅಡಿಕೆ ತೋಟ ಬೆಳೆಸಬೇಕಾದರೆ ಎಷ್ಟು ದಿವಸ ಬೇಕು, ಇನ್‌ವೆಷ್ಟಮೆಂಟ್ ಎಷ್ಟು ಬೇಕು , ಬಂಡವಾಳ ಎಷ್ಟು ? ಬಹಳ ದಿವಸ ಬೆಳೆದು ಬಹಳ ದಿವಸ ಸಾಕಿ , ಆ ರೀತಿ ದೇಶದ ಸಂಪತ್ತನ್ನು ಅಭಿವೃದ್ಧಿ ಪಡಿಸಬೇಕು. ರಬ್ಬರ್ ಕಾಪಿ ಪ್ಲಾಂಟೇಶನ್ನಿಗೆ , ಮೆಣಸು ಏಲಕ್ಕಿ ಬೆಳೆಯುವವರಿಗೆ ಒಂದು ರೀತಿ ಮನೋಬಾವ ತೋರಿಸಿ ತೆಂಗು ಅಡಿಕೆ ಬೆಳೆಯುವವರಿಗೇಕೆ ಇನ್ನೊಂದು ರೀತಿ ಮನೋಬಾವನೆಯನ್ನು ತೋರಿಸಿದ್ದಿರಿ . ಇದನ್ನು ಆಲೋಚನೆ ಮಾಡಬೇಕು ಈ ರೀತಿ ಆಲೋಚನೆ ಮಾಡುವಾಗ

ನಮಗೆ ಒಂದು ವಿಚಾರ ಹೋಳೆಯುತ್ತದೆ ಮದ್ಯಮ ವರ್ಗದಲ್ಲಿರುವವರಿದ್ದರೆ ಅವರನ್ನು ಕೆಳದರ್ಜೆಗೆ ತಂದು ಕೆಳದರ್ಜೆಯವರಿಗೂ ಧನಿಕರಿಗೂ ಇರುವ ಅಂತರವನ್ನು ಹೆಚ್ಚಿಗೆ ಮಾಡುವ ಮೂಲಕ ನೀವು ನಿಮ್ಮ ಪಾರ್ಟಿಯ ವರ್ಚಸ್ಸನ್ನು ಹೆಚ್ಚಿಗೆ ಬೆಳೆಸೋಣ ಧನಿಕರ ಅಭಿಮಾನವನ್ನು ಹೆಚ್ಚಿಗೆ ಬೆಳೆಸೋಣ ಎನ್ನುವ ತಾಳಿರುತ್ತೀರೆಂಬುದು ನಮಗೆ ಕಾಣಿಸುತ್ತದೆ. ಈ ವರದಿಯನ್ನು ಬರೆದಿರುವವರು ಹೇಳುವುದೇನಿದೆಯೋ ಅದು ನನಗೆ ಗೊತ್ತಾಗಲಿಲ್ಲ. ಬೊಂಬಾಯಿ ಆಕ್ಟಿನಲ್ಲಿ ಒಂದು ಸೆಕ್ಷನ್ ಇದೆ . ಅವರಂತೆ ಅಡಿಕೆ ತೋಟಗಳಿಗೆ ಈ ಕಾನೂನನ್ನು ಜಾರಿಗೆ ಮಾಡಿಲ್ಲ. ಅದು ಒಳ್ಳಯದೋ, ಕೆಟ್ಟದ್ದೋ ಆ ಮಾತು ಬೇರೆ. ಇಲ್ಲಿ ಮಾಡಿರುವುದು ಹೇಗಿದೆಯೆಂದರೆ, ಕಾಪೀ ಪ್ಲಾಂಟೇಶನ್‌ಗಳನ್ನು ಹಾಗೆಯೇ ಇಟ್ಟುಕೊಂಡು, ತೆಂಗು ಅಡಿಕೆ ತೋಟಗಳನ್ನು ಒಡೆದು ಹಾಕಿ ಅದರ ಮೂಲಕ ಮದ್ಯಮವರ್ಗದವರನ್ನು ಒಡೆಯುವ ಮನೋಬಾವನೆಯನ್ನು ಮಾಡಿದ್ದಾರೆ ಈ ಪಕ್ಷಪಾತ ಮನೋಬಾವನೆ ಏಕೆ ಬಂತೋ ನನಗೆ ಗೊತ್ತಿಲ್ಲ ಈಗ ಇರುವ ಪ್ಲಾಂಟೇಶನ್‌ಗಳಿಗೆ ಸೀಲಿಂಗ್ ಪಾಯಿಂಟ್ ಇಡುವುದಕ್ಕೆ ಕಾರಣವೇನೆಂಬುದನ್ನು ನಾವು ಗಮನಿಸಬೇಕು, ಹಿಂದೆ ಇದ್ದುದಕ್ಕಿಂತ ಮುಂದೆ ಬರುವುದಕ್ಕೆ ಸೀಲಿಂಗ್ ಪಾಯಿಂಟ್ ಇರಲೇಬೇಕು ಅದಕ್ಕೆ ನಮ್ಮ ಪಾರ್ಟಿನಿಲುವು ಇದೆ ಆದರೆ ಸೀಲಿಂಗ್ ಎನ್ನುವುದು ಎಲ್ಲರಿಗೂ ಸಮನಾಗಿ ಅನ್ವಯಿಸಬೇಕು. ಯಾವ ರೀತಿ ಹಂಚಬೇಕು ಎನ್ನುವುದನ್ನು ಯೋಚನೆ ಮಾಡುವಾಗ ಬೇರೆ ಭಾಗದ ಜಮೀನಿಗೆ ಯಾವರೀತಿ ಮಾಡಬೇಕೆಂಬುದು ಇದ್ದಾರೋ ಇಲ್ಲಿಯೂ ಅದೇರೀತಿ ಮಾಡಬೇಕು ಇದರಲ್ಲಿ ಬೇಕಾದಷ್ಟು ತೊಡಕು ಇದೆ ಒಂದು ತೋಟವನ್ನು ಒಡೆದು ಹಾಕುವುದಕ್ಕೆ ಬದಲಾಗಿ ಅದನ್ನು ಮಾಡುತ್ತಾ ಇರುವವರೆಗೆ ಕೊಟ್ಟರೆ ಅವರು ಅದನ್ನು ಮಮತೆಯಿಂದ ಕಾಪಾಡುತ್ತಾರೆ ತೋಟ ಎಂದರೆ ತೆಂಗಿನ ತೋಟ, ಅಡಿಕೆ ತೋಟ ಮಾತ್ರವೇ ಅಲ್ಲ ಎಲ್ಲದಕ್ಕೂ ಒಂದೇ ರೀತಿಯಾ ಮನೋಬಾವನೆ ಇರಬೇಕು ನಮ್ಮ ನಿಲುವೇನು ಎಂಬುದನ್ನು ಆಲೋಚನೆ ಮಾಡಬೇಕು ಯಾರು ಜಮೀನು ಮಾಡುತ್ತಿದ್ದಾರೋ ಅವರಿಗೆ ಜಮೀನು ಹೋಗಬೇಕು ,ಅವನೇ ಜಮೀನಿನ ಮಾಲಿಕ ನಾಗಬೇಕು ಇಲ್ಲಿ ಹಾಗೆ ಮಾಡಲಿಲ್ಲ. ಇಲ್ಲಿ ಪಕ್ಷಪಾತ ಮನೋಬಾವನೆಯನ್ನು ತೋರಿಸಿದ್ದಾರೆ. ಯಾರು ಜಮೀನು ಮಾಡುತ್ತಾರೋ ಅವರ ಜಮೀನನ್ನು ಹಂಚುವಾಗ ಅದರ ಅರ್ದ ಬಾಗದಷ್ಟು ಫ್ಯಾಮಿಲಿ ಹೋಲಿಂಗ್ಸ್‌ಗೆ ಕೊಡಬೇಕೆಂದು ಮೊಗಂ ಆಗಿ ಹೇಳಿ ಸೀಲಿಂಗ್ಸ್ ಪಾಯಿಂಟನ್ನು ಬಿಟ್ಟರು ಇಲ್ಲಿ ಒಂದು ಹೊಸ ನಮೂನೆಯನ್ನು ಇಟ್ಟುಕೊಂಡಿದ್ದಾರೆ. ಟೆನೆಂಟ್ ಆಗಿರುವವರು ಇಷ್ಟೇ ಇಟ್ಟುಕೊಳ್ಳಬೇಕೆಂದಿದೆ. ಆದರೆ ಜಮೀನು ಮಾಲಿಕನಾಗಿದ್ದರೆ, ಅಷ್ಟು ವಾಪಸ್ಸು ತೆಗೆದುಕೊಳ್ಳಬಹುದು , ಅವನಿಗೆ ಸೀಲಿಂಗ್ಸ ಪಾಯಿಂಟ್ ಲನ್ಸಿಡರ್ ಷನ್ ಇಲ್ಲ. ಇದು ನಮ್ಮ ತತ್ವಕ್ಕೆ ಸರಿ ಹೋಗುತ್ತದೆಯೇ? ಯಾವನಾದರು ಒಬ್ಬ ಟೆನೆಂಟ್ ಆಗಿರುವವನು ಸಂಸಾರದಲ್ಲಿ ಐದು ಜನಗಳಿಗಿಂತ ಕಡಿಮೆ ಇದ್ದರೆ, ನಾಲ್ಕುವರೆಯಷ್ಟು ಫ್ಯಾಮಿಲಿ ಹೋಲಿಂಗ್ಸ್ ಆದರೆ, ಆದರೆ ಐದು ಜನಾಳಿಗಿಂತ ಜಾಸ್ತಿಇದ್ದ'ರೆ ಫ್ಯಾಮಿಲಿ ಹೋಲಿಂಗ್ಸ್ ನಾಲ್ಕುವರೆಯಷ್ಟಿರುವುದು ಅದರ ಡಬಲ್ ಆಗುತ್ತದೆ ಅಂದರ ಎರಡರಷ್ಟು ಆಗಿತ್ತದೆ ಅದನ್ನು ಬಿಟ್ಟು ಬಾಕಿ ಜಮೀನನ್ನು

ತೆಗೆದುಕೊಂಡು ಜಮೀನು ಇಲ್ಲದವರಿಗೆ ಕೊಟ್ಟಿದ್ದಾರೆಯೇ ಎಂದರೆ ಅದೂ ಇಲ್ಲ. ಇದನ್ನು ಸರಿಯಾಗಿ ಹೇಳಲಿಲ್ಲ. ಇದರ ವಿಚಾರವಾಗಿ ಏನು ಮಾಡಬೇಕೆಂಬುದನ್ನು ಹೇಳುವುದನ್ನು ಏತಕ್ಕೆ ಮರೆತದ್ದಾರೂ ಗೊತ್ತಾಗಲಿಲ್ಲ. ಈ ದೃಷ್ಟಿಯಿಂದ ಎಷ್ಟು ವಿದವಾಗಿ ಹೇಳಿದರೂ ಕಡಿಮೆ ಆಗಿರುತ್ತದೆ. ಇದು ದೊಡ್ಡ ಪ್ರಶ್ನೆ. ಮುಂದೆ ಜಮೀನನ್ನು ಹಂಚುವಾಗ ಯಾರಿಗೆ ಕೊಡುತ್ತೀರಿ ಎಂಬ ಪ್ರಶ್ನೆಯನ್ನು ಸಹ ನಾವು ಆಲೋಚನೆ ಮಾಡಲಿಲ್ಲವೆಂದು ತಾವು ತಿಳಿದುಕೊಳ್ಳಬವುದು. ಭೂಮಿಯಲ್ಲಿ ಸಾಗುವಳಿ ಮಾಡುವ ಜಮೀನು ಎಷ್ಟಿದೆ, ಸಾಗುವಳಿ ಮಾಡುವ ಜಮೀನನ್ನು ಹಂಚುವುದರಲ್ಲಿ ಯಾವರೀತಿ ಮಾಡುತ್ತೀದ್ದೀರಿ ಎಂಬುದನ್ನು ನಾವು ಸಂಪೂರ್ಣವಾಗಿ ಆಲೋಚನೆ ಮಾಡಿದ್ದೇವೆ. ಇದರಲ್ಲಿ ಏನಾದರು ಒಂದು ನಿಗದಿಯಾದ ಮಾರ್ಗವನ್ನು ಇಟ್ಟುಕೊಂಡೀದ್ದೀರಾ ? ಜಮೀನು ಮಾಡುವವರು ಎಷ್ಟು ಜನರಿದ್ದಾರೆ ಜಮೀನಿನಿಂದ ಜೀವನ ಮಾಡುವ ಜನರ ಅಂಕಿ ಅಂಶಗಳಿವೆಯೇ, ಬೇರೆ ವಿಧವಾಗಿ ಜೀವನ ಮಾಡುವವರು ಎಷ್ಟು ಪ್ಯಾಮಿಲಿಯವರು ಇದ್ದಾರೆ ಎಂಬುದಕ್ಕೆ ಏನಾದರು ಸ್ಟಾಟಿಸ್ಟಿಕ್ಸ ತೆಗೆದಿದ್ದೀರಾ, ಯಾರ್‍ಯಾರಿಗೆ ಯಾವ ಯಾವ ನಮೂನೆ ಮೂಲಕ ಜಮೀನುಕೊಡಬೇಕೋ ಆ ರೀತಿ ಅವರಿಗೆ ಕೊಟ್ಟು ನಮ್ಮ ಸಮಾಜದಲ್ಲಿರತಕ್ಕ ಎಲ್ಲಾ ಆರ್ಥಿಕ ಸಲಕರಣೆಗಳನ್ನು ಸಾಮಾನ್ಯವಾಗಿ ಹಂಚುವ ಒಂದು ವ್ಯವಸ್ಥೆ ಇದರಲ್ಲಿ ಎಲ್ಲಿಯಾದರೂ ಇದೆಯೇ ಎಂದರೇ ಅದರ ಸುದ್ದಿಯೇ ಇಲ್ಲ. ಈಗ ಇದು ಜಮೀನಿಗೆ ಸಂಬಂಧ ಪಟ್ಟದ್ದು . ಇದನ್ನು ಏಕೆ ಹೇಳುತ್ತೇನೆಂದರೆ, ಜೀವನ ನಾನಾ ನಮೂನೆಯದು: ತೊಡಕಿನ ಬಾವನೆಯನ್ನು ಹೊಂದಿರತಕದ್ದು ; ಜೀವನ ಒಂದು ಮಾರ್ಗವನ್ನು ನಿಗದಿ ಮಾಡುವ ಹಣೆಯ ಬರಹವನ್ನು ಸರ್ಕಾರದವರು ಲೇಖಣಿ ಇಟ್ಟು ಕೊಂಡು ಬರೆಯುವಾಗ ಇನ್ನೋಂದು ಕಡೆ ಏಟು ಬಿದ್ದು ಸಮಾಜಕ್ಕೆ ಕೆಡಕು ಆಗಿದ್ದುದು ನಮ್ಮ ಗಮನಕ್ಕೆ ಬಂದಿದೆ ಸಮಾಜದಲ್ಲಿರತಕ್ಕ ಎಲ್ಲಾ ಆರ್ಥಿಕ ಸಲಕರಣಿಗಳನ್ನು ಸಮಾನಾಗಿ ಹಂಚುವಾಗ ಸಮಾನವಾದ ತತ್ವವನ್ನು ಇಟ್ಟುಕೊಳ್ಳಬೇಕು ಇದು ಬರೀ ಜಮೀನಿಗೆ ಸಂಬಂದ ಪಟ್ಟ ವಿಚಾರ ಎಂದು ಹೇಳುವ ವಾದ ಅರ್ಥವಿಲ್ಲದ ವಾದ, ಅಂತಹ ಅರ್ಥಶೂನ್ಯವಾದ ವಾದವನ್ನು ಮಾಡಬೇಡಿ. ಜಮೀನಿಗೆ ಸಂಬಂಧ ಪಟ್ಟ ಎಲ್ಲಾ ಕಾನೂನುಗಳನ್ನು ಏಕಾಏಕಿ ತರಬಹುದೇ ? ಸರ್ಕಾರಿ ನೌಕರರಲ್ಲಿ ಸಂಬಳ ಸಾರಿಗೆಗಳಲ್ಲಿ 75 ರೂಪಾಯಿ, 35 ರೂಪಾಯಿ, 30 ರೂಪಾಯಿ ವ್ಯತ್ಯಾಸವಿದ್ದಹಾಗೆ ಇಲ್ಲಿ ಇಟ್ಟು ಕೊಂಡಿದ್ದರೆ, ನಾನು ಬೇಡವೆಂದು ಹೇಳುತ್ತಿರಲಿಲ್ಲ. ಜತ್ತಿ ಸಮಿತಿ ವರದಿಯಲ್ಲಿ ಅನೇಕ ದುರ್ಭಾವನೆಗಳು ಅಡಕವಾಗಿ ಯಾವ ಯಾವ ರೀತಿ ಉತ್ಪ್ರೇಕ್ಷೇಯಿಂದ ನೋಡುತ್ತಿದ್ದಾರೆ . ಎಷ್ಟೆಷ್ಟರ ಮಟ್ಟಿಗೆ ಪುರಸ್ಕರಿಸಿ ನೋಡುತ್ತಿದ್ದಾರೆ ಎನ್ನುವ ಪಕ್ಷಪಾತ ಮನೋಬಾವನೆಯನ್ನು ತೋರಿಸಿದ್ದಾರೆ. ಆ ರೀತಿ ಪಕ್ಷಪಾತ ಮನೋಬಾವನೆಯನ್ನು ತೋರಿಸುತ್ತಾ ಹೋದರೆ ದೇಶದ ಪ್ರಗತಿಗಾಗಲಿ ಜನರ ಹಿತಕ್ಕಾಗಲಿ, ಗೌರವಕ್ಕಾಗಿ ಸಾದುವಲ್ಲ. ಆದ್ದರಿಂದ ನಾನು ಹೆಚ್ಚಿಗೆ ಹೇಳುವುದಿಲ್ಲ, ಏಕೆಂದರೆ ಇದರಲ್ಲಿ ಹೇಳುವ ಅಂಶಗಳು ಬಹಳ ಇವೆ.

ಈ ಜಮೀನು ಪದ್ಧತಿ ಎನ್ನುವುದು ಬಹಳ ತೊಡಕಿನ ಸಮಸ್ಯೆ. ಇದನ್ನು ಒಂದು ಕಡೆ ಬಿಡಿಸುತ್ತಾಹೋದರೆ ಮತ್ತೊಂದು ಕಡೆಯಿಂದ ಇದು ಏಟು ಹೊಡೆಯಿರುತ್ತದೆ. ನಾವೆಲ್ಲರು ಇದುವರೆಗೂ ನಮ್ಮಲ್ಲಿರತಕ್ಕ ಜಮೀನನ್ನು ಒಂದು ಸ್ಥಿರವಾದ ಆಸ್ತಿಯೆಂದು ಭಾವಿಸಿದ್ದೆವು. ಇನ್ನು ಮೇಲೆ ಜಮೀನು ವ್ಯವಸಾಯ ಮಾಡುವ ಜನರೆ ಮುಂದೆ ಆ ಜಮೀನಿಗೆ ಒಡೆಯರಾಗುತ್ತಾರೆಂದು ಬಾವಿಸಿದ್ದೆವು. ಭೂ ಸುಧಾರಣೆಯನ್ನು ಮಾಡುತ್ತೇವೆ ಎಂದರೆ ತಮ್ಮ ಅರ್ಥವೇನೆಂಬುದೆ ನನಗೆ ಗೊತ್ತಾಗುತ್ತಿಲ್ಲ. ಸೆಕ್ಯೂರಿಟಿ ಆಫ್ ಟೆನ್ಯೂರ್ ಎನ್ನುವುದರ ಅರ್ಥವೇನು ? ಇಲ್ಲಿ ತಾವು ಹೇಳಿರುವ ಟೆನೆನ್ಸಿಗೂ ಮತ್ತು ಟೆನ್ಯೂರಿಗೂ ಬಹಳ ವ್ಯತ್ಯಾಸವಿದೆ ಈ ದಿವಸ ದೇಶದಲ್ಲಿರತಕ್ಕ ನಾನ ಉದ್ಯಮಗಳು ಒಂದೊಂದು ಆಸ್ತಿಯಂತಲೆ ಹೇಳಬೇಕಾಗುತ್ತದೆ. ಜಮೀನು ಮಾಡತಕ್ಕವನಿಗೆ ಜಮೀನೇ ಆದಾರ ; ಲೇಖನಿ ಹಿಡಿದಿರತಕ್ಕವನ ಜೀವನಕ್ಕೆ ಆಲೇಖನಿಯೇ ಒಂದು ಆಸ್ತಿ ; ಹಿಗೆಯೇ ಪ್ರತಿಯೊಂದು ಉದ್ಯಮವು ಒಬ್ಬರ ಜೀವನಾದಾರದ ಆಸ್ತಿ . ಇದರಿಂದಲೇ ಇಲ್ಲಿಯ ತನಕ ಜನರು ಜಮೀನನ್ನು ಒತ್ತೆ ಇಟ್ಟು ಜೀವನ ನೆಡೆಸುತ್ತಿದ್ದರು . ಅಂಥ ಒಂದು ರಹ ಇಲ್ಲಿಯವರೆಗು ಇತ್ತು. ರೈತನಿಗೆ ಕಷ್ಟಕಾಲ ಒದಗಿದಾಗ ಆತನ ಭೂ ಆಸ್ತಿಯನ್ನು ಮಾರಿ ಅದರಿಂದ ಬರುತ್ತಿದ್ದ ಉತ್ಪತ್ತಿಯನ್ನು ಬೇರೆಬೇರೆ ಮಾರ್ಗದಲ್ಲಿ ಉಪಯೋಗಿಸಲು ಆತನಿಗೆ ಅವಕಾಶವಿತ್ತು. ಆದರೆ ಮುಂದೆ ಇದರ ಪರಿಣಾಮ ಏನಾಗುತ್ತದೆ ಎನ್ನುವುದು ಈ ವರದಿಯಲ್ಲಿ ವ್ಯಕ್ತಪಟ್ಟಿಲ್ಲ. ಇನ್ನು ಮುಂದೆ 20 ವರ್ಷಗಳತನಕ ಒಬ್ಬ ಗೇಣಿದಾರರಿಗೆ ಜಮೀನನ್ನು ಕೊಟ್ಟರೆ ಅವನು ಆ ಅವಧಿ ಯೆಲ್ಲಾ ಮುಗಿದರು ಅವನು ಹಾಗೆಯೆ ಬರೀಗೇಣಿದಾರನಾಗಿಯೇ ದುಡಿಯುತ್ತಾನೆ. ಮೇಲ್ಪಟ್ಟು ಅವನು ಆ ಜಮೀನನ್ನು ಪರಬಾರೆ ಮಾಡುವ ಹಕ್ಕು ಕೂಡ ಅವನಿಗಿಲ್ಲ. ಇದು ಖಾಯಂ ಆದಂತಾಯಿತು. ಇದನ್ನು ಟೆನೆನ್ಸಿಸಿ ಪ್ರೋಟೆಕ್ಷನ್ ಎಂದು ಕರೆದಿದ್ದಾರೆ. ನಾನು ತಿಳಿದುಕೊಂಡಿರುವುದು ಈ ಟೆನೆನ್ಸಿಸಿ ಆಫ್ ಪ್ರೋಟೆಕ್ಷನ್ ಎಂದರೆ ರೈತನಿಗೆ ಈ ಜಮೀನು ನನ್ನದು ಇದ ಪರರದು ಎನ್ನುವ ಬಾವನೆ ಮೂಡಿಸುವುದು ಎಂದು ತಿಳಿದುಕೊಂಡಿದ್ದೆ. ಆದರೆ ಸರ್ಕಾರ ಹೀಗೆ ಒಂದಾವರ್ತಿ ಗೇಣಿಗೆ ಜಮೀನುಗಳನ್ನು ಕೊಟ್ಟಮೇಲೆ ಅವುಗಳನ್ನು ಪುನಃ ಅವರಿಂದ ಹೇಗೆ ವಾಪಾಸು ತೆಗೆದುಕೊಳ್ಳಲು ಅವಕಾಶಕೊಡುತ್ತಾರೋ ಅದು ನನಗೀಗ ತಿಳಿಯಲಿಲ್ಲ. ಜಮೀನು ಮಾಲಿಕ ಎಂದು ಹೇಳಿಕೊಳ್ಳತಕ್ಕವನು ಜಮೀನನ್ನು ಯಾವತ್ತು ಅಬಾದು ಮಾಡಿಲ್ಲ. ಆ ಬಗ್ಗೆ ಅವನು ಎಳ್ಳಷ್ಟು ಪ್ರಯತ್ನ ಮಾಡಿರುವುದಿಲ್ಲ. ಆ ಜಮೀನನ್ನು ಉತ್ತಮ ಗೊಳಿರುವವನು ಗೇಣಿದಾರ. ಹೀಗಿದ್ದರು ಆ ಗೇಣಿದಾರರನ್ನು ಬಿಡಿಸಿ ಆ ಜಮೀನನ್ನು ಮತ್ತೆ ಅದರ ನಾಮಕಾವಸ್ತೆ ಮಾಲೀಕನಿಗೆ ಕೊಡಬಹುದೆಂದು ಹೇಳಿರುವುದರಲ್ಲಿ ಗೇಣಿದಾರನನ್ನು ಎಷ್ಟರ ಮಟ್ಟಿಗೆ ಎಕ್ಸ್‌ಪ್ಲಾಯಿಟ್ ಮಾಡಿಕೊಳ್ಳಲಾಗಿದೆ ಎಂಬುದು ಎದ್ದು ಕಾಣುತ್ತಿದೆ ಒಬ್ಬರ ದುಡುಮೆಯನ್ನು ಇನ್ನೊಬ್ಬರು ತಿನ್ನಬಾರದೆಂದು ರಾಜ್ಯಾಂಗದಲ್ಲಿ ಹೇಳಿದೆ . ಹೀಗೆ ಹೇಳಿದ್ದಾಗಲೂ ಸಹ ಜಮೀನ್ದಾರನಾಗಿರತಕ್ಕವನು ತನ್ನ ಜಮೀನೀನ ಬಗ್ಗೆ ಎಳ್ಳೋಷ್ಟು ಆಸಕ್ತಿ ವಹಿಸದೇ ಇದ್ದಾಗ ಆ ಜಮೀನಿಗೆ ವಿಶೇಷವಾಗಿ ಶ್ರಮಿಸಿ , ಅದನ್ನು

ಉತ್ತಮ ಪಡಿಸಿದಂತ ಗೇಣಿದಾರನನ್ನು ಈ ದಿವಸ ಒಬ್ಬ ಕೂಲಿಗಾರನ ಮಟ್ಟಕ್ಕೆ ಇಳಿಸಿದಂತಾಯಿತು , ನ್ಯಾಯವಾಗಿ ಎಕ್ಸ್‌ಪ್ಲಾಯಿಟೇಷನ್ ತಪ್ಪಿಸುವುದರ ಬದಲು ಅದನ್ನು ಇಮ್ಮಡಿ ಮಾಡಿದ್ದಾರೆ. ರೈತನಾಗಿ ಗೇಣಿಸಾಗುವಳಿಮಾಡತಕ್ಕವನು. ಆ ಜಮೀನಿಗೆ ಗೊಬ್ಬರ ಹಾಕಿ ಅದಕ್ಕೆ ಬೇಕಾದಷ್ಟು ಶ್ರಮ' ಖರ್ಚು ಮಾಡಿ ಆ ಭೂಮಿಯನ್ನು ಕಾಲಕಾಲಕ್ಕೆ ಸರಿಯಾಗಿ ಸಾಗುವಳಿ ಮಾಡಿ ಹೀಗೆ ಎಲ್ಲಾ ವಿಧದಲ್ಲೂ ಆ ಭೂಮಿಯ ಉತ್ತಮ ಸ್ಥಿತಿಗೆ ಕಾರಣನಾಗಿರತಕ್ಕಂತ ರೈತನ ಹಿತವನ್ನು ಸಂಪೂರ್ಣವಾಗಿ ಕೈ ಬಿಡಲಾಗಿದೆ ಹೀಗೆ ಜಮೀನಿನ ಉತ್ತಮ ಸ್ಥಿತಿಗೆ ವಿಶೇಷವಾಗಿ ದುಡ್ಡನ್ನು ಖರ್ಚು ಮಾಡಿ , ಆ ಜಮೀನಿನ ಉಳುಮೆ, ಅದಕ್ಕೆ ಎತ್ತು ಇತ್ಯಾಧಿ ನಾನಾ ರೂಪದಲ್ಲಿ 20 ವರ್ಷಗಳ ಪರಿಯಂತ ಬಂಡವಾಳ ಹಾಕಿ ಶ್ರಮಿಸಿದಂಥವನಿಗೆ ಈ ದಿವಸ ದೊರಕಿಸಿ ಕೊಟ್ಟಿರುವ ಪ್ರತಿಪಲವೇನೇಂದರೆ, ಆ ಮನುಷ್ಯ ಆ ಜಮೀನನ್ನು ಯಾರಿಗೂ ಪರಬಾರೆ ಮಾಡಬಾರದು ಎಂಬುದು , ಆದರೆ ಯಾರು ಕೇವಲ ಮಾಲಿಕನೆನಸಿಕೊಂಡು ಆ ಆಸ್ತಿಯ ಬಗ್ಗೆ ಎಳ್ಳಷ್ಟು ಶ್ರಮಿಸದವನಿಗೆ ಯಾವ ಅನುಕೂಲತೆಗಳನ್ನು ಕೊಡಲಾಗಿದೆ ಎಂಬುದನ್ನು ಹೋಲಿಕೆ ಹಾಕಿ ನೋಡಿದರೆ ಅನ್ಯಾಯವೆಂಬುದು ಎದ್ದುಕಾಣುತ್ತದೆ , ಹೀಗೆ ಇಲ್ಲಿಯವರೆಗೂ ಜಮೀನು ಅಬಾದು ಮಾಡಿರತಕ್ಕ ರೈತನಿಂದ ಆ ಜಮೀನನ್ನು ಕಿತ್ತುಕೋಂಡು ಪನಃ ಮಾಲಿಕನಿಗೆ ಕೊಡಬಹುದೆಂದು; ಇಲ್ಲಿ ಹೇಳತಕ್ಕದ್ದು ಎಕ್ಸಪ್ಲಾಯಿಟೇಷನ್ ಅಲ್ಲದೆ ಮತ್ತೇನಾಗುತ್ತದೆ? ಒಬ್ಬ ಸದಸ್ಯರು – 'ಎಕ್ಸಪ್ಲಾಯಿಟೇಷನ್' ಎಂಬುದರ ಅರ್ಥವೇನು?

ಶ್ರೀ ಕೆಂಚಪ್ಪ – ಸ್ವಾಮಿ, ಈ ಸಭೆಯಲ್ಲಿ ಆಡಳಿತ ಪಕ್ಷದವರ ಧೋರಣೆಯೇ ಒಂದುರೀತಿಯಾಗಿದೆ . ಆದರೆ ಅವರು ಹೇಳುವ ಹಾಗೆ ನಾನು ಹೇಳುವುದಕ್ಕೆ ಆಗುವುದಿಲ್ಲ ; ಅದು ಸಾದ್ಯವೂ ಇಲ್ಲ . ಆದ್ದರಿಂದ ನಾನು ಹೇಳುತ್ತಿರುವುದನ್ನು ಅವರು ಯಾವ ರೀತಿ ಬೇಕಾದರು ತಿಳಿದುಕೊಳ್ಳಬಹುದು . ಆದರೆ ಇಲ್ಲಿ ಎಲ್ಲರ ಮನಸ್ಸಿಗೂ ಸೋಗಸುವಂತೆ' ಮಾತನಾ'ಡತಕ್ಕ ಶಕ್ತಿಯನ್ನು ದೇವರು ನನಗೆ ಕೊಟ್ಟಿಲ್ಲ . ಎಕ್ಸ್'ಪ್ಲಾಯಿಟೇಷನ್ ಎಂದರೆ ಎನೆಂಬುದರ ಬಗ್ಗೆ ನಾನೀಗ ಇಂಡಿಯನ್ ಕಾನ್‌ಸ್ಟಿಟೂಷನ್ನಿನ ಕೆಲವು ಭಾಗಗಳನ್ನು ಓದುತ್ತೇನೆ . ಆದರೆ ಒಟ್ಟಿನಲ್ಲಿ ಈ ಎಲ್ಲ ಪ್ರಾವಿಜನ್‌ಗಳ ಒಳತ್ವ ಒಬ್ಬರನ್ನು ಮತ್ತೋಬ್ಬರ ಶೋಷಣೆ ಮಾಡಲು ಯಾರೋಬ್ಬರಿಗೂ ಅವಕಾಶವಿರಬಾರದೆಂಬುದೇ ಆಗಿದೆ .ದೇಶದ ಸ್ವತ್ತನ್ನು ಸಂಪಾದನೆಯನ್ನು ಹಂಚುವಾಗ ಒಬ್ಬರಿಗೆ ಒಂದೋಂದು ರೀತಿಯಲ್ಲಿ ಹಂಚಿಕೆ ಮಾಡಬಾರದೆಂದು ವಿದಿಯಲ್ಲಿ ಹೇಳಿದೆ , ಆದರೆ ಇಲ್ಲಿಯೂ ಸಹ "ಶೋ'ಷಣೆಯನ್ನು ತಪ್ಪಿಸತಕ್ಕದ್ದು " ಎಂಬುದಾಗಿಯೇ ಶಿರೋನಾಮೆ ಇದೆ .ಈಶಿರೋನಾಮೆ ಪ್ರಕಾರ ಶೋಷಣೆ ತಪ್ಪಿಸತಕ್ಕದ್ದು ಸರ್ಕಾರದವರ ಆದ್ಯ ಕರ್ತವ್ಯ . ಮೊನ್ನೆ ಬರ್ಧಂಪುರದಲ್ಲಿ ನೆಡೆದ ಬಹಿರಂಗ ಸಭೆಯಲ್ಲಿ ಹೀಗೆ ಹೇಳಿದ್ದಾರೆ ;

In this connection , I will read the significant resolution passed reasently at a public meeting at Orissa , which was presided over by the Speaker ,of the Legislative Assembly ;

" this meeting emphatically protests aainest the genaral tendency on the part of the central and state Governments and most of the political Leaders to completely ignore and disregard the Legitimate interests of the middle-class and their modest investments and deeply deploies that every reform should be shoud to be carried out solely at the expense of the already hard - hit middle-class While in advance western democracies , equtable distribution of national wealth is brought about by evelling down the wealthiest section by a widely created system of taxation and evelling up the poorer sections by ensuring better and varied means of ivelihood, there by bringing all, generally, to the middle - class level , while in our country , the unfortunete effect of the opasided reform is to make them ever more insecure there by creating a greater gulf between teh poorer and ncher classes . this is all the more diplorable and shart - sigted since no alternetive means of levelihood or Social security for all is done in the name of social justice and socialist pattern of society . this meeting warns the concerned authorities and the political leadars that to reduce the middle-class to frustration and desperation is the surest way to hasten the Social up heaval intended to be averted by all. "

ಈ ರೀತಿಯಾಗಿ ಅವರು ಹೇಳಿದ್ದಾರೆ. ಆದುದರಿಂದ ನಾನು ಹೇಳುವುದನ್ನು ನಮ್ಮ ಮಾನ್ಯ ಸದಸ್ಯರು ಹೇಳಬಹುದು. ನಾನು ಒಂದೇ ಒಂದು ವಿಷಯವನ್ನು ಹೇಳಿಮುಗಿಸಿಬಿಡುತ್ತೇನೆ. ಹಿಂದೆ ಯಾರು ಯಾರು ಜಮೀನನ್ನು ತೆಗೆದುಕೊಂಡು ಬಿಟ್ಟಿದ್ದಾರೋ, ಮತ್ತು ಯಾವ ವಿಧದಿಂದ ತೆಗೆದುಕೊಂಡರೋ, ಅದನ್ನು ವಾಪಾಸು ಕೊಡಿಸಲು ಸರಿಯಾದ ಶಾಸನವನ್ನು ಮಾಡಿ ಮತು ಸರಿಯಾದ ಕಾನೂನನ್ನು ಮಾಡಬೇಕೆಂದು ಹೇಳುತ್ತಲೇ ಇದ್ದೇನೆ , 1948ನೇಯ ಇಸವಿಯಿಂದ ಇದುವರೆಗೂ ಇಲ್ಲವೆಂದು ಹೇಳುತ್ತಿದ್ದಾರೆ . ನಮ್ಮಲ್ಲಿ ದಾಖಲೆ ಇಲ್ಲ ಎನ್ನುತ್ತಾರೆ. ನಾನು ಸ್ವಲ್ಪ ಲಾಯರ್ ಗಿರಿ ಮಾಡಿದ್ದೇನೆ. ನನಗೆ ತಿಳಿದಂತೆ ದಾಖಲೆ ಇದೆ. ಪಹಣಿ ದಾಖಲೆ ಎಂದಿದೆ. ಇದನ್ನು 12 ವರ್ಷಗಳವರೆಗೆ ಇಟ್ಟುಕೊಳ್ಳಬೇಕೆಂದಿದೆ. ಹೀಗೆ 12 ವರ್ಷ ಇಟ್ಟುಕೊಳ್ಳಬೇಕೆಂದಿರುವಾಗ, ಈಗಾಗಲೇ ಈ 12 ವರ್ಷದ ಅವದಿ ಮುಗಿಯುತ್ತಾ ಬಂದಿದೆ . ಈಗಾಗಲೇ 57 ನೆಯ ಇಸವಿ ವೇಳೆಗೆ ಇದನ್ನೆಲ್ಲ ಸರಿಯಾಗಿ ಇಟ್ಟುಕೊಳ್ಳಬೇಕಾಗಿತ್ತು . ಈ ಪಹಣಿಯಲ್ಲಿ ಯಾರು ಯಾರು ಜಮೀನುಗಳನ್ನು ಮಾಡುತ್ತಿದ್ದಾರೆ , ಮತ್ತು ಆ ರೀತಿ ಜಮೀನು ಮಾಡುವವರು, ಸಂಬಂಧ ಪಟ್ಟ ಜಮೀನನ್ನು ಮಾಡತಕ್ಕವರು, ಸರಕಾರಿ ನೌಕರಿಯಲ್ಲಿ......

**Sri M. P. Patil -** On a Point informetion ,Sri I have myself seen some of these Regisrters and what the Hon'ble Leader of oposition says is not quite correct . In some register the names of tenants are entered .that is true , but that is in very fev cases .

ಶ್ರೀ ಕೆ. ಕೆಂಚಪ್ಪ:- ಎಂದ ಮೇಲೆ, ನಾನಾ ಕೇಳುತ್ತೇನೆ, ಒಂದು ಫಾರಂವಲ್ಲಿ ಮೂಲ ನಿಡುವಳಿದಾರ ಎಂದು ಹೇಳಿ ಮತ್ತೊಂದು ಕಾಲಂ ಇದ್ದರೆ ಅದನ್ನು ಬಿಟ್ಟು Entry ಮಾಡದೇ ಇದ್ದರೆ ಹಾಗೆ ಇಂತಹ Entry ಮಾಡದೆ ಇರುವುದರಿಂದ ಪ್ರಜಾಸೇವಕರೆಂದು ಇಟ್ಟುಕೊಂಡಿರುವುದು ಸರಕಾರಿ ನೌಕರರು ಹೀಗೆ ಮಾಡುತ್ತಿರುವುದು ತುಂಬಾ ಶೋಚನೀಯ

**Sri M. P. Patil -** as a matter of fact , orders have already been isssued that entries should made in tenents registers and this work is going on in every villages.

ಶ್ರೀ ಕೆ. ಕೆಂಚಪ್ಪ:- ಸ್ವಾಮೀ, ಮುಂದೆ ಆಗುವುದನ್ನು ಹೇಳುವುದಕ್ಕಾಗುವುದಿಲ್ಲ, ಪ್ರಾಂತಗಳು ಈಗ ಮೈಸೂರು ಸಂಸ್ಥಾನಕ್ಕೆ ವಿಲೀನವಾಗಿದೆ. 48ನೆಯ ಇಸವಿಯಿಂದ ಕೂಡ ಈ ಪಹಣಿ ಪಾರಂ ಎಮದೆ ಇದೆ ಅದರಲ್ಲಿ ಒಮದು ಕಾಲಂ ಇದೆ; ಅದನ್ನು omit ಮಾಡಿದ್ದಾರೆ. ಅಂತಹ ಅಧಿಕಾರಿಗಳನ್ನು ನಿವು ಇಟ್ಟುಕೊಂಡಿದ್ದೀರಿ, ಅಂತಹ ನಾನಾ ತಪ್ಪಗಳನ್ನು ಮಾಡಿದ್ದಾರೆ. ಅದಕ್ಕಾಗಿ ಇದೆಲ್ಲವನ್ನು ಎನ್ ಕ್ವೈರಿ ಮಾಡಿ ಯಾರ್‍ಯಾರು ಜಮೀನು ಮಾಡಿದರು ಎನ್ನುವುದನ್ನು ಸೇರಿಸದೇ ಹೋದರೆ ಸರಿಯಾಗಿರುವುದಿಲ್ಲ. ಜಮೀನು ಮಾಡುವವರು ಯಾರು, ಜಮೀನುದಾರರು ಯಾರು ಎಂದು ಇಲ್ಲಿ ಎರಡು ಕಾಲಂಗಳು ಇವೆ. ಜಮೀನುದಾರರು ಯಾರು ಜಮೀನನ್ನು ಮಾಡದೆ ಇರುವವರು ಯಾರು ಎನ್ನುವುದಕ್ಕೆ ಪತ್ತೆ ಹಚ್ಚುವುದಕ್ಕೆ ಆಗುವುದಿಲ್ಲವೇನು? ಅದರಿಂದಾಗಿ ನಿವು ಹೇಳಿತ್ತಿರುವ ಸೋಸಿಯಾಲಿಸ್ಟಿಕ್ ಪ್ಲಾಟ್ರನ್ ಆಫ್ ಸೊಸೈಟಿ ಎನ್ನುವ ಸಮತವಾದ ಸಮಾಜ ಹೇಗೆ ಉಳಿಯುವುದು? ದೇಶಭೀಮಾನಿಗಳಾಗಿರುವವರು ಹೀಗೆ ಹೇಳಿದರೆ ಅದು ಸಮತಾವಾದವೆಂದು ಹೇಳುವುದಕ್ಕಾಗುತ್ತದೆಯೇ? ಅಲ್ಲದೆ ಇನ್ನು ಮುಂದೆ ನಾವು ಇನ್ನೇನು ಅನುಭವಿಸಬೇಕೋ ಹೇಳುವುದಕ್ಕಾಗುವುದಿಲ್ಲ. ಪ್ರಳಯ ಕಾಲದಲ್ಲಿ ಹುಟ್ಟುವ ಬೆಂಕಿ ಕೆಟ್ಟವರನ್ನು ಮಾತ್ರ ಸುಡುವುದಿಲ್ಲ. ಒಳ್ಳೆಯವರನ್ನೂ ಸುಡುತ್ತದೆ. ಹಿಗೆ ಪಾಪಮಾಡುವವರೆಲ್ಲ ಪ್ರಳಯ ಕಾಲದ ಬೆಂಕಿಗೆ ತುತ್ತಾಗಬೇಕಾಗುತ್ತದೆ. ಇದರಲ್ಲಿ ಮನೆಮಂದಿ ಮಕ್ಕಳೆಲ್ಲ ಸಾಯಬೇಕಾದ ಸ್ಥಿತಿ ಬರುತ್ತದೆ ಹೀಗೆ ಒಳ್ಳೆಯವರಾಗಿ ನೀವು ಈ ಪ್ರಳಯಕಾಲದ ಬೆಂಕಿಗೆ ಯಾರನ್ನು ನೂಕಬೇಕು ಮತ್ತು ಈ ಕೆಲಸವನ್ನು ಯಾರು ಮಾಡಬೇಕು ಎನ್ನುವುದನ್ನು ಈಗ ಆಲೋಚನೆ ಮಾಡಬೇಕು ತಮ್ಮಲ್ಲಿ ಕೇಳುತ್ತೇನೆ ನಮ್ಮ ಬುಕ್ಕಿನಲ್ಲೇನು ದಾಖಲೆ ಇಲ್ಲವೆ, ಬರೆದಿಲ್ಲವೇ? ಅದಕ್ಕೆಲ್ಲ ದಾಖಲೆ ಇವೆ ಕಾಲಂ ಇದೆ. ಆದರೆ ಆ ಬುಕ್ಕಿನಲ್ಲಿ ಎಂಟ್ರಿ ಮಾಡದೆ ಅದನ್ನು ಬಿಟ್ಟು ಬಿಟ್ಟಿದ್ದೀರಿ ಅದನ್ನು ದಾಖಲೆಯಲ್ಲಿ ಬಿಡಿ ಎನ್ನುವುದನ್ನು

ಒಪ್ಪುವುದಕ್ಕಾಗುವುದಿಲ್ಲ. ಹಿಂದೆ ಆಗಿದ್ದುದು ಈಗ ಆಗಬೇಕಾಗಿದ್ದುದ್ದನ್ನು ಮುಂದೆ ಈ ಗೇಣಿಶಾಸನ ಬರುವ ಸಂಬವ ಇದೆ ಎಂಬುದನ್ನು ತಿಳಿಸುಕೊಂಡು ನಿಮ್ಮ ಸೃಜನ ಪಕ್ಷಪಾತಕ್ಕಾಗಿ ನೀವು ಈ ರೀತಿ ಮಾಡಿದರೆ ಅದಕ್ಕೆ ನಾನೇನು ಮಾಡಬೇಕಾಗುತ್ತದೆ?

**Sri M. P. Patil.-** Sir, I am not able to follow what the Hon'ble leader of the opposoition is saying . Who has stated that they are left to their will ? Supposing an entry is not there those who want can product evidence and that evidence will be considered either by the tribunal or the court . entry is not a conclusive evidence. if there is no entry in the register. we cannot help it, but entries are being made I do not know what he is saying.

ಶ್ರೀ ಕೆ. ಕೆಂಚಪ್ಪ:- ಅದು topsy turvy ಪ್ರಶ್ನೆಯಾಗುತ್ತದೆ. ಏಕೆಂದರೆ ಇನ್ನು ಮುಂದೆ ಹೊದರೆ.......

**Sri. M. P. Patil -** If there is no record what is to be done ?

**Sri K. Kencheppa.-** It is the dutty of the officers to make enquiries as to who was cultivating the land .It is not the duty of the tenent to bring the records and show who was cultivating it. if you are intarested in socialistic pattern of society, if you are inrested in the wealth of the country being distributed enqually among the paople , if you are intrested that injustice should be done away with , the officers must find out who was cultivating the land . it is their duty .The tenants must have their due share.

ಆದುದರಿಂದ ಇದನ್ನು ನಾವು ನೊಡಬೇಕಾಗುತ್ತದೆ. ಸುಮ್ಮನೆ ನಾವು ಹೀಗೆ ತೆಗೆದುಕೊಂಡು ಬರುವ ಹಾಗಿಲ್ಲ. ಇದು ಸೊಸಿಯಲಿಸ್ಟಿಕ್ ಪ್ಯಾಟರನ್ ಆಗುವುದಿಲ್ಲ. ಬಂಡವಾಳಶಾಯಿ ಪ್ರಶ್ನೆಯಾಗುತ್ತದೆ. ಅದಕ್ಕಾಗಿ ಇದನ್ನೆಲ್ಲ ಎನ್‌ಕ್ವೈರಿ ಮಡಬೇಕೆಂದು ಹೇಳುತ್ತಿರುವುದು. ಇದನ್ನು ಸೋಸಿಯಾಲಿಸಂ ಎಂದು ಹೇಳುವುದಕ್ಕಾಗುವುದಿಲ್ಲ. ಇದು dictatoship ಆಗುತ್ತದೆ. Totalitarian ಆಗುತ್ತದೆ. ಇದಕ್ಕಿಂತ ನಾನು ಹೆಚ್ಚಿಗೆ ಹೇಳಲಾರೆ. ದೇಶಸೇವಕರೆಂದು ಹೇಳಿಕೊಂಡು ಈ ರೀತಿಯಾಗಿ ಮಾಡತಕ್ಕದ್ದು ತತ್ವವನ್ನು ತಲೆ ಕೆಳಕುಮಾಡಿದಂತಾಗಿದೆ ನಾನು ಹೇಳುವುದು ಇಷ್ಟೇ. ಒಂದಕ್ಕೊಂದು ಅಸಂಭದ್ಧವಾಗಿ ಹೇಳುವುದನ್ನು ಬಿಟ್ಟು ನ್ಯಾಯವಾಗಿ ಯಾವ ಮಾರ್ಗದಲ್ಲಿ ಹೋಗಬೇಕೋ ಆ ಮಾರ್ಗದಲ್ಲಿ ಹೋಗಬೇಕು.

ಸ್ವಾಮಿ, ಒಂದು ತತ್ವವನ್ನು ಪ್ರತಿಪಾದನೆ ಮಾಡುವಾಗ ಮೂಲಭೂತವಾಗಿ ವಿಮರ್ಶೆಮಾಡಿ ಅದನ್ನು ಸಮಂಜಸವಾಗಿ ಪರಿಹಾರ ಮಾಡುವ ಸೌಲಭ್ಯ ಸರಕಾರಿ ನೌಕರರು ಮಾಡಬೇಕು. ಪ್ರಜಾಸೇವಕರೆಂದು ಹೇಳಿಕೊಂಡು ಅನ್ಯಾಯವಾಗುವಂತೆ ಮಾಡಿದರೆ ಅದು "ಮಾನಾರ್ಕಿ" ಯಾಗುತ್ತದೆ. ಅದು ಸೊಷಿಯಲಿಸಂ ಆಗುವುದಿಲ್ಲ. ಈ ವಿಚಾರವನ್ನೂ ಸಮಾಜವಾದ ತತ್ವದ ದೃಷ್ಟೀಯಿಂದ ಪರಿಗಣಿಸಬೇಕಾಗುತ್ತದೆ. ಮತ್ತು ಇನ್ನು ಹೆಚ್ಚಾಗಿ ಹೇಳಲು ನನಗೆ Interfertionಗಳು ಆಗಿವೆ ನಿಮ್ಮ ಕೈಗೆ ಬಿಡುತ್ತೇನೆ. ಮತ್ತು sidetrack ತುಂಬಾ ಆಗಿದೆ. ಮೂಲಭೂಲವಾದ ತತ್ವವನ್ನು ಏನೋ ಒಂದು ರೀತಿಯಿಂದ ಒಂದು ಇಕ್ಕಟ್ಟಿನ ಮನಸ್ಸನ್ನು ಹಿಡಿದುಕೊಂಡು ಇಲ್ಲಿ ಹೇಳಬೇಕಾಗಿದೆ. ಇಲ್ಲಿಗೆ ನನ್ನ ಮಾತನ್ನು ಮುಗಿಸುತ್ತೇನೆ.

* * * * *

# ಮೈಸೂರು ಇರಿಗೇಷನ್ ಬಿಲ್

**(Levy of Betterment Contribution & water) 20th Sept 1957**

ಶ್ರೀ ಕೆ. ಕೆಂಚಪ್ಪ (ಹಿರಿಯೂರು):- ಮಾನ್ಯ ಅಧ್ಯಕ್ಷರೆ, The Mysore Irrigation (levy of betterment contribution and water rate) Bill, 1957 ಇದನ್ನು ಸಭೆಯ ಮುಂದೆ ಒಪ್ಪಿಗೆಗೋಸ್ಕರ ಈಗ ಇಟ್ಟಿದ್ದಾರೆ. ಈ ಬಿಲ್ಲಿನ ವಿಚಾರದಲ್ಲಿ ಹಿಂದೆ ನಾನು ಹೇಳಿದ್ದೆಲ್ಲಾ ಈಗ ನನಗೆ ನೆನಪಿಗೆ ಬರುತ್ತದೆ. ಈ ಬಿಲ್ಲನ್ನು ಇದೇ ರೀತಿಯಾಗಿ ಮಂಜೂರು ಮಾಡಿದರೆ ಇದರಿಂದ ಆಗತಕ್ಕ ಹಾನಿ, ಅನರ್ಥ ಏನೇನು ಎಂಬುದನ್ನು ಹೇಳಬೇಕಾದುದು ನನ್ನ ಕರ್ತವ್ಯ. ಈ ಬಿಲ್ಲು ಸಭೆಯ ಮುಂದೆ ಮೊದಲು ಮಂಡಿಸಿದಾಗ್ಗೆ ನಾನು ಕೆಲವಾರು ವಿಚಾರಗಳನ್ನು ಹೇಳಿದ್ದೇನೆ. ಅದನ್ನೇ ಪುನಃ ಹೇಳಿ ಪುನರುಕ್ತಿ ದೊಷಕ್ಕೆ ಗುರಿಯಾಗಲು ನಾನು ಇಷ್ಟಪಡುವುದಿಲ್ಲ. ಅನಿವಾರ್ಯವಾಗಿ ಕೆಲವು ವಿಚಾರಗಳನ್ನು ಹೇಳಬೇಕಾಗಿದೆ. ಮಸೂದೆಯನ್ನು ಸಭೆಯ ಮುಂದೆ ತರುವುದಕ್ಕೆ ಮಂತ್ರಿಯವರಿಗೆ ಅಧಿಕಾರವಿದೆ. ಜಮೀನಿನಿಂದ ಪ್ರತ್ಯಕ್ಷವಾಗಿ ಹೆಚ್ಚು ಆದಾಯವನ್ನು ತೆರಿಗೆಯ ಮೂಲಕ ಸರಕಾರವು ಪಡೆಯುವುದಕ್ಕೋಸ್ಕರ ಈ ಬಿಲ್ಲನ್ನು ಮಂತ್ರಿಯವರು ತಂದಿದ್ದಾರೋ ಏನೋ ಎಂದು ಸಭೆಯ ಸದಸ್ಯರಿಗೆ ಅನ್ನಿಸುತ್ತದೆ. ಆದುದರಿಂದ ಈ ವಿಚಾರದಲ್ಲಿ ಕೆಲವಾರು ಪ್ರಶ್ನೆಗಳನ್ನು ಮಂತ್ರಿಯವರಿಗೆ ಕೇಳಬೇಕಾಗುತ್ತದೆ. ಏತಕ್ಕೆಂದರೆ ಈ ಮಸೂದೆಯ ಧ್ಯೇಯ ಧೋರಣೆಯನ್ನು ಹೇಳುವಾಗ ಅವರು ಹೇಳಿದ್ದೇನೆಂದರೆ ಯಾವುದಾದರೊಂದು ನೀರಾವರಿ ಯೋಜನೆಯನ್ನು ಮಾಡಿ ನೀರನ್ನು ಒದಗಿಸಿದಾಗ ಜಮೀನಿನ ಬೆಲೆ ಹೆಚ್ಚಾಗುತ್ತದೆ. ಜಮೀನಿನ ಬೆಲೆ ಹೆಚ್ಚಾಗುವುದರ ದೆಶೆಯಿಂದ ಏತಕ್ಕೆ ಹೆಚ್ಚು ಮೊಬಲಗು ಸರಕಾರಕ್ಕೆ ಬರಬಾರದು? ಸರಕಾರ ಏತಕ್ಕೆ ಹೆಚ್ಚ ಮೊಬಲಗು ತೆಗೆದುಕೊಳ್ಳಬಾರದು ಎಂಬ ಪ್ರಶ್ನೆ ಇದೆ. ಭೂಮಿಗೆ ನೀರು ಒದಗಿಸಿದಾಗ ನೀರಾವರಿ

ಕಂದಾಯವನ್ನು ವಸೂಲು ಮಾಡಬೇಕೆಂದು ಇದೆ. ಕಾಂಟ್ರಿಬ್ಯೂಷನ್ ಮೊಬಲಗನ್ನು ವಸೂಲು ಮಾಡುವುದಲ್ಲದೆ ಸಾಗು ಮಾಡಲು ಕೊಡುವ ಜಮೀನಿನ ಮೇಲೆ ಬೇರೆ ಕಾಂಟ್ರಿಬೂಷನ್ ವಸೂಲು ಮಾಡುತ್ತಾರೆ. ಎಂಬುದನ್ನು ಹೇಳಬೇಕಾಗುತ್ತದೆ. ಏತಕ್ಕೆಂದರೆ ಇದುವರೆಗೆ ಹೇಳುವ ಜಮೀನಿನ ಮೇಲೆ ಬೇರೆ ಕಾಂಟ್ರಿಬುಷನ್ ವಸೂಲು ಮಾಡುತ್ತಾರೆ. ಎಂಬುದನ್ನು ಹೇಳಬೇಕಾಗುತ್ತದೆ. ಏತಕ್ಕೆಂದರೆ ಇದುವರೆಗೆ ಹೇಳುವ ರೀತಿಯನ್ನು ನೋಡಿದರೆ ನೀರು ಕೊಡಲಾಗುತ್ತಿದೆ. ಆದುದರಿಂದ ಕಾಂಟ್ರಿಬೂಷನ್ ಮೊಬಗಲನ್ನು ಏತಕ್ಕೆ ಕೊಡಬಾರದು ಎಂಬ ಪ್ರಶ್ನೆ ಇದೆ. ನೀರಾವರಿ ಕಂದಾಯವನ್ನು ಏತಕ್ಕೆ ಕೊಡಬಾರದು ಎಂಬುದು ಇನ್ನೊಂದು ಪ್ರಶ್ನೆ ಇದೆ. ಎರಡನ್ನೂ ತೆಗೆದುಕೊಳ್ಳತಕ್ಕಂಥಾದ್ದು ನ್ಯಾಯವಲ್ಲವೆಂದು ಟೀಕೆ ಮಾಡಬೇಕಾಗುತ್ತದೆ. ನೀರನ್ನು ಒದಗಿಸುವುದಕ್ಕೋಸ್ಕರ ಜಮೀನು ಬೆಲೆ ಹೆಚ್ಚಾಗುತ್ತದೆ. ಸರಕಾರಕ್ಕೂ ಸ್ವಲ್ಪ ಮೊಬಲಗನ್ನು ಕೊಡಬೇಕು ಎಂಬ ಭಾವನೆಯಿಂದ ಈ ಮಸೂದೆಯನ್ನು ತಂದಿದ್ದಾರೆಂದು ಈ ಮಸೂದೆಯಲ್ಲಿಯ ಕೆಲವು ಕಲಮುಗಳಿಂದ ಅನ್ನಿಸುತ್ತದೆ. ಸ್ವಲ್ಪ ಎಂಬ ಪದ ಅಷ್ಟು ಸರಿಯಾಗಿಲ್ಲ. ನೀರಾವರಿ ಕಂದಾಯವನ್ನು ನಿಗದಿಯಾಗಿ ನಿಷ್ಕರ್ಷೆಯಾಗದೆ ಇದ್ದರೂ ಮಸೂದೆಯಲ್ಲಿ ಇರುವಂತೆ ಸರ್ವೆ ಸಾದಾರಣವಾಗಿ 18 ರೂಪಾಯಿಗಳವರೆಗೆ ನೀರಾವರಿ ಕಂದಾಯವನ್ನು ಹಾಕತಕ್ಕಂಥಾ ಸಾಹಸವನ್ನು ಮಾಡಿದ್ದಾರೆಂದು ಕಾಣುತ್ತದೆ. ಮೊಬಲಗನ್ನು ನಿಗದಿ ಮಾಡತಕ್ಕಂಥ ಅಧಿಕಾರ, ಡೆಪ್ಯೂಟಿ ಕಮೀಷನ್ನರಿಗೆ ಎಂದು ಹೇಳಿದೆ. ಈ ವಿಚಾರದಲ್ಲಿ ಒಂದಿಷ್ಟು ಲಾಯರ್ ಕೆಲಸ ಮಾಡಬೇಕಾಗುತ್ತದೆ. ಲಾಯರ್ ಕೆಲಸ ಮಾಡದಿದ್ದರೆ ಸರಿ ಹೋಗುವುದಿಲ್ಲ. ಭೂಮಿಗೆ ಬರೀ ನಿರನ್ನು ಒದಗಿಸುವುದಕ್ಕೋಸ್ಕರ ಕಾಂಟ್ರಿಬೂಷನ್ ನೀರು ಕಂದಾಯವನ್ನು ವಸೂಲುಮಾಡುವುದಕ್ಕೋ ಎಂದು ಕೇಳುತ್ತೇನೆ. ಈ ವಿಚಾರವನ್ನು ನಿಷ್ಕರ್ಷೆಯಾಗಿ ಹೇಳಬೇಕು ಇದನ್ನು ಹೇಳುವಾಗ ಕೆಲವು ವಿಚಾರಗಳನ್ನ ತಮ್ಮ ಗಮನಕ್ಕೆ ತರುತ್ತೇನೆ. 3ನೇ ಕ್ಲಾಜಿನಲ್ಲಿ ಈ ರೀತಿ ಇದೆ:

"Levy of betterment contribution:- The Government shall be entitled to levy betterment contribution in accordance with the provisions of this Act, from the landholder or holder of any land which in its opinion, is been fited by the construction restoration Expeansion or altration of any work by the government, whether after the commencement of this Act or at any time before such commencement, but not earlier...."

ಕನ್ನಡದಲ್ಲಯೇ ಮಾತನಾಡಬೇಕೆಂಬ ಬಾವನೆ ನನಗೆ ಇದೆ. ಆದರೂ ಒಂದೊಂದು ಸಾರಿ ಮಧ್ಯದಲ್ಲಿ ಇಂಗ್ಲೀಷಿನಲ್ಲಿ ಹೇಳದೆ ವಿಧಿಯಿಲ್ಲ. ಸಾಧ್ಯಾವಾದಮಟ್ಟಿಗೂ ಕನ್ನಡದಲ್ಲಿ ಮಾತನಾಡಲು ಪ್ರಯತ್ನ ಮಾಡುತ್ತೇನೆ. ಹೇಳುವುದರಲ್ಲಿ ಏನಾದರೂ ಲೋಪವಾದರೆ ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ.

work ಎಂದರೆ ಕಾಮಗಾರಿ ಎಂಬ ಪದವನ್ನು ಉಪಯೋಗಿಸಲಾಗಿದೆ. ಕಾಮಗಾರಿ ಎಂದರೆ ನೀರಾವರಿ ಕಾಮಗಾರಿ ಎಂದು ಅನಿಸುವುದಿಲ್ಲ. ಆದುದರಿಂದ ಬೇರೆ ಕಾಮಗಾರಿಗೂ ಅನ್ವಯಿಸುತ್ತದೆ. work ಪದಕ್ಕೆ ಈ ರೀತಿ ಅರ್ಥ (1)ರಲ್ಲಿ ಕೊಟ್ಟಿದ್ದಾರೆ. (1) 'work' means an irrigation or drainage work whether completed or not. Drainage work ಅಂದರೆ ಏನು? irrigation work ಅಂದರೆ ಏನು? ಪದಗಳನ್ನು ಬಹಳ ವಿಚಾರ ಮಾಡಿ ಉಪಯೊಗಿಸಬೇಕಾಗುತ್ತದೆ. ನಾನು ಹಿಂದೆ ಹೇಳಿದಂತೆಯೆ ಇದರಲ್ಲಿ ಒಂದು ಲಾಜಿಕ್ ಇಲ್ಲ. ಹಾಗೆ ಇಲ್ಲಿ ಏನು ಮಾಡಿದ್ದಾರೆಂಬುದನ್ನು ಸಹ ಹೇಳುತ್ತಿದ್ದೇನೆ. ಆ ರೀತಿಯಾಗಿ ಒಂದು ಪದವನ್ನು ಉಪಯೋಗಿಸುವಾಗ ಆ ಪದದ ಅರ್ಥದ ವ್ಯಾಪ್ತಿಯನ್ನು ಅರಿತುಕೊಂಡು ಆ ಪದವನ್ನು ಉಪಯೋಗಿಸಿದ್ದರೆ ಚೆನ್ನಾಗಿತ್ತು. ಇದನ್ನು ಮುಂದೆ ಕೊರ್ಟುಗಳಲ್ಲಿ, ನ್ಯಾಯಾಲಯಗಳಲ್ಲಿ ಎಲ್ಲಾ ಬಿಡಿಸಿ ಹೇಳಬೇಕಾಗುತ್ತದೆ. ನಮಗೆ ಇರತಕ್ಕ ಮನೋಭಾವನೆಯಿಂದ ಯಾವ ಕೆಲಸವನ್ನು ಸಹ ಮಾಡುವುದಕ್ಕಾಗುವುದಿಲ್ಲ.

Common sence has absolutely no place in leagal aspect. Common sence place its par only for the purpose of explaining the word incorporated in a section."

ಈಗ ಉಪಯೋಗಿಸತಕ್ಕದ್ದು ಬಳಕೆ ಮಾಡಿರತಕ್ಕ ಪದಗಳು ಯಾವ ಅರ್ಥವನ್ನು ಕೊಡಬೇಕೆಂಬ ರೀತಿಯಲ್ಲಿ ಉಪಯೋಗಿಸಬೇಕೋ ಆ ರೀತಿಯಲ್ಲಿ ಉಪಯೋಗಿಸಿಲ್ಲ. ಬೇರೆ ಪದಗಳನ್ನು ಉಪಯೋಗಿಸುವುದಕ್ಕಾಗುವುದಿಲ್ಲವೇ ಎಂದು ನಾನು ಕೇಳುತ್ತೇನೆ. ನಿಜವಾಗಿಯೂ ಇರಿಗೇಷನ್ ಮತ್ತು ಡ್ರೈನೇಜ್ ವರ್ಕ್ ಎನ್ನುವುಕ್ಕೆ ಯಾವ ಅರ್ಥವನ್ನು ಕೊಟ್ಟು ಈ ಪದಗಳನ್ನು ಇಟ್ಟಿದ್ದೀರಿ? ಯಾವ ಅರ್ಥ ಇಲ್ಲಿ ಬರುತ್ತದೆ.

ಇನ್ನೊಂದು ವಿಚಾರ ಇರಿಗೇಷನ್ ಮತ್ತು ಡ್ರೈನೇಜ್ ವರ್ಕ್ ಎಂಬ ಪದಗಳನ್ನು ಮತ್ತೆ ವಿದೀಕರಿಸಬೇಕು. ಒಂದು ಪದದ ವ್ಯಾಪ್ತಿಯನ್ನು ಡೆಫಿನಿಷನ್ನಿನಲ್ಲಿ ಹೇಳಬೇಕೆಂದು ವಿಧಾಯಕವಾಗಿದೆ. ತಾವು ಅನುಸರಿಸಿದ ಮಾರ್ಗವೆ ಬೇರೆ. ಈ ರೀತಿ ಯಾವ ಕಾನೂನಿನಲ್ಲೂ ಅನುಸರಿಸಿಲ್ಲ. ಇಂಡಿಯನ್ ಪೀನಲ್ ಕೋಡ್ ಪುಸ್ತಕವನ್ನು ಬರೆದಿದ್ದಾರೆ. ಅದರಲ್ಲಿ ಸೆಕ್ಷನ್‌ಗಳ ಬಾಷಾಶೈಲಿಯನ್ನು ನೋಡಿ ಈ ಕಾನೂನುಗಳನ್ನು ಮಾಡಿದ್ದರೆ ಚೆನ್ನಾಗಿರಲಿಲ್ಲವೇ? ಹಾಗೆ ಇದ್ದಿದ್ದರೆ ಈ ಭಾಷೆ ಇನ್ನೂ ಚೆನ್ನಾಗಿ ಆಗುತ್ತತ್ತೆಂದು ಹೇಳಬೇಕಾಗಿದೆ. ಇರಿಗೇಷನ್ ಮತ್ತು ಡ್ರೈನೇಜ್ ವರ್ಕ್ಸ್ ಎಂದರೆ ಅರ್ಥವೇನೆಂಬುದನ್ನು ತಾವು ಹೇಳಬೇಕು. ಈ ಮಸೂದೆಯ ಎರಡನೆಯ ಕ್ಲಾಜಿನಲ್ಲಿ ಡೆಫಿನಿಷನ್ನಿನಲ್ಲಿ ಇರಿಗೇಷನ್ ಮತ್ತು ಡ್ರೈನೇಜ್ ವರ್ಕ್ಸ್ ಎಂಬುದಾಗಿ ಎರಡೇ ಪದಗಳನ್ನು ಉಪಯೋಗಿಸಿದ್ದೀರಿ. ಡ್ರೈನೇಜ್ ಎಂದರೆ ಎಲ್ಲಿಯಾದರೂ ಒಂದು ಕಡೆ ನೀರು ಸಾಗ್‌ನೇಟ್ ಆದರೆ ಆ ನೀರನ್ನು ಓಡಿಸತಕ್ಕದ್ದು. ನೀರಾವರಿಯ ನೀರನ್ನು ಕೊಡತಕ್ಕ ಹವ್ಯಾಸ ಡ್ರೈನೇಜ್‌ನಲ್ಲಿ ಬರುವುದಿಲ್ಲ. 'Channels whether natural or artificial work' ಎಂದರೆ ಏನು ಅರ್ಥ? ಸರಕಾರದ ದುಡ್ಡು

ಖರ್ಚು ಮಾಡಿ ಆ ಖರ್ಚಿಗೋಸ್ಕರ ನಾವು ಆ ದುಡ್ಡನ್ನೇ ವಾಪಾಸ್ಸು ಪಡೆಯುತ್ತಿದ್ದೇವೆಂದು ಜನರಲ್ಲಿ ಹೇಳಿದರೆ ನ್ಯಾಚುರಲ್ ಎನ್ನುವ ಪದಕ್ಕೆ ಅರ್ಥವಿದೆಯೇ? ಎಂದು ಚಾನಲ್ ಇದ್ದರೆ ಅದಕ್ಕೆ ಖರ್ಚು ಮಾಡದೆ ಇದ್ದರೆ, ಅದಕ್ಕೆ ದುಡ್ಡು ತೆಗೆದುಕೊಳ್ಳುವುದಕ್ಕೆ ಹೊರಟಿದ್ದೀರಿ. ತಮ್ಮ ಬುದ್ಧಿಗೆ ಹೊಳೆಯದಿರುವ ಒಂದು ತಿಳಿವಳಿಕೆಯನ್ನು ನಾನು ಈಗ ಕೊಡುತ್ತೇನೆ. ಇಂತಹ ಸಮಯದಲ್ಲಿ ಮರಾಮತ್ತು ಶಾಖಾ ಸಚಿವರು ಇದ್ದಿದ್ದರೆ ಬಹಳ ಚೆನ್ನಾಗಿತ್ತು. ಅವರು ಲಾಯರ್ ಹೌದೋ ಅಲ್ಲವೋ ಗೊತ್ತಿಲ್ಲ. ಆದರೂ ಬಾಷಾ ಶೈಲಿಯನ್ನು ಚೆನ್ನಾಗಿ ಅರಿತವರು. ನ್ಯಾಚುರಲ್ ಚಾನಲ್ ಎಂದು ಹೇಳುವ ರೂಪದಲ್ಲಿ ಏನು ಕ್ಲಾಜಿನಲ್ಲಿ ಹೇಳಿದ್ದೀರಿ ಅಂತಹ ಸಂದರ್ಭದಲ್ಲಿ ಏನು ಖರ್ಚು ಮಾಡುತ್ತೀರಿ. "For the discharge of waste or surplus water" ಎಂದರೆ ಅರ್ಥವೇನು? ಏನಾದರು ನೀರು ನಿಂತಿದ್ದರೆ ರಿಪೇರಿ ಮಾಡಿದರೆ, ನೀವು ಕಂದಾಯವನ್ನು ವಸೂಲು ಮಾಡುತ್ತೀರಾ? ಎಲ್ಲಾದರೂ ನೀರು ನಿಂತಾಗ್ಗೆ ಅಲ್ಲಿ ನಿಲ್ಲತಕ್ಕ ನೀರನ್ನು ಪ್ರಿವೆಂಟ್ ಮಾಡಿ, ಅದನ್ನು ತೆಗೆದುಕೊಂಡು ಹೋದರೆ ಆಗ ನೀವು ಕಂದಾಯ ಹಾಕುತ್ತೀರಿ. ಈ ಪದಗಳನ್ನು ವಿಚಕ್ಷಣೆಯಿಂದ ಉಪಯೋಗಿಸಬೇಕಾಗಿ ಬರುತ್ತದೆ. ಏನು ಮಾಡುತ್ತಾರೆಂಬುದನ್ನು ತಾವು ಆಲೋಚನೆ ಮಾಡಬೇಕು. ಚಾನಲ್‌ಗಳಿಗೆ ಸಂಬಂಧಪಟ್ಟಂತೆ ಏನು ಕ್ಲಾಜುಗಳನ್ನು ಮಾಡಿದರೂ ಸಹಿತ ನಿವು ಕಂದಾಯ ಕೊಡಬೇಕು ಎಂದು ಹೇಳುವುದು ಸರಿಯಲ್ಲ. ನೀರಾವರಿಗೆ ನೀರು ಕೊಟ್ಟರೆ ಕಂದಾಯ ಕೊಡಬೇಕು. ನೀರು ಕೊಟ್ಟರೆ ಕಾಂಟ್ರಿಬ್ಯೂಷನ್ ಕೊಡಬೇಕು ಎಂದು ಯಾವ ಪದದಲ್ಲಿ ಇದೆ ಎಂಬುದನ್ನು ತೋರಿಸಿಕೊಡಿ. ಡೆಫಿನಿಷನ್ ಕ್ಲಾಜಿನ (c) 2ರಲ್ಲಿ The escape channels from an irrigation work ಎಂದು ಹೇಳಿದೆ. ಇದು ಜಮೀನು ಸಂಬಂಧವಾಗಿದೆಯೋ ಇಲ್ಲವೋ ಗೊತ್ತಿಲ್ಲ. ಬೆನಿಫಿಟೆಡ್ ಎಂದರೆ ಏನು? ನನ್ನ ಜಮೀನಿಗೆ ಬೆನಿಫಿಟೆಡ್ ಕಾಂಟ್ರಿಬ್ಯೂಷನ್ ಕೊಟ್ಟು ನೀರಾವರಿಗೆ ಕಂದಾಯ ಕೊಡಿ ಎಂದರೆ ಏನು ಅರ್ಥ? ಬೆನಿಫಿಟೆಡ್ ಎಂದರೆ ಏನು ಅರ್ಥ? ಇದರಿಂದ ಬೆನಿಫಿಟೆಡ್ ಆಗಿದೆಯೇ? ಇದನ್ನು ಮಾಡಬಾರದಾಗಿತ್ತು. ಜನರಿಗೆಲ್ಲ ತಪ್ಪು ದಾರಿ ಹಿಡಿಸುವ ಹಾಗೆ ಏನೇನು ಮಾಡುವುದಕ್ಕೆ ಹೊರಟಿದ್ದಾರೆ. ಇನ್ನೂ (iii) ರಲ್ಲಿ 'Dams weirs embankments, sluices and groynes,' (iv) ರಲ್ಲಿ 'all works for the protection of lands' ಎಂದು ಹೇಳಿದ್ದಾರೆ. ಇದರಲ್ಲಿ ಇರ್ರಿಗೇಷನ್ ಪದವೆ ಇಲ್ಲ. ಈಗ ಒಂದು ಪ್ರಶ್ನೆಯನ್ನು ಕೇಳುತ್ತೇನೆ. ನಮ್ಮಿಂದ ದುಡ್ಡು ತೆಗೆದುಕೊಳ್ಳುತ್ತಾರೆ. ನಮ್ಮ ಜಮೀನಿನ ಕೆಳಗೆ ಏನಾದರೂ ಒಂದು ಬಂಡು ಹಾಕಿಕೊಳ್ಳಬೇಕಾದರೆ. ಅವರೇ ಖರ್ಚು ಮಾಡುತ್ತಾರೆ. ತಾವು ಇದುವರೆಗೂ ತಕಾವಿ ಸಾಲ ಜಮೀನು ಬಾಜು ಹಾಡುವುದಕ್ಕೆ ಸಾಲ – ಈ ರೀತಿ ಕೊಡುತ್ತಿದ್ದೀರಿ. ಆದರೆ ಕಂಟ್ರಿಬ್ಯೂಷನ್ ಮೊಬಲಗು ಕೊಡಬೇಕೆಂದು ಬಂದ ಕೂಡಲೇ ಅದು ನಿಂತು ಹೋಗಿದೆ. ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಆಲೋಚನೆ ಮಾಡಬೇಕು. ಈ ರೀತಿಯಾಗಿ ನೀರಾವರಿ ಸೌಕರ್ಯಕ್ಕೆ ಈ ಕಾನೂನು ಸಂಬಂಧ ಪಟ್ಟಿದೆಯೋ ಇಲ್ಲವೇ ಎಂಬುದನ್ನು ನೋಡಬೇಕು. ನೀರಾವರಿಗೆ

ಸಂಬಂಧಪಟ್ಟಂತೆ ಕಾಂಟ್ರಿಬ್ಯೂಷನ್ ಮೊಬಲಗು ತೆಗೆದುಕೊಳ್ಳುವುದಕ್ಕೆ ಕಾಂಟ್ರಿಬ್ಯೂಷನ್ ಪದವನ್ನು ಉಪಯೊಗಿಸಿದ್ದಾರೆ. ನೀರಾವರಿ ಯೋಜನೆ ಮಾಡುತ್ತೇವೆಂದು ಹೇಳಿ ಅದರ ಮೂಲಕ ನೀರು ಕೊಡುತ್ತೇವೆಂದು ಹೇಳಿ ತಾವು ಇಲ್ಲಿಯೇ ಕುಳಿತಿರುತ್ತೀರಾ? ಅದನ್ನು ಆಲೋಚನೆ ಮಾಡಬೇಕು. ಅದನ್ನು ಬೇರೆ ಬೇರೆಯಾಗಿ ವಿಂಗಡಿಸಬೇಕು. ಇದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ನೀರು ಇಂದು ಹಳ್ಳದಲ್ಲಿ ಹರಿಯುತ್ತಿದ್ದರೆ, ಅದು ಸರ್ಕಾರದ್ದು ಆಗಿದ್ದರೆ, ಆ ನೀರನ್ನು ತೆಗೆದುಕೊಂಡರೆ ಕಾಂಟ್ರಿಬೂಷನ್ ಮೊಬಲಗು ಕೊಡಬೆಕೆಂದು ಎಲ್ಲಿದೆ? ಅದಕ್ಕೆ ಟೆಂಪೊರರಿ ವಾಟರ್ ರೇಟು ತೆಗೆದುಕೊಳ್ಳಬೇಕೆಂದು ಕಾನೂನಿನಲ್ಲಿದೆಯೇ? ಏನೊಂದು ನೀರಾವರಿ ಯೊಜನೆಯೂ ಇಲ್ಲ. ಹಿಂದೆ ತಕಾವಿ ಸಾಲ ತೆಗೆದುಕೊಳ್ಳುತ್ತಿದ್ದರೆ, ಕೇವಲ ನೀರಾವರಿ ಯೊಜನೆಗೋಸ್ಕರ ಇದು ಸಂಬಂಧವಿಲ್ಲ. ಈ ಯೊಜನೆಯಿಂದ ತಾವು ಇದವರೆಗು ನೆಡೆದುಕೊಂಡು ಬಂದಿರತಕ್ಕ ಸಂಪ್ರದಾಯವನ್ನು ಮೂಲೆಗೊತ್ತಿದ್ದೀರಿ ಮೊಗಲ್ ಚಕ್ರವರ್ತಿಗಳ ಕಾಲದಿಂದಲೂ ಬಂದಿರುವ ಪದ್ಧತಿಯನ್ನು ಒಂದು ಮೂಲೆಗೆ ತಳ್ಳಿ ಬೇರೆ ಮಾರ್ಗವನ್ನು ಮಾಡಿದ್ದೀರಿ. ಒಂದು ಜಮೀನಿನ ಕಂದಾಯವನ್ನು ಕೊಡುವ ಮಾರ್ಗ ಅನ್ವಯಿಸುವುದನ್ನು ತಾವು ಇವೊತ್ತಿನ ದಿವಸ ಉಪೇಕ್ಷೆ ಮಾಡಿದ್ದೀರಿ. ಇದುವರೆಗೂ ಸರ್ವೆಮ್ಯಾನ್ಯೂಯಲ್‌ನಲ್ಲಿ ಹೇಳಿರುವ ಪ್ರಕಾರ ಏನು ಮಾಡಿಲ್ಲ. ಎಲ್ಲಾ ಅಂಶಗಳು ಸರ್ವೆಮ್ಯಾನ್ಯೂಯಲ್‌ನಲ್ಲಿಯಲ್ಲಿಯೇ ಉಲ್ಲೇಖಿತವಾಗಿದೆ. ಸರ್ವೆ ಕ್ಲಾಸಿಫಿಕೇಷನ್ ಮತ್ತು ಸೆಟಲ್‌ಮೆಂಟ್ ವಿಷಯವಾಗಿ ಮತ್ತೆ ಹಿಂದೆ ಹೇಳಿದ್ದನ್ನು ವಿಷದವಾಗಿ ಹೇಳುವುದಕ್ಕೆ ಹೋಗುವುದಿಲ್ಲ. ಕಲೆಕ್ಟರನ್ನು ಇಲ್ಲಿ ನೇಮಕ ಮಾಡಬೇಕು. ನೀರಾವರಿ ಕಂದಾಯವನ್ನು ನಿಗದಿ ಮಾಡಬೇಕು. ಸರ್ವೆ ಡಿಪಾರ್ಟ್‌ಮೆಂಟನ್ನು ತೆಗೆದುಹಾಕಿ ಏನು ಮಾಡಬೇಕೆಂದು ಇದ್ದೀರಿ? ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟಿಗೆ ಪ್ರಾಮಿನೆನ್ಸ ಬಂದಿದೆ. ಅದಕ್ಕೆ ಆ ರೀತಿ ಪ್ರಾಮಿನೆನ್ಸ ಕೊಡಬಾರದು. ಏಕೆಂದರೆ ಡಾಕ್ಟರ್ ಲಾಯರ್ ಆಗುವುದಿಲ್ಲ. ಲಾಯರ್ ಡಾಕ್ಟರ್ ಆಗುವುದಿಲ್ಲ. ಇದು ಸರ್ವೆ ಡಿಪಾರ್ಟ್‌ಮೆಂಟ್ ಅನುಸರಿಸುವ ಮಾರ್ಗ ಬೇರೆ ನಿಯಾಮುವಳಿಗಳು ಬಹಳ ಇವೆ. ಅದರಂತೆ ಅನುಸರಿಸಬೇಕು. ಈ ರೀತಿ ಮಾಡುವುದರಿಂದ ಪ್ರಜೆಗಳಿಗೆ ತುಂಬಾ ಕೆಡಕು ಮಾಡುತ್ತಿದ್ದೀರಾ ಅದು ಹೇಗೆಂದರೆ – ಒಂದು ದೊಡ್ಡ ಕೆರೆ ಇದ್ದರೆ ಅದರ ಪಕ್ಕದಲ್ಲಿ ಅನೇಕ ಸಣ್ಣ ಸಣ್ಣ ಕೆರೆಗಳಿದ್ದೇ ಇರುತ್ತವೆ. ಹೀಗೆ ದೊಡ್ಡ ದೊಡ್ಡ ಕೆರೆಗಳ ಮಗ್ಗಲಿನಲ್ಲೇ ಕಟ್ಟಿಸಿರುವಂಥ ಕೆರೆಗಳ ಅನೂಕೂಲವುಳ್ಳ ಜಮೀನುಗಳಿಗೆ ಎಕರೆಗೆ ನಾಲ್ಕು ಐದು ರೂಪಾಯಿಗಳ ಕಂದಾಯವನ್ನು ನಿಗದಿಮಾಡಿರುತ್ತಾರೆ. ಹಿಂದಿನ ಕಾಲದಲ್ಲಿ ಕಟ್ಟಿಸಲ್ಪಟ್ಟ ಕೆರೆಗಳಿಗೆ ಖರ್ಚು ಕಡಿಮೆ ಬಂದಿರಬಹುದು. ಆದರೆ ಈ ದಿವಸ ಕೆರೆಗಳನ್ನು ಕಟ್ಟಿಸಬೇಕಾದರೆ ಹೆಚ್ಚು ಹಣ ಖರ್ಚಾಗುತ್ತದೆ. ಆದರೆ ಅಂಥ ದೊಡ್ಡ ಕೆರೆಗಳನ್ನು ಕಟ್ಟಿಸಿದ್ದರಿಂದ ಆ ಪ್ರಾಂತದಲ್ಲಿ ಜಮೀನುಗಳಿಗೆ ಇದ್ದಂತ ಬೆಲೆಗಿಂತ ಎಕರೆಗೆ 500 ರುಪಾಯಿಗಳ ಮೇಲ್ಪಟ್ಟು ಅವುಗಳ ಬೆಲೆಯನ್ನು ಹೆಚ್ಚಾಗುವಂತಿದ್ದರೆ ಆಗ ಒಂದು ಎಕರೆಗೆ 500 ರುಪಾಯಿಗಳಂತೆ ಸರಕಾರದವರು ಈ ಬೆಟರ್‌ಮೆಂಟ್ ತೆರಿಗೆಯನ್ನು ವಸೂಲ್ ಮಾಡಿಕೊಳ್ಳತಕ್ಕ ಬಗ್ಗೆ

ಅಭ್ಯಂತರವಿರಲಾರದು. ಆದರೆ ಅಷ್ಟು ಬೆಲೆಯಲ್ಲಿ ಹೆಚ್ಚಾಗದಿದ್ದರೆ ಆಗಹೀಗೆ ಎಕರೆಗೆ 500 ರೂಪಾಯಿಗಳ ಕಡ್ಡಾಯವಾಗಿ ವಸೂಲ್ ಮಾಡಿಕೊಳ್ಳುವುದು ಯಾವ ಧರ್ಮ? ಎಕರೆಗೆ 500 ರೂಪಾಯಿ ಮ್ಯಾಗ್ಸಿಮಂ ಲಿಮಿಟೆ ಮಾಡಿರುವಾಗ ಏನೋ ಬೆಲೆಯಲ್ಲಿ ಸ್ವಲ್ಪ ಕಡಿಮೆಯಾಗಿದೆಯೆಂದು ಹೇಳಿ 495 ರೂಪಾಯಿಗಳನ್ನು ತೆಗೆದುಕೊಳ್ಳಿ ಎಂದು ಹೇಳುವುದಕ್ಕೆ ಇದರಲ್ಲಿ ಅವಕಾಶವಿಲ್ಲ. ಅಂಥ ಸಂದರ್ಭಗಳು ಅನೇಕ ಬರಬಹುದು. ಆಗ ಯಾವ ಸರ್ಕಾರದವರು ಏನು ಮಾಡುತ್ತಾರೆ? ಸರ್ಕಾರದವರು ಈ ವಿಷಯದಲ್ಲಿ ಏನಾದರೂ ಕೂಲಂಕುಷವಾಗಿ ಆಲೋಚನೆ ಮಾಡಿದ್ದಾರೆಯೇ ಎನ್ನತಕ್ಕ ಬಗ್ಗೆ ಅವರು ನನಗೆ ಉತ್ತರ ಹೇಳುವಾಗ ತಿಳಿಸಬೇಕಾಗಿದೆ. ನಾನು ಹಿಂದೆ ಹೇಳಿರತಕ್ಕ ಮಾತನ್ನೇ ಮತ್ತೊಂದು ಸಾರ್ತಿ ಹೇಳುತ್ತೇನೆ.– ಮಾನ್ಯ ಮಂತ್ರಿಗಳು ತಮ್ಮ ಬುದ್ಧಿ ಚಮತ್ಕಾರಗಳನ್ನು ಮಾಡಲು ಈ ರೀತಿ ಒಂದು ಕಾನೂನು ತರಬಾರದಾಗಿತ್ತು ಎಂದು. ಇಲ್ಲಿ ಡ್ರೈನೇಜ್ ವರ್ಕ್ಸ್ ಕೂಡ includes channels ಎಂದು ಹೇಳಿದ್ದಾರೆ. ಅದೇ ಲೈನಿನಲ್ಲಿ ಮುಂದಕ್ಕೆ ಹೋದರೆ 'Drainage work includes the escape channels from an irrigation work' ಎಂದು ಹೇಳಿದ್ದಾರೆ. ಅನಂತರ 'Irrigation work' ಎಂದು ಹೇಳಿದ್ದಾರೆ. ಅನಂತರ ಎಂದರೆ 'it includes-all canals, channel, tanks, wells, reservoirs, anicuts, bandnaras, ponds, spring' ponds ; Kuntas, talapariges, and madgus used for the suplay of storage of water ಎಂದು ಹೇಳಲಾಗಿದೆ. ಸುಖೀ ರಾಜ್ಯ ಸ್ಥಾಪನೆ ಮಾಡುತ್ತೇವೆಯೆಂದು ಹೇಳಿ ಗಾಂಧೀ ಭಕ್ತರು ಎರಡನೆ ಪಂಚವಾರ್ಷಿಕ ಯೊಜನೆಯನ್ನು ತಂದಿರುವುದರ ಮೂಲಕ ಭಾಗಕ್ಕೂ ಕೂಡ ತೆರಿಗೆ ಹಾಕುವಂತ ಸ್ಥಿತಿಗೆ ಬಂತು! ಅದಾದನಂತರ ನೋಡಿ, ಇಲ್ಲಿ and all works, embankments and structures, installations including the installation of pumping - sets ಎಂದು ಹೇಳಿದ್ದಾರೆ. ತಲಪರಿಗೆಗಳಿಗಾಗಿ ಸರ್ಕಾರದವರೇನು ಹಣ ಖರ್ಚು ಮಾಡುತ್ತಾರೆ? 'Talapariges and madgus used for the suplay of or storage of water and all works'....... ಎಂದು ಹೇಳಲಾಗಿದೆ. ಹಾಗೆ ಯಾವ ಒಂದು ಕಾಸನ್ನೂ ಖರ್ಚುಮಾಡಿರತಕ್ಕ ವಾಟರ್ ಸೋರ್ಸ್‌ಸ್ ಅನ್ನೂ ಸಹ ಸೇರಿಸಿ ಸರ್ಕಾರದವರು ಈ ಒಂದು ಕಾನೂನನ್ನು ಹೇಗೆ ರಚಿಸಿದರು/ ಯವ ಉದ್ದೇಶಕ್ಕಾಗಿ ಅವರು ಹೀಗೆ ಮಾಡುತ್ತಿದ್ದಾರೆ? ಪಂಪಿಂಗ್ ಸೆಟ್‌ಗಳಿಗೂ ಕೂಡ ತೆರಿಗೆ ವಿಧಿಸಲು ಹೊರಟಿರುವುದನ್ನು ನೋಡಿದರೆ, ಸ್ವಾಮಿ ನಾನು ಹೇಳುತ್ತೇನೆ. ಸರ್ಕಾರದವರು ಹೀಗೂ ಕಾನೂನುಗಳನ್ನು ಮಾಡುತ್ತಿರುವುದನ್ನು ನೋಡಿದರೆ ಇವರು ವ್ಯವಸಾಯಗಾರರಿಗೆ ಸುಖ ಬಯಸುವುದಕ್ಕೆ ಹೊರಟಿಲ್ಲ; ಆದರೆ ಆದಷ್ಟು ತೊಂದರೆ ಕೊಡಬೇಕೆಂದು ಅವರು ಹೊರಟಿರುವಂತೆ ಕಾಣುತ್ತದೆ. ಸ್ವಾಮಿ ಇನ್ನೂ ಕ್ಲಾಸ್ 10ರಲ್ಲಿ 'for the avoidance of doubt, it is hereby declared that water rate leviable under this act is not a tax land but is a charge for the irrigation of land' ಎಂಬುದಾಗಿ ಹೇಳಿದ್ದಾರೆ ಸ್ವಾಮಿ,

ನನಗೆ ಮೊದಲು ಈ 'charge' ಎಂಬುದಾಗಿ ಉಪಯೋಗಿಸಲಾಗಿದ್ದ ಪದದ ಬಗ್ಗೆ ಸ್ವಲ್ಪ ಅನುಮಾನ ಬಂದಿತ್ತು. ನಾನು ಡಿಕ್ಷನರಿಯನ್ನು ತೆಗೆದು ನೋಡಿದ ಮೇಲೆ ನನಗೆ ಸ್ವಲ್ಪ ಧೈರ್ಯ ಬಂದಿತು. ಟ್ಯಾಕ್ಸ್ ಎಂಬ ಶಬ್ದವನ್ನು ಉಪಯೋಗಿಸಿದರೆ ಜನರ ಮನಸ್ಸಿನಲ್ಲಿ ಏನ್ನೋ ಒಂದು ಭಾವನೆ ಬರುತ್ತದೆ. ಆದ್ದರಿಂದ ಅದನ್ನು ತಪ್ಪಿಸಲು ಆ ಶಬ್ದಕ್ಕೆ ಬದಲಾಗಿ ಈ 'charge' ಎಂಬ ಪದವನ್ನು ಉಪಯೋಗಿಸಿ ಅದನ್ನು ಹೀಗೆ ಮಾರ್ಪಾಡು ಮಾಡಲು ಹೊಗಿದ್ದಾರೆಂದು ಭಾವಿಸಿದ್ದೆ: ಆದರೆ ಈ ಡೆಫಿನೇಷನ್‌ನಲ್ಲಿ ಅದರ ಅರ್ಥ ಹೇಗಿದೆ: 'charge" ಎಂದರೆ 'is a contribution for the water supplied or used for the irrigation of lands" ಎಂದು ಹೇಳಿದ್ದಾರೆ. Contribution a levy or charge imposed upon the people ಎಂದಾಗುತ್ತದೆ. to charge means to load heavily ಎಂದರ್ಥ. Here the word used is 'charge' that is to load the people with tax very heavily it is the maximum extent; to load heavily means fully, completely to the very birm so that they may not even breath. ಹಿಂದೆಯೂ ಸರ್ಕಾರದವರು ರೈತರ ಮೇಲೆ ಅಸೆಸ್‌ಮೆಂಟ್ ಹಾಕುತ್ತಿದ್ದರು. ಆದರೆ ಈ ಮಾದರಿಯಲ್ಲೇ? ಹಿಂದಿನ ಕಾಲದಲ್ಲಿ ಒಂದು ಅಸೆಸ್‌ಮೆಂಟನ್ನು ಹಾಕಬೇಕಾಗಿದ್ದರೆ ನಾನಾ ಭಾಗದಲ್ಲಿ ನಾನಾ ವಿಚಾರಗಳನ್ನು ಕೂಲಂಕುಷವಾಗಿ ವಿಮರ್ಶೆಮಾಡಿ, ಯಾವ ಒಂದು ಭಾಗದಲ್ಲಿ ತೆಗೆದುಕೊಂಡು ನೋಡಿದರು ರೈತರಿಗೆ ಒಂದು ಹೆಚ್ಚಿನ ಭಾರ ಮೇಲೆ ಬೀಳದರಿತಿಯಲ್ಲಿ ಸರ್ವೆ ಇಲಾಖೆಯವರು ಮಾಡಿರತಕ್ಕಂಥ ಕಾನೂನನ್ನು ಚಾಚು ತಪ್ಪದಂತೆ ವಿಧಿಸುತ್ತಿದ್ದಂತೆ ದುಡ್ಡಿಗೆ ಅಸಿಸ್‌ಮೆಂಟ್ ಎಂದು ಹೇಳುತ್ತಿದ್ದರು. 'Assessment - to fix the amount, to fix the value or profit and to estimate' ಎಂಬ ಅಂಶಗಳನ್ನು ಬಿಟ್ಟು ಬಿಟ್ಟಿದ್ದಾರೆ. ಆದ್ದರಿಂದಲೇ ಈಗ tax ಎಂಬ ಪದಕ್ಕೆ ಪ್ರತಿಯಾಗಿ ಚಾರ್ಜ್ ಎಂಬ ಪದವನ್ನು ಉಪಯೋಗಿಸುತ್ತಾರೆ. ಈ ರೀತಿ ಮಾಡಿರುವುದಕ್ಕಾಗಿ ನಾವು ತುಂಬ ವಿಷಾದಪಡಬೇಕಾಗಿದೆ. ನಾಳೆ ದಿವಸ ನೀವು ಮೋಸ ಮಾಡಿದ್ದೀರಿ ಎಂದು ಯಾರು ಹೇಳಬೇಡಿ; ಅದಕ್ಕೋಸ್ಕರವಾಗಿಯೇ ನಾವೀಗ ಈ ಚಾರ್ಜ್ ಎಂಬ ಶಬ್ದವನ್ನು ಉಪಯೋಗಿಸಿದ್ದೇವೆ. ಎಂಬ ಭಾವನೆಯನ್ನು ಅವರು ಮನಸ್ಸಿನಲ್ಲಿಟ್ಟುಕೊಂಡೇ ಈ ಪದಗಳನ್ನು ಉಪಯೋಗಿಸಿದ್ದಾರೋ ಏನೋ ಎಂದು ನನಗನಿಸುತ್ತದೆ.

ಶ್ರೀ ಹೆಚ್.ಎಸ್. ರುದ್ರಪ್ಪ (ವ್ಯವಸಾಯದ ಇಲಾಖೆಯ ಮಂತ್ರಿಗಳು) – ತಾವು ಈಗ ಹೇಳುತ್ತಿರುವುದು ಯಾವ ಸೆಕ್ಷನ್ನಿನಲ್ಲಿದೆ.

ಶ್ರೀ ಕೆ. ಕೆಂಚಪ್ಪ:– ನಾನು ಹೇಳುತ್ತಿರುವುದು ಹತ್ತನೆಯ ಕ್ಲಾಜಿನಲ್ಲಿ ಹೇಳಿರತಕ್ಕ ವಿಚಾರದ ಬಗ್ಗೆ. there are wet assessments, dry assessment and garden assessment. ತಾವು ಅಸೆಸ್‌ಮೆಂಟ್ ಶಬ್ದ ಉಪಯೊಗಿಸಬೇಕಾಗಿದ್ದರೆ ಅದು ಯಾವ ಸಂದರ್ಭದಲ್ಲಿ ಎಂದರೆ 'assessing the value of the property' means offer-

ing reason and observing all the means and methods to be a adopted in order to arrive at a proper conclusion to assess or value the property. ಸ್ವಾಮಿ, ಇನ್ನು ಈ ಕ್ಲಾಜಿನಲ್ಲಿ ಹೇಳಿರತಕ್ಕ ಚಾರ್ಜ್ ಎಂಬ ಶಬ್ದವನ್ನು for the avoidance of doubt ಎಂದು ಹೇಳಿರತಕ್ಕ ಸಂದರ್ಭ ಹೇಗಿದೆ ಎಂದರೆ ನಾವುಗಳು ಮೈಸೂರಿನಿಂದ ಬೆಂಗಳೂರಿಗೆ ರೈಲಿನಲ್ಲಿ ಬರುವಾಗ ಆ ಪ್ರಯಾಣದ ಬಗ್ಗೆ ನಾವು ಕೊಡತಕ್ಕ ದುಡ್ಡಿಗೆ ಚಾರ್ಜ್ ಎಂದು ಹೇಳುತ್ತೇವೆ.

ಶ್ರೀ ಹೆಚ್. ರುದ್ರಪ್ಪ:- ಇದೂ ಸಹ ಅಷ್ಟೇ.

ಶ್ರೀ ಕೆ. ಕೆಂಚಪ್ಪ:- ಇದು ಅಷ್ಟಲ್ಲ, ಇದು ಮಾರ್ವಾಡಿ ವ್ಯವಹಾರ ಅಥವಾ Money - lender business ನಂತೆ ಕಾಣುತ್ತದೆ. ಈ ಶಬ್ದಗಳನ್ನು ನಾನು ಸಂತೋಷದ ಮನಸ್ಸಿನಿಂದ ಹೇಳುತ್ತಿಲ್ಲ. ದುಃಖ ಉಕ್ಕಿ ಬರುತ್ತದೆ. ಅಷ್ಟರ ಮಟ್ಟಿಗೆ ನನಗೆ ಮನಸ್ಸಿನಲ್ಲಿ ಸಂಕಟವಾಗುತ್ತಿದೆ. ಇನ್ನು ಜಮೀನಿಗೆ ನಿರಾವರಿ ಸೌಕರ್ಯಗಳನ್ನೊದಗಿಸಿದರೆ ಅದರ ಬಗ್ಗೆ ರೈತನಿಂದ ವಸೂಲ್ ಮಾಡಿಕೊಳ್ಳಬೇಕಾದ ತೆರಿಗೆ ಬಗ್ಗೆ ರೈತರಿಗೆ ಸಾಧ್ಯವಿದ್ದರೆ ಆತನು ಅದನ್ನು ದ್ರವ್ಯ ರೂಪದಲ್ಲಾದರೂ ಕೊಡಬಹುದು, ಇಲ್ಲವೇ ಆತನಿಗಿರುವ ಜಮೀನಿನಲ್ಲಿ ಅರ್ಧ ಎಕರೆ ಭೂಮಿಯನ್ನು ಬೇಕಾದರೂ ಕೊಡ ಬಹುದೆಂದು ಹೇಳಲಾಗಿದೆ. ಹಾಗೆ ರೈತನಿಂದ ಸರ್ಕಾರದವರು ಜಮೀನನ್ನು ತೆಗೆದುಕೊಳ್ಳುವಾಗ ಅದಕ್ಕೆ ಕಡಿಮೆ ಕಿಮ್ಮತ್ತು ಕಟ್ಟಿ ಅದನ್ನು ಬೇರೆಯವರಿಗೆ ಮಾರಾಟ ಮಾಡಿದ ನಂತರ ಆ ಜಮೀನಿನ ಬಗ್ಗೆ ಏನಾದರೂ ಹೆಚ್ಚು ಹಣ ಬಂದರೆ ಆ ರೈತನಿಂದ ಬರಬೇಕಾಗಿರುವ ತೆರಿಗೆ ಮೊಬಲಗು ಎಷ್ಟಿರುತ್ತದೋ ಅಷ್ಟನ್ನು ಉತ್ತರ ಹಾಕಿಕೊಂಡು ಉಳಿದ ಹಣವನ್ನು ಆ ರೈತನಿಗೆ ವಾಪಾಸ್ಸು ಕೊಡುತ್ತೇವೆಂದು ಹೇಳಿದ್ದಾರೆ. ಹೀಗೆಲ್ಲ ಇವರು ಬರೆಯಬೇಕಾಗಿದ್ದರೆ ಭೂಮಿಯ ಬೆಲೆಯನ್ನು ಸರ್ಕಾರದವರು ಯಾವ ರೀತಿ ಕ್ಯಾಲಿಕುಲೇಟ್ ಮಾಡುತ್ತಾರೆ? ಜನರನ್ನು ಇವರು ಹೇಗೆ ಸಮಾದಾನಪಡಿಸುತ್ತಾರೆ? ಮೊದಲು ಹಾಗೇಕೆ ಕಡಿಮೆ ಬೆಲೆಗೆ ತೆಗೆದುಕೊಳ್ಳಬೇಕು? ಹಿಂದೆ ಎಲ್ಲಿಯಾದರೂ ಈ ತರಹದ ಅಡ್ಜಸ್‌ಮೆಂಟ್ ಹಾಕತಕ್ಕ ಪದ್ಧತಿ ಇತ್ತೆ? 1872ನೇಯ ಇಸ್ವಿಯಿಂದಲೂ ಜಾರಿಯಲ್ಲಿಲ್ಲದಂಥ ವ್ಯವಹಾರವನ್ನು ಈ ದಿವಸ ಗಾಂಧಿ ಭಕ್ತರು ಜಾರಿಗೆ ತಂದಿದ್ದಾರೆ. ಏತಕ್ಕಾಗಿ ಎಂದರೆ ದೇಶದಲ್ಲಿ ಸುಖೀ ರಾಜ್ಯವನ್ನು ಸ್ಥಾಪನೆ ಮಾಡುವುದಕ್ಕಾಗಿ ಎಂದು ಹೇಳುತ್ತಿದ್ದಾರೆ; ಬೆನ್ನು ಮೂಳೆ ಮುರಿದು ಹೋಗಿರತಕ್ಕ ರೈತನ ಮೂಳೆಗಳನ್ನು ಸರಿಮಾಡುವುದಕ್ಕೆಂದೇ ಹೇಳುತ್ತಿದ್ದಾರೆ? ಇಂಥ ಅಪಯುಕಾರವಾದ ಮಸೂದೆಯನ್ನು ನಾವು ಬಹಳ ಹುಷಾರಾಗಿ ಪರಿಶೀಲನೆ ಮಾಡಬೇಕಾಗಿದೆ.

ಮುಂದಕ್ಕೆ ಹೋದರೆ ಇನ್ನೂ ಸ್ವಲ್ಪ ವಿಚಾರವಿದೆ. ಅದೇನೆಂದರೆ ಮೂರನೆಯ ಕ್ಲಾಜಿನಲ್ಲಿ ಹೀಗೆ ಹೇಳಿದ್ದಾರೆ:

"The government shall be entitled to levy a betterment contribution in accordance with the provisions of this Act, from the land - holder or holder or any land which, in its opinion, is benefited by the construction' ಅಷ್ಟಕ್ಕೇ ಬಿಡಲಿಲ್ಲ ಇವರು construction ಜೊತೆಗೆ restrotion, expansion or alteration of any work......" ಎಂದು ಸೇರಿಸಿದ್ದಾರೆ. ಎಂದರೆ ಇವೊತ್ತಿನ ದಿವಸ ಯಾವುದೋ ಕೆರೆಯನ್ನು ಕಟ್ಟಿದ್ದರೆ, ಅದಕ್ಕಾಗಿ 50 ರೂಪಾಯಿ ಅಥವಾ 75 ರೂಪಾಯಿ ಆಗಲೇ ತೆಗೆದುಕೊಂಡಿದ್ದು ಮತ್ತೆ ಆ ಕೆರೆಯನ್ನು ಕಟ್ಟಿದರೆ ದೊಡ್ಡದು ಮಾಡಿದರೆ ಅಥವಾ ದುರಸ್ಥಿ ಮಾಡಿದರೆ ಮತ್ತೆ ಅದರ ಖರ್ಚನ್ನು ವಸೂಲೂ ಮಾಡುವುದಕ್ಕೆ ಅವಕಾಶವಿದೆ. ರೀತಿ ಕರೆಯನ್ನು ಮತ್ತೆ ದುರಸ್ಥಿ ಮಾಡಿದಾಗ ಅಥವಾ ದೊಡ್ಡದು ಮಾಡಿದಾಗ ಎಷ್ಟು ಖರ್ಚಾಗುತ್ತದೆಯೋ ಅದನ್ನೆಲ್ಲ ಕೊಡಬೇಕು ಎಂದಿದೆ ಅದರ ಪರಿಣಾಮ ಏನಾಗುತ್ತದೆಂಬುದನ್ನು ತಾವು ಯೋಚನೆ ಮಾಡಿದಿರೋ ಅಥವಾ ಮಾಡಲಿಲ್ಲವೋ ಗೊತ್ತಿಲ್ಲ. ಈ ರೀತಿ ಮಾಡುವುದರಿಂದ ಇದು ಯಾವ ಪರಿಣಾಮವನ್ನು ಜನತೆಯಲ್ಲಿ ಉಂಟು ಮಾಡುತ್ತದೆ. ಯಾವ ರೀತಿ ಮನಸ್ಸನ್ನು ಕೆರಳಿಸುತ್ತದೆ. ಯಾವ ರೀತಿ ಹಿಂಸಿಸುತ್ತದೆ. ಎಂಬುದನ್ನು ಯೋಚನೆ ಮಾಡಿದ್ದೀರಾ ಎಂಬುದನ್ನು ನಿವೇ ಹೇಳಬೇಕು. ಒಂದು ಸಲ ಕಾಂಟ್ರಿಬ್ಯೂಷನ್ ಮೊಬಲಗನ್ನು ವಸೂಲ್ಮಾಡಿದ ಮೇಲೆ ಮತ್ತೊಂದು ಸಲ channel improve ಮಾಡಿದಾಗ, ಕೆರೆ ದುರಸ್ಥಿ ಮಾಡಿದಾಗ ವಸೂಲ್ಮಾಡುವುದರ ಜೊತೆಗೆ water rate ತೆಗೆದುಕೊಳ್ಳುತ್ತೀರಿ. ಹೀಗಿರುವಾಗ irrigation ವಗೈರೆ ಏಕೆ ತೆಗೆದುಕೊಳ್ಳಬೇಕು? ಇಷ್ಟೇ ಅಲ್ಲದೆ ವ್ಯವಸಾಯಗಾರರ ಮೇಲೆ ವ್ಯವಸಾಯ ವರಮಾನದ ತೆರಿಗೆಯನ್ನುಬೇರೆ ಹಾಕಿದ್ದೀರಿ. ವ್ಯವಸಯಗಾರರು ಉಪಯೋಗಿಸತಕ್ಕ ಪ್ರತಿಯೊಂದು ಪದಾರ್ಥದ ಮೇಲೂ ಮಾರಾಟ ತೆರಿಗೆಯನ್ನು ಹಾಕಿದ್ದೀರಿ ಈ ಮಸೂದೆಗೂ ಸಹ ಅಧಿಕಾರವಿದೆ. ಬೆಂಬಲವಿದೆ. ಎಂದು 'Aye' ಎಂದು ಹೇಳುತ್ತಿರಿ, ಆದರೂ ಸಹ ಎಚ್ಚರಿಕೆಯನ್ನು ಕೊಡತಕ್ಕದ್ದು ನಮ್ಮ ಜವಾಬ್ದಾರಿ ಮತ್ತು ಕರ್ತವ್ಯ, ಈ ಜವಾಬ್ದಾರಿಯನ್ನು ಸಾಧ್ಯವಾದ ಮಟ್ಟಿಗು ನಮ್ಮ ಶಕ್ತಿಗನುಗುಣವಾಗಿ ಮಾಡೋಣವೆಂದಿದ್ದೇವೆ. ಆದುದರಿಂದ ಎಚ್ಚರಿಕೆಯನ್ನು ಕೊಡುತ್ತಿದ್ದೇನೆ. ಮೊನ್ನೆ ದಿವಸ ಕೆಲವರು ಹೇಳಿದರು, ವಿರೋಧ ಪಕ್ಷದವರು ಏನು ಕೆಲಸ ಮಾಡುವುದಕ್ಕೆ ಬಂದರೂ ಸಹ ಮಾಡುವ ಕೆಲಸ ವಿಘ್ನವಾಗಬಾರದು ಎಂದು. ನಾವು ವಿಘ್ನ ತರುವುದಕ್ಕೆ ಬಂದಿಲ್ಲ. ನಿಮ್ಮವರು 150 ಜನ ಇದ್ದಾರೆ. ಒಂದು ತೇರನ್ನು ಎಳೆಯುವಂತೆ ನೀವು ಆಡಳಿತವನ್ನು ನೆಡೆಸುತ್ತಿದ್ದೀರಿ. ಆದರೆ ತೇರನ್ನು ಎಳೆದುಕೊಂಡು ಹೋಗುವಾಗ ನೀರಿನ ಕಡೆಗೆ ನಿಮ್ಮ ಗಮನ ಇಲ್ಲ. ಅದು ಎತ್ತ ಕಡೆ ಹೊಗುತ್ತಿದೆ ಎಂಬುದನ್ನು ಸಹ ನೋಡದೇ ಶಕ್ತಿ ಇದೆ ಎಂದು ಎಳೆಯುತ್ತಿದ್ದೀರಿ. ಹೀಗೆ ಎಳೆಯುವಾಗ ತೇರು ಇತರರ ಮೇಲೆ ಹರಿದೀತು ಎಂದು ತೇರಿನ ಪಕ್ಕದಲ್ಲಿ ಕೋಲನ್ನು ಮರದ ತುಂಡುಗಳನ್ನು ಹಿಡಿದುಕೊಂಡು ಕಾದಿರುವಂತೆ ನಾವು ಸಹ ಕೋಲನ್ನು ಹಿಡಿದುಕೊಂಡು ಕುಳಿತಿದ್ದೇವೆ. ಈ ರೀತಿ ಕುಳಿತಿದ್ದರೂ ಸಹ ಬಲವಾಗಿ ಶಕ್ತಿಯನ್ನು ಉಪಯೋಗಿಸಿ ತೇರನ್ನು ಅವರ ಮೇಲೆ ಏರಿಸಿಕೊಂಡು ಹೋದರೆ

ನಾಲ್ಕಾರು ಜನ ಸತ್ತರೆ ದುರಾದೃಷ್ಟವಷಾತ್ ಹಾಗಾಯಿತು. ಪೋಲಿಸಿನವರು ಏನು ಮಾಡುವುದಕ್ಕಾಗುತ್ತದೆ ಎಂದು ಭದ್ರಾವತಿಯಲ್ಲಿ ನಡೆದ ಘಟನೆಯ ವಿಷಯವಾಗಿ ಹೇಳಿದಂತೆ ಆಗುತ್ತದೆ. ಆದುದರಿಂದ ನಾವು ಈ ವಿಷಯವನ್ನು ಯೋಚನೆ ಮಾಡಬೇಕಾಗಿದೆ. ಕೆರೆ ಕಟ್ಟುವುದಕ್ಕೋಸ್ಕರ ಮಾತ್ರವಲ್ಲ ಮುಂದೆ ಇದನ್ನು ಇಂಪ್ರೂವ್ ಮಾಡಿದರೆ, ಮಾರ್ಪಾಡು ಮಾಡಿದರೆ ಅಥವಾ ವಿಸ್ತರಣೆ ಮಾಡಿದರೆ ಅದಕ್ಕೆಲ್ಲ ದುಡ್ಡು ಕೊಡಬೇಕಾಗಿದೆ ಇದರ ಪ್ರಕಾರ ಆದುದರಿಂದ ತಾವು ಇದನ್ನು ತೀವ್ರಾಸಕ್ತಿಯಿಂದ ಆಲೋಚನೆ ಮಾಡಿ, ಇದು ಸರಿಯಾಗಿದೆಯೇ, ಇದು ಧರ್ಮವೇ ಎಂದು ನೋಡಬೇಕು. ಈ ಮಸೂದೆಯೇನೋ ಸೆಲೆಕ್ಟ್ ಕಮಿಟಿಯಲ್ಲಿ ಪರಿಶೀಲನೆಯಾಗಿ ಬಂದಿದೆ ಎಂದ ಮಾತ್ರಕ್ಕೆ ನಮ್ಮ ಬಾಯಿ ಕಟ್ಟಿಲ್ಲ. ನಮ್ಮವರು ಸಮಿತಿಯಲ್ಲಿದ್ದರೆ ಬಾಯಿಕಟ್ಟುತ್ತಿತ್ತೋ ಏನೋ, ಈಗಂತೂ ಕಟ್ಟಿಲ್ಲ. ನಾನು ಕೆಲವರಿಗೆ ಒಂದು ಅಭಿಪ್ರಾಯ ಕೊಡುತ್ತಿದ್ದೆ. ಒಂದು ಸಲ ಮಾಡಿದ ತೀರ್ಮಾನವನ್ನು ಬದಲಾವಣೆ ಮಾಡತಕ್ಕದ್ದು ಕಾನೂನು ರಚನಾ ಕ್ರಮದಲ್ಲಿ ಒಂದು ಲೋಪವೆಂದು ಹೇಳುತ್ತೇನೆ. ಏಕೆಂದರೆ ಜೂರಿಸ್ ಪುಡೆನ್ಸನಲ್ಲಿ ಪ್ರತಿಯೊಂದು ಅಭ್ಯಾಸದ ಮೂಲಕ ಜನರಿಗೆ ಬರಬೇಕು ಮತ್ತು ಅದನ್ನು ಮರೆಯತಕ್ಕ ಶಕ್ತಿ ಅಥವಾ ಸನ್ನಿವೇಶ ಇರಬಾರದು ಎಂದು ಹೇಳಿದೆ. ಅದೇ ಒಂದು ಗುಣವಾಗಿ ಬಿಡುವ, ದುಷ್ಪರಿಣಾಮವಾಗಿ ಬಿಡುವ ಅಭ್ಯಾಸ ಬರುತ್ತದೆ. ಯಾವುದನ್ನೇ ಆಗಲಿ ಪದೆ ಪದೇ ಬದಲಾವಣೆ ಮಾಡುವುದರಿಂದ ಜನಗಳಿಗೆ ತೊಂದರೆಯಾಗುತ್ತದೆ. ಮೊನ್ನೆ ತಾನೆ ಸದಸ್ಯರುಗಳ ಸಂಬಳಗಳಿಗೆ ಸಂಬಂಧಪಟ್ಟ ಮಸೂದೆಯು ಪಾಸಾಯಿತು. ಇದನ್ನು 1952ರಲ್ಲಿ ಮೊದಲು ತಿದ್ದುಪಾಟು ಮಾಡಿದರು, ಮತ್ತೆ 1954ರಲ್ಲಿ ಬದಲಾವಣೆ ಮಾಡಿದರು. 1956ರಲ್ಲಿ ಇನ್ನೂ ಒಂದು ಸಲ ಬದಲಾಯಿಸಿದರು. ಈಗ ಅದನ್ನು ಪುನಃ ಬದಲಾಯಿಸಿ ಸದಸ್ಯರಿಗೆ ದಿನ ಒಂದಕ್ಕೆ ಹದಿನಾರು ರೂಪಾಯಿ ಭತ್ಯೆ ಮತ್ತು ಉಚಿತ ಸ್ಥಳ ಕೊಡಬೆಕು ಎಂದು ಮಾಡಿದ್ದಾರೆ. ಹೀಗೆ ಒಂದೊಂದು ಸಲ ಒಂದೊಂದು ರಿತಿ ಯೊಚನೆ ವಾಾಡಿಕೊಂಡು ಬದಲಾಯಿಸಬಾರದು. ಕಾನೂನು ರಚನೆ ಮಾಡತಕ್ಕವರು ಪದೆಪದೇ ವ್ಯತ್ಯಾಸ ಮಾಡತಕ್ಕ ಹವ್ಯಾಸಕ್ಕೆ ಹೂಗಬಾರದು.

ಈ ಕಾನೂನಿನ ಪ್ರತಿಯೊಂದು ಅಧಿಕಾರವನ್ನು ಕಲೆಕ್ಟರ್ ಅವರಿಗೆ ಕೊಡಲಾಗಿದೆ. ಹಿಂದೆ ನಾನು ಏನು ಹೇಳಿದ್ದೆನೊ ಅದನ್ನೇ ಈಗಲೂ ಹೇಳುತ್ತೇನೆ. ಕಲೆಕ್ಟರ್ ಆದವರು ಇಷ್ಟು ಕಾಂಟ್ರಿಬ್ಯೂಷನ್ಸ್ ಕೊಡಬೇಕು. ಇಷ್ಟು ವಾಟರ್ ರೇಟ್ ಕೊಡಬೇಕು ಎಂದು ಏನಿದೆ, ಅದನ್ನೇ ಅಕ್ಷರಶಃ ಪ್ರತಿಯೊಂದನ್ನು ಇದರಲ್ಲಿ ಬಿಟ್ಟುಬಿಟ್ಟು ಇವರಿಗೆ ಸೂಕ್ತಾನುಸಾರವಾಗಿ ಇದರಲ್ಲಿ ಸೇರಿಸಿದ್ದಾರೆ. ಇದರಲ್ಲಿನ ಮೂರನೆ ಸೆಕ್ಷ್ಷ ಯಾವ ರೀತಿ ಇದೆ ಎಂದು ಓದುತ್ತೇನೆ.

**Section 3.-** Levy of betterment contribution.

"The Government shall be entitled to levy a betterment contribution, in accordance with the provisions of this Act, from the landholder of.......................the cost of which exceeds twenty-five thousand rupees"

ಇದನ್ನು ಮಾತ್ರ ಏಕೆ ಬಿಟ್ಟಿದ್ದಾರೆ. ಇದರಲ್ಲಿ 25 ಸಾವಿರ ರೂಪಾಯಿಗಳಿಗೆ ಕಡಿಮೆ ಇಲ್ಲದಂತೆ ಖರ್ಚು ಮಾಡಿರತಕ್ಕ ಕೆಲಸಕಾರ್ಯಗಳಿಗೆ ಮಾತ್ರ ಈ betterment levy applicable ಎನ್ನತಕ್ಕದ್ದನ್ನು ಉಳಿಕೆ ಮಾಡಿಕೊಂಡಿದ್ದಾರೆ. ಪ್ರತಿಯೊಂದು ಅಕ್ಷರ, ಪದ, ವಾಕ್ಯ, ಕ್ರಿಯಾಪದ ಎಲ್ಲವನ್ನೂ ಉಪಯೋಗಿಸಿದವರು 25 ಸಾವಿರ ರೂಪಾಯಿಗಳಿಗೆ ಕಡಿಮೆ ಇಲ್ಲದಿದ್ದರೆ, ಎಂಬುದನ್ನು ಮಾತ್ರ ಏಕೆ ಕೈಬಿಟ್ಟಿದ್ದು ಎಂದು ದಯವಿಟ್ಟು ಹೇಳಬಲ್ಲರು? ಡೆಪ್ಯುಟಿ ಕಮಿಷನರಿಗೆ ಏಕೆ ಕಂಟ್ರಿಬ್ಯೂಷರ್ನ್ ನಿಗದಿ ಮಾಡತಕ್ಕ ಅಧಿಕಾರವನ್ನು ಕೊಟ್ಟಿದ್ದಾರೆ? ಮದರಾಸು ಆಕ್ಟಿನಲ್ಲಿ ಯಾವರೀತಿಯಾಗಿ ಕಾಂಟ್ರಿಬ್ಯೂಷನ್ ಮೊಬಲಗನ್ನು ನಿಗದಿಮಾಡಬೇಕು ಎನ್ನುವುದರಲ್ಲಿ 500 ರೂಪಾಯಿ ಎಂದು ಹಾಕಿದ್ದಾರೇನು? ಅಲ್ಲಿ ಆ ರೀತಿಹಾಕಿಲ್ಲ. ಯಥಾ ಪ್ರಕಾರ ಸರ್ವೆ ಇಲಾಖೆಯವರು ಇದನ್ನು ಮಾಡಬೇಕು. ಅದರಲ್ಲಿಯೂ ಸಹಿತ ಒಂದು ವೇಳೆ ಅವರು ನೀರನ್ನು ಒದಗಿಸದೆ ಇರತಕ್ಕ ಜಮೀನಿಗೆ ನೀರನ್ನು ಒದಗಿಸಿದರೆ ಆ ಜಮೀನಿಗೆ ಯಾವರೀತಿ ಕಂದಾಯ ಹಾಕಬೇಕು ಎನ್ನುವುದರಲ್ಲಿ ಹೀಗೆ ಹೇಳಿದ್ದಾರೆ. ಅದನ್ನು ಓದುತ್ತೇನೆ. ತಾವು ದಯವಿಟ್ಟು ಕೇಳಬೇಕು.

"Provided that in the case of lands which were originally under dry cultivation and which, with a view to derive benefit from the work, were brought under wet cultivation a sum representating the difference between the cost of wet cultivation as determined in the prescribed manner shall be deducted from the increase in gross produce for the purpose of calculating the increase in capital value of those lands."

ಇದು ಈ ಬಿಲ್ಲಿನಲ್ಲಿ ಎಲ್ಲಿದೆ, ಸ್ವಾಮಿ. ಇದನ್ನು ಏಕೆ ಬಿಡಲಾಗಿದೆ ಎಂದು ಹೇಳಲು ಸಾಧ್ಯವೇ? ಪ್ರತಿಯೊಂದು ಭಾಗದಲ್ಲಿರುವುದನ್ನೂ ಸಮನ್ವಯ ಮಾಡಿದ್ದೇವೆಂದು ಹೇಳಿ ಬೊಂಬಾಯಿ ಕಾನೂನಿನಲ್ಲಿ ಅನುಕೂಲವಾಗಿರುವುದನ್ನು ಒಂದನ್ನು ಹೇಳುವುದು, ಮತ್ತೊಂದು ಕಡೆಯಲ್ಲಿರುವುದರಲ್ಲಿ ಅನುಕೂಲವಾಗಿರುವುದನ್ನು ಹೇಳುವುದು ಈ ರೀತಿ ಮಾಡಿದ್ದಾರೆ. ಇದು ಯಾವ ರಿತಿ ಇದೆ ಎಂದರೆ ಬೇಳೇಕಾಳು, ಉಪ್ಪು, ಹುಳಿ, ಖಾರ ಎಲ್ಲ ಹಾಕಿ ಸಾರನ್ನು ಮಾಡಿ ತಿಳಿಸಾರನ್ನು ಕೊಡುವ ಹಾಗೆ ಇದನ್ನು ಇಲ್ಲಿ ಕೊಟ್ಟಿದ್ದಾರೆ ಎಂದು ನಾನು ಹೇಳುತ್ತೇನೆ.

ಶ್ರೀ ಎಚ್.ಎಸ್. ರುದ್ರಪ್ಪ:- ತಿಳಿಸಾರೋ, ಗಟ್ಟಿಸಾರೋ.

ಶ್ರೀ ಕೆ. ಕೆಂಚಪ್ಪ:- ಅದನ್ನು ತಾವೇ ಹೇಳುವುದರ ಮೂಲಕ ತಮ್ಮನ್ನು ಸಮರ್ಥನೆ ಮಾಡಿಕೊಳ್ಳಬೇಕಾಗಿದೆ. ಆದುದರಿಂದ ತಾವು ಒಂದು ವಿಷಯವನ್ನು ಆಲೋಚನೆ ಮಾಡಬೇಕು., ಏನೆಂದರೆ ಯಾವ ರಿತಿಯಾಗಿ ಇದರಿಂದ ಪ್ರಜೆಗಳಿಗೆ ಅನುಕೂಲವಾಗುತ್ತದೆ ಮತ್ತು ಯಾವರೀತಿ ಪ್ರಜೆಗಳ ಅನುಕೂಲಕ್ಕೋಸ್ಕರ ತಮದಿದ್ದೀರಿ. ಎಂದು. ಇಲ್ಲಿ ತಾವೂ ನಾಲ್ಕು ವರ್ಷಗಳ ಕಾಲ ಇರುತ್ತೀರಿ, ನಾನೂ ಇರುತ್ತೇನೆ. ಆದರೆ ಮಾಡುವ ಕಾರ್ಯ ಶಾಶ್ವತವಾಗಿ ಉಳಿಯುತ್ತದೆ. ಸರ್ಕಾರದವರು ಜವಾಬ್ದಾರಿ ಅರಿತುಕೊಂಡು ಈ ಶಾಸನವನ್ನು ತಂದಿದ್ದಾರೆಯೇ ಎಂದು ಕೇಳುತ್ತಿದ್ದೇನೆ. ನಿಜವಾಗಿಯೂ ಇದನ್ನು ಸಮರ್ಥನೆ ಮಾಡಿಕೊಳ್ಳಬಲ್ಲರೇ? ಇದಕ್ಕೆ ಮಾನ್ಯ ಮುಖ್ಯಮಂತ್ರಿಗಳು ಉತ್ತರಕೊಡಬೇಕು. ಆದ್ದರಿಂದ ಈ ಕಲೆಕ್ಟರ್ ಪದವನ್ನು ಅಮೆಂಡ್‌ಮೆಂಟ್ ಮಾಡಲು ಒಂದು ತಿದ್ದುಪಡಿ ಕಳುಹಿಸಿದ್ದೇನೆ. ಪ್ರತಿಯೊಂದು ವಿಷಯದಲ್ಲೂ ನನ್ನ ಭಾವನೆಯನ್ನು ಹೊರಪಡಿಸಿದ್ದೇನೆ. ಈಗಲೂ ಸಹ ಯೋಚನೆ ಮಾಡಬೇಕಾಗಿದೆ. ಇನ್ನೂ ನಾಲ್ಕು ದಿವಸಗಳಿವೆ. ತಾವೂ ಸಹ ಆಲೋಚನೆ ಮಾಡಿ. ಯಾವ ರೀತಿಯಿಂದ ನೀವು ಸುಖೀ ರಾಜ್ಯವನ್ನು ಹಿಡಿದು ಗಾಂಧಿ ತತ್ವವನ್ನು ಸ್ಥಾಪನೆ ಮಾಡುತ್ತಿದ್ದೀರಿ? 1948 ನೆಯ ಇಸ್ವಿಯಿಂದೀಚೆಗೆ ಸಮಾಜವಾದಿ ತತ್ವವನ್ನು ಸಮರ್ಥನೆ ಮಾಡುತ್ತಿದ್ದೀರಿ. ಈಗಿನ ಸಮಾಜವಾದವೋ ಹಿಂದಿನ ಸಮಾಜವಾದವೋ ಗೊತ್ತಿಲ್ಲ. ಅದರ ತಿರುಳು ಏನು, ತತ್ವವೇನು ಎಂಬುದಕ್ಕೆ ಹೋಗುವುದಿಲ್ಲ. ನೀತಿ ಏನು ಎಂದು ಪಬ್ಲಿಕ್‌ನಲ್ಲಿ ಹೇಳಬೇಕಾಗಿದೆ. ಮಂತ್ರಿಗಳೂ ಪಬ್ಲಿಕ್ ಏಜೆಂಟರು, ನಾವೂ ಪಬ್ಲಿಕಿನ ಏಜೆಂಟರು. ಅವರ ಹಿತ ರಕ್ಷಣೆಗೋಸ್ಕರ for the benefit of the public, we exist. ಆದ್ದರಿಂದ ಅವರ ವಿಚಾರದಲ್ಲಿ ಯಾವ ರೀತಿ ಕಳಕಳಿಯಿಂದ ಯೋಚನೆ ಮಾಡುತ್ತಿದ್ದೇವೆ ಎಂಬುದನ್ನು ಶಾಸನವನ್ನು ತಂದಾಗ ಆಲೋಚನೆ ಮಾಡಬೇಕಾಗಿದೆ. ನಾನು ಅದನ್ನು ಹೇಳದೆ ಹೋದರೆ ಕರ್ತವ್ಯ ಲೋಪವಾಗುತ್ತದೆ. ತಾವು ಯೋಚನೆಮಾಡಿ. ಜನ ಏನೆನ್ನುತ್ತಾರೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತೇನೆ. 1939 ನೆಯ ಇಸವಿಯಲ್ಲಿ ಶಾಸನ ಸಭೆಯಲ್ಲಿ ಒಂದು ಶಾಸನವನ್ನು ತಂದರೆ. ಆಗ ಕಾಂಗ್ರೆಸ್ಸಿನವರು ಕೆಲವರು ಪುಂಡುಗಾರಿಕೆ ಕೆಲಸವನ್ನು ಮಾಡುತ್ತಿದ್ದಾರೆ. ಒಂದು ಬಂದೋಬಸ್ತು ಇಡಬೇಕಾಗುತ್ತದೆ. ಅದಕ್ಕೋಸ್ಕರ ಪಬ್ಲಿಕ್ ಸೇಫ್ಟಿ ಆಕ್ಟ್ ತರುತ್ತೇವೆ ಎಂದು ಹೆಳಿದರು. ಆಗ ವಿರೋಧ ಮಾಡಿರುವ ಕಾಂಗ್ರೆಸ್ಸಿನವರು ಮತ್ತು ಈಗಿರುವ ಕಾಂಗ್ರೆಸ್ಸಿನವರು ಬೇರೆಯೊ, ಆಗಿದ್ದ ರುದ್ರಪ್ಪನವರು ಬೇರೆಯೋ, ಏನೋ, ಯಾರಿಗೆ ಗೊತ್ತು?

**Sri H.S. Rudrappa:-** We have gained in knowledge.

**Sri Kenchappa:-** On the other hand, you have diverted yourself from that path and taken a ditterent path, by which you are establishing that you have taken a wrong path then and the step you are taking now is right. Is that the stand?

**Sri H.S. Rudrappa:-** The stand that is taken is to create more facilities and advantages.

**Sri K. Kenchappa:-** That should have been the stand then also i.e., of creating facilities. How could you create the facilities. How could you create the facilities now? ಅವೊತ್ತಿನ ದಿವಸ ಯಾರು ಆ ಕಾನೂನನ್ನು ನಾಗರೀಕ ದೇಶದಲ್ಲಿರತಕ್ಕ ಕಾನೂನಲ್ಲ, ಜಂಗಲ್ ಲಾ, ಕಾಡು ಮನುಷ್ಯರಿಗೆ ಉಪಯೋಗಿಸುವ ಕಾನೂನು ಎಂದು ಬದಲಾವಣೆ ಮಾಡಬೇಕೆಂದು ಹೇಳುತ್ತಿದ್ದರೋ, ಅವರೇ ಮಾಡಿದ್ದಾರೆ. ಇವೊತ್ತು ಸಮರ್ಥನೆ ಮಾಡುವ ಬುದ್ಧಿ ನಮ್ಮ ಮಂತ್ರಿಗಳಿಗೆ ಬಂದಿದೆ. ಕಾಲಗತಿ ಬದಲಾವಣೆ ಆಗುವಂತೆ ಕಾನೂನುಗಳು ಬದಲಾವಣೆ ಆಗುವ ವಾದವನ್ನು ಹೂಡುತ್ತಿದ್ದಾರೋ ಏನೋ ಗೊತ್ತಿಲ್ಲ. ಏತಕ್ಕೆಂದರೆ, ಎಂದರೆ ಬಹಳ ಸೂಕ್ಷ್ಮವಾಗಿ ಇರತಕ್ಕ ಒಂದು ತತ್ವದ ವಿಚಾರದಲ್ಲಿ ಭಿನ್ನಾಭಿಪ್ರಾಯ ಬರಬಹುದು. ಸಾಧಾರಣವಾದ ವಿಚಾರದಲ್ಲಿ ಭಿನ್ನಾಭಿಪ್ರಾಯ ಬರುವುದಿಲ್ಲ – ಎನ್ನುವ ತತ್ವಕ್ಕೆ ಇವತ್ತಿನ ದಿವಸ ತಾವು ವಿರೋಧಿಸಿದ್ದೀರೋ ಏನೋ ಗೊತ್ತಿಲ್ಲ. ತಂದೆ ತಾಯಿಗಳಲ್ಲಿ ಭಕ್ತಿ ಇಡು. ಗುರುಹಿರಿಯರಲ್ಲಿ ಭಕ್ತಿ ಇಡು, ಎನ್ನುವಂಥ ಒಂದು ಮಾರ್ಗ ಹಿಂದೆ ಇತ್ತು. ಈಗ ದುಡ್ಡು ಕೊಟ್ಟರೆ ಪಾಠ ಹೇಳುತ್ತೇನೆ ಎಂದು ಹೇಳುತ್ತಾರೆ. ಏತಕ್ಕೆ ಹೇಳುತ್ತೇನೆಂದರೆ ಈ ಬಿಲ್ಲನ್ನು ಬಹಳ ಜವಾಬ್ದಾರಿಯಿಂದ ತಂದಿಲ್ಲ. ಈ ರೀತಿ ಜವಾಬ್ದಾರಿಯಿಲ್ಲದೆ ಇಂಥಾ ಬಿಲ್ಲನ್ನು ತಂದು ಅದನ್ನು ಬದಲಾವಣೆ ಮಾಡಿದರೆ ಜನ ಅದನ್ನು ಅಲ್ಲಗಳೆಯುತ್ತಾರೋ ಏನೋ ಎನ್ನುವುದನ್ನು ಅರಿತುಕೊಂಡು ತಂದಿಲ್ಲ ಎಂದು ಹೇಳಬೇಕಾಗಿದೆ. ಮೂರು ದಿವಸಗಳನ್ನು ಈ ಬಿಲ್ಲಿನ ಚರ್ಚೆಗೆ ಕೊಟ್ಟಿದ್ದಾರೆ. ಇದಕ್ಕೆ ಮಹತ್ವ ಕೊಡಬೇಕು. ನಮ್ಮದು ಶೇಕಡ 90 ಜನ ವ್ಯವಸಾಯಗಾರರು ಇರತಕ್ಕ ದೇಶ. ಅವರು ನಮ್ಮ ಸಹೋದರರು ಅವರ ಮೇಲೆ ಈಗಾಗಲೇ ಬಹಳ ತೆರಿಗೆಗಳನ್ನು ಹಾಕಿದ್ದೇವೆ. ಇಷ್ಟು ತೆರಿಗೆಗಳನ್ನು ಹಾಕಿದ ಮೇಲೆ ಮತ್ತು ಟ್ಯಾಕ್ಸ್ ಅಥವಾ ಚಾರ್ಜು ಹಾಕಿದರೆ ಹೇಗೆ? ತಮ್ಮ ರಾಜ್ಯಭಾರವನ್ನು ವಿಚಕ್ಷಣೆಯಿಂದ ನಡೆಸಿ ದೇಶದ ಪ್ರಜೆಗಳ ಉತ್ಪತ್ತಿ ಎಷ್ಟರ ಮಟ್ಟಿಗೆ ಹೆಚ್ಚಾಗಿದೆ ಎಂಬುದಕ್ಕೆ ಏನಾದರೂ ಸ್ಟ್ಯಾಟಿಸ್ಟಿಕ್ಸ್ ಇಟ್ಟಿದ್ದಾರೆಯೇ?

ಶ್ರೀ ಎ.ವಿ. ನರಸಿಂಹರೆಡ್ಡಿ (ಬೆಂಗಳೂರು ದಕ್ಷಿಣ).– ನಮ್ಮಲ್ಲಿ ಅದರ ಬಗ್ಗೆ ಪುಸ್ತಕ ಇದೆ.

ಶ್ರೀ ಕೆ. ಕೆಂಚಪ್ಪ:– ಮೊನ್ನೆ ಫುಡ್ ಎನ್‌ಕ್ವೈರಿ ಕಮಿಟಿಯವರು ಬಂದಾಗ ಹೇಳಿದ್ದಾರೆ. ಅವರು ಸರಿಯಾಗಿ ಹೇಳಿದ್ದಾರೆ. ಸುಮ್ಮನೆ ಇದನ್ನು ಹೇಳಬೇಕು ಎಂದರೆ ಏನು ಪ್ರಯೋಜನ? ನಾವು ನಮ್ಮ ಆತ್ಮವನ್ನು ಪರಿಶೋಧನೆ ಮಾಡುವ ಕಾಲ ಬಂದಿದೆ.

ಬೂಟಾಟಿಕೆ ಪದ ಹೆಚ್ಚಿಗೆ ಉಪಯೋಗಿಸುವುದರಿಂದ ತಿರುಗಿ ತಿರುಗಿ ಅದನ್ನು ಹೇಳುವ ಹವ್ಯಾಸಕ್ಕೆ ಹೋಗುವುದಿಲ್ಲ. ಜನರನ್ನು ಮೆಚ್ಚಿಸುವುದು ಭ್ರಾಂತಿಯ ಮಾತು ಏಕೆಂದರೆ ಬಿಲ್ಲನ್ನು ಇಷ್ಟರ ಮಟ್ಟಿಗೆ ತಂದಿರುವುದರಿಂದ ಇವರಿಗೆ ಯಾರ ಹಿತ ಚಿಂತನೆಯೂ ಇಲ್ಲ. ಇಲ್ಲಿ ಬ್ಯುರಾಕ್ರಿಟಿಕ್ ಸರ್ಕಾರ ಸ್ಥಾಪನೆ ಮಾಡಲು ಹೊರಟಿದ್ದಾರೆಂದು ವಿಷಾದದಿಂದ ಹೇಳಬೇಕಾಗಿದೆ.

**Sri H.S. Rudrappa:-** By the construction of tanks and reservoirs everybody will be benefited, not the Congress people alone.

**Sri K. Kenchappa:-** I know they will be benefited, but because it is beneficial, you cannot tax. You should not think in tems of getting a return. You should not think in terms of making profit or getting income to the Government. It is unconscionable. It is a thing which cannot be supported by consistency or logic. Now, this word logic cannot be explained properly in Kannada. ಆದ್ದರಿಂದ ನಾನು ಹೇಳುತ್ತೇನೆ. ಅದರಲ್ಲಿ ಯಾವ ಲಾಜಿಕ್ ಇದೆ?ಲಾಜಿಕ್ ಎಂದರೆ ಕನ್ನಡದಲ್ಲಿ ತರ್ಕಶಾಸ್ತ್ರ ಎಂದು ಆಗುತ್ತದೆ. According to the principles of logic, when we define a word it should have a true sense, so that it can have a correct meaning. Have you used or defined the words correctly? It is logic and reason that convince a person. Logic has not been the criterion in defining words in this Bill ಆದ್ದರಿಂದ ತಾವು ಯೋಚನೆ ಮಾಡಬೇಕಾಗಿದೆ. ಯಾವ ರೀತಿ ಮಿಸ್‌ಲೀಡ್ ಮಾಡುತ್ತಿದ್ದಾರೆ. ಯಾವ ರೀತಿ ಪದಗಳನ್ನು ಉಪಯೋಗಿಸುತ್ತಿದ್ದಾರೆ ಎಂದು ಯೋಚನೆ ಮಾಡಿದರೆ ತಮಗೆ ಅರ್ಥವಾಗುತ್ತದೆ. ಆದ್ದರಿಂದ ನಾನು ಹೆಚ್ಚಿಗೆ ಹೇಳುವುದಕ್ಕೆ ಹೋಗುವುದಿಲ್ಲ. ನಾನು ಮೊದಲು ಹೇಳಿದ್ದು ಏನೆಂದರೆ ಕಲೆಕ್ಟರನ್ನು ತಪ್ಪಿಸದಿದ್ದರೆ ಶಾಂತಿ ಬರುವುದಿಲ್ಲ. ನಮಗೆ ಗೌರವ ಬರುವುದಿಲ್ಲ. A Collector is a collector. You cannot give any other meaning. A Surveyor is a person who surveys, classifies and fixes assessment Classification is a big word.

ತರ್ಕದ ಬಗ್ಗೆ ಇದ್ದ ಅವರ ಜ್ಞಾನ ಅಪರಿಮಿತ ಎಂಬುದಕ್ಕೆ
ಅವರು ಬಗ್ಗೆ ಕೊಡುವ ಸಂಕ್ಷಿಪ್ತ ವಿವರಣೆ ಇಲ್ಲಿದೆ:

ಕ್ಲಾಸಿಫಿಕೇಷನ್ ಪದಕ್ಕೆ ಸರಿಯಾದ ಅರ್ಥ ಕೊಡಬೇಕು. survey manual ನಲ್ಲಿ ಏನು ಅರ್ಥ ಕೊಟ್ಟಿದ್ದಾರೋ ಅದಕ್ಕೆ ಮಾನ್ಯತೆ ಕೊಡಬೇಕಾಗಿದೆ. ನಿಜವಾಗಿ ಈ ಮಸೂದೆಯನ್ನು ತರಲು ತಮ್ಮಲ್ಲಿ ಮಾನ್ಯತೆ ಇದೆಯೇ ಎಂಬುದನ್ನು ಪ್ರಶ್ನೆ ಮಾಡುತ್ತೇನೆ. ಸರ್ವೆ ಡಿಪಾರ್ಟಮೆಂಟನ್ನು ವಜಾ ಮಾಡುವುದಕ್ಕೆ ಹೊರಟಿದ್ದೀರಿ. ಏತಕ್ಕೆ ಸರ್ವೆ ಡಿಪಾರ್ಟಮೆಂಟ್ ಇಟ್ಟಿದ್ದೀರಿ? ಅದಕ್ಕೆ ತಾವೆ ಉತ್ತರಕೊಡಬೇಕು. ಹಿಂದೆ ನಮ್ಮ ಕಾನೂನಿನಲ್ಲಿ ಏನು ಇತ್ತು ಎನ್ನುವ ವಿಚಾರವನ್ನು ಹೇಳುತ್ತೇನೆ.

ಹಿಂದೆ ನಮ್ಮ ಲ್ಯಾಂಡ್‌ರೆವಿನ್ಯೂ ಕೋಡಿನ ಸೆಕ್ಷನ್ 53 ರಲ್ಲಿ ಏನಿತ್ತೋ ಅದನ್ನು ಈಗ ನೀವು ವಜಾಮಾಡುವುದಕ್ಕೆ ಹೊರಟಿದ್ದೀರಿ. You are thinking in terms of repeating that section. ಅದಕ್ಕೇ ಹೇಳುತ್ತೇನೆ the Government mayauthorise the deputy Commissioner or the Officer in charge of the survey ಇದನ್ನು ಏಕೆ ಹೇಳುತ್ತೇನೆ ಎಂದರೆ Officer in charge of the survey ಎನ್ನುವುದು ಲ್ಯಾಂಡ್ ರೆವಿನ್ಯೂ ಕೋಡಿನ IIನೇ ಸೆಕ್ಷನ್‌ನಲ್ಲಿ ತಾವು ನೋಡಬೇಕು. 111ನೇ ಸೆಕ್ಷನ್ ಎರಡನೇ ಕ್ಲಾಸಿನಲ್ಲಿ "The word used is 'assess' Again it is a question of assessment according to the rules prescribed in the surver Manual. The power to assess under this section shall in the case of lands used for Purposes of agriculture alone, include power to assess, whether directly on the land, or in the form of a rate or cess upon the means of irrigation..." ಕ್ರಮವನ್ನು ಅನುಸರಿಸಿದ್ದಾರಲ್ಲಾ ಅದರ ಮೆಲೆ ಸರ್ಕಾರದ ಅನುಮತಿ ಪಡೆದ ಮೇಲೆ ಮಾಡಬೇಕೆಂದು ಇದೆ. Assessment Fixed by the officer in charge of surver shall not be levied without the sanction of government. ಸ್ವಾಮಿ Sanction of the government ಬೇಕು ಎಂದು ರೂಲಿಂಗ್ ಕೊಟ್ಟಿದ್ದಾರೆ. ರೂಲ್ ಮಾಡುವಾಗ ಆ ರೂಲ್‌ಗಳನ್ನೆಲ್ಲಾ ನಮ್ಮ ಮುಂದೆ ಇಡುತ್ತಿದ್ದರು. ಅದರ ಮೇಲೆ ಬೇಕಾದಷ್ಟು ಚರ್ಚೆಗೆ ಕೊಡುತ್ತಾ ಇದ್ದರು. ಹಿಂದೆ ಬೇಜವಬ್ದಾರಿ ಸರ್ಕಾರ ಎಂದು ಅನ್ನುತ್ತಾ ಇದ್ದವೆಲ್ಲಾ ಅವರು ಇಷ್ಟೆಲ್ಲಾ ಮಾಡಿದ್ದಾರೆ. ಮತ್ತು ಒಂದೆರಡು ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆದು ಹೀಗೆ ಮಾಡಬೇಕು. ಹೀಗೆ ಹೀಗೆ ಬಿಡಬೆಕು ಎಂದು ತಿಳಿಸಿದ್ದಾರೆ. ಸರ್ವೇ ಮ್ಯಾನುಯಲ್‌ನಲ್ಲಿ ಪ್ರತಿಯೊಂದು ಭಾಗಕ್ಕೂ ಎಷ್ಟೋ ಕ್ಲಾಸಿಫಿಕೇಷನ್ ಇವೆ. ಇಷ್ಟೆಲ್ಲ ಅವರು ಮಾಡಿರುವಾಗ ಅವರು ಮಾಡಿರತಕ್ಕದ್ದನ್ನೆಲ್ಲಾ ಸಾವಿರ ಪಂಗ್ತಿ ಬರೆದಿದ್ದನ್ನು ಒಂದು ಮಸಿಚುಕ್ಕೆ ನುಂಗಿತು ಎನ್ನುವ ಹಾಗೆ ನೀವು ವಜಾಮಾಡಿದ್ದಿರಿ. ಕ್ಲಾಸಿಫಿಕೇಷನ್ ಪದಕ್ಕೆ ಸರಿಯಾದ ಅರ್ಥ ಕೊಡಬೆಕು. Survey manual ನಲ್ಲಿ ಏನು ಅರ್ಥ ಕೊಟ್ಟಿದ್ದಾರೋ ಅದಕ್ಕೆ ಮಾನ್ಯತೆ ಕೊಡಬೇಕಾಗಿದೆ. ನಿಜವಾಗಿ ಈ ಮಸೂದೆಯನ್ನು ತರಲು ತಮ್ಮಲ್ಲಿ ಮಾನ್ಯತೆ ಇದೆಯೇ

ಎಂಬುದನ್ನು ಪ್ರಶ್ನೆ ಮಾಡುತ್ತೇನೆ. ಸರ್ವೆ ಡಿಪಾರ್ಟ್‌ಮೆಂಟನ್ನು ವಜಾ ಮಾಡುವುದಕ್ಕೆ ಹೊರಟಿದ್ದೀರಿ. ಏತಕ್ಕೆ ಸರ್ವೆ ಡಿಪಾರ್ಟ್‌ಮೆಂಟ್ ಇಟ್ಟಿದ್ದೀರಿ? ಅದಕ್ಕೆ ತಾವು ಉತ್ತರ ಕೊಡಬೆಕು. ಹಿಂದೆ ನಮ್ಮ ಕಾನೂನಿನಲ್ಲಿ ಏನು ಇತ್ತು ಎನ್ನುವ ವಿಚಾರವನ್ನು ಹೇಳುತ್ತೇನೆ.

ಹಿಂದೆ ನಮ್ಮ ಲ್ಯಾಂಡ್‌ರೆವಿನ್ಯೂ ಕೋಡಿನ ಸೆಕ್ಷನ್ 53ರಲ್ಲಿ ಏನಿತ್ತೋ ಅದನ್ನು ಈಗ ನೀವು ವಜಾಮಾಡುವುದಕ್ಕೆ ಹೊರಟ್ಟಿದ್ದೀರಿ. You are thinking in terms of repealing that section. ಅದಕ್ಕೆ ಹೇಳುತ್ತೇನೆ. The Government may authorise the Deputy Commissioner or the officer in charge of the survey, ಇದನ್ನು ಏಕೆ ಹೇಳುತ್ತೇನೆ ಎಂದರೆ Officer in charge of the survey ಎನ್ನುವುದು ರ್‍ಯಾಂಡ್‌ರೆವಿನ್ಯೂ ಕೋಡಿನ IIIನೇ ಸೆಕ್ಷನ್‌ನಲ್ಲಿ ತಾವು ನೋಡಬೇಕು. IIIನೇ ಸೆಕ್ಷನ್‌ನ ಎರಡನೆ ಕ್ಲಾಜಿನಲ್ಲಿ "the power to assess". The word used in "assess". Again it is a question of assessment according to the rules prescribed in the Survey Manual.

"The power to assess under this section shall, in the case of the lands used for purposes of agriculture alone, include power to assess, whether directly on the land, or in the form of a rate or cess upon the means of irrigation.

ಇದು ಇರಿಗೇಷನ್‌ಗೆ ಸಂಬಂಧವಿಲ್ಲ ಎಂದು ತಾವು ಹೇಳಬಹುದು. ಸರ್ವೆ ಡಿಪಾರ್ಟ್‌ಮೆಂಟಿಗೂ, ಇರಿಗೇಷನ್‌ಗೂ ಸಂಬಂಧವಿಲ್ಲ ಎಂದು ತಾವು ಹೇಳುತ್ತೀರೋ ಏನೋ? ಅಂತು ಅದು ಲ್ಯಾಂಡ್ ರೆವಿನ್ಯೂ ಆಕ್ಟ್‌ನಲ್ಲಿ ಇದೆ. ಆದರೂ ಸಹಿತ ಈ ಎಚ್ಚರಿಕೆ ಕೊಡುವುದು ನನ್ನ ಕರ್ತವ್ಯವಾಗಿರುವುದರಿಂದ ನಾನು ಈಗ ಹೇಳುತ್ತಾ ಇದ್ದೇನೆ. ಇರಿಗೇಷನ್ ಆಕ್ಟ್ ವಗ್ಯೆರೆ ಯಾವುದನ್ನು ಹೇಳುವಾಗಲೂ ಸಹಿತ ಸರ್ವೇ ಮ್ಯಾನ್ಯುಯಲ್ ಪ್ರಕಾರ ನಿಗದಿ ಮಾಡಿರುತ್ತಾರೆಯಲ್ಲಾ ಅದು ಎಷ್ಟೋ ಸೆಕ್ಷನ್‌ಗಳಲ್ಲಿ ಇದೆ. ಲ್ಯಾಂಡ್‌ರೆವಿನ್ಯೂ ಮ್ಯಾನ್ಯುಯಲ್‌ನಲ್ಲಿ ಇರುವ ಪ್ರಕಾರ ಒಂದು ಜಮೀನು ಅಳತೆಮಾಡಿ ಅಂತರ ನಿಗದಿಯಾದ ಕ್ರಮವನ್ನು ಅನುಸರಿಸಿದ್ದಾರೆಯಲ್ಲಾ ಅದರಮೇಲೆ ಸರ್ಕಾರದ ಅನುಮತಿ ಪಡೆದು ಆಮೇಲೆ ಮಾಡಬೇಕೆಂದು ಇದೆ. Assessment fixed by the officer in charge of survey shall not be levied without the sanction of Government, ಸ್ವಾಮಿ sanction of Government ಬೇಕು ಎಂದು ರೂಲಿಂಗ್ ಕೊಟ್ಟಿದ್ದಾರೆ. ರೂಲ್‌ಮಾಡುವಾಗ ಆ ರೂಲ್‌ಗಳನ್ನೆಲ್ಲಾ ನಮ್ಮ ಮುಂದೆ ಇಡುತ್ತಾ ಇದ್ದರು. ಅದರಮೇಲೆ ಬೇಕಾದಷ್ಟು ಚರ್ಚೆಗೆ ಅವಕಾಶ ಕೊಡುತ್ತಾ ಇದ್ದರು. ಹಿಂದೆ ಬೇಜಾವಾಬ್ದಾರಿ ಸರ್ಕಾರ ಎಂದು ಅನ್ನುತ್ತಾ ಇದ್ದೆವಲ್ಲಾ ಅವರು ಇಷ್ಟೆಲ್ಲಾ ಮಾಡಿದ್ದಾರೆ. ಮತ್ತು ಒಂದೆರಡು ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆದು ಹೀಗೆ ಹೀಗೆ ಮಾಡಬೇಕು, ಹೀಗೆ ಹೀಗೆ ಬಿಡಬೇಕು ಎಂದು ತಿಳಿಸಿದ್ದಾರೆ. ಸರ್ವೇ ಮ್ಯಾನ್ಯುಯಲ್‌ನಲ್ಲಿ ಪ್ರತಿಯೊಂದು ಭಾಗಕ್ಕೂ ಎಷ್ಟೋ ಕ್ಲಾಸಿಫಿಕೇಷನ್ ಇವೆ. ಇಷ್ಟೆಲ್ಲಾ ಸಾವಿರ ಪಂಗ್ತಿ ಬರೆದದ್ದನ್ನು ಒಂದು ಮಸಿಚುಕ್ಕೆ ನುಂಗಿತು ಎನ್ನುವಹಾಗೆ ನೀವು ವಜಮಾಡಿದ್ದೀರಿ.

* * * * *

# ನ್ಯಾಯಾಂಗ : ಕೋರ್ಟ್ ಫೀ ಸ್ಟಾಂಪ್

ಶ್ರೀ ಕೆಂಚಪ್ಪ:– ಮಾನ್ಯ ಅಧ್ಯಕ್ಷರೇ, ಇವೋತ್ತಿನ ದಿವಸ ಸಭೆಯ ಮುಮದೆ ಚರ್ಚೆಗೆ ಬಂದಿರುವ ಬೇಡಿಕೆಗಳ ಪೈಕಿ ನ್ಯಾಯಾಂಗ ಮತ್ತು ಜೈಲುಗಳ ವಿಚಾರವಾಗಿ ಮೊದಲನೆ ಬೇಡಿಕೆಯಾದ ನ್ಯಾಯಾಂಗದ ವಿಚಾರದಲ್ಲಿ ಮಾತನಾಡುತ್ತೇನೆ. ಈಗ ನಮ್ಮ ಸಂಸ್ಥಾನದಲ್ಲಿ ನ್ಯಾಯ ಧರ್ಮಗಳು ಜಾಗ್ರತೆಯಾಗಿ ತೀರ್ಮಾನವಾಗುವುದಿಲ್ಲವೆಂದು ಮಾನ್ಯ ಸದಸ್ಯರುಗಳು ತಿಳಿಸಿದ್ದಾರೆ. ಇದಕ್ಕೆ ಕಾರಣವೇನು ಎಂಬ ವಿಚಾರದಲ್ಲಿ ಈಗಾಗಲೇ ವಿಪುಲ ಚರ್ಚೆಯಾಗಿದೆ ಈ ಬಗ್ಗೆ ಮತ್ತೆ ನಾನು ಮಾತನಾಡಲು ಇಷ್ಟಪಡುವುದಿಲ್ಲ. ಒಂದು ವಿಚಾರ ಮಾತ್ರ ನಾನು ಹೇಳಬೇಕು ಎನ್ನುತ್ತೇನೆ. ಈಗಾಗಲೇ ಹೇಳಿ ಕೆಲವು ವಿಚಾರಗಳನ್ನು ಪುನರುಕ್ತಿಯಾಗಿ ಮತ್ತೆ ಹೇಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಮೊದಲನೆಯದಾಗಿ ಜಡ್ಜುಗಳನ್ನು ಜಾಗ್ರತೆಯಾಗಿ ನೇಮಕ ಮಾಡದೆ ಇರುವುದು ಇದಕ್ಕೆ ಕಾರಣವಾಗಿದೆ. ಈ ಅಸೆಂಬ್ಲಿಯಲ್ಲಿ ನಾವು ಕೇಳುವ ಕೆಲವಾರು ಪ್ರಶ್ನೆಗಳಿಗೆ ಸರ್ಕಾರದವರು ಉತ್ತರಕೊಡುವಾಗ ಕಾನೂನಿನ ಪ್ರಕಾರ ಎಷ್ಟು ಜಡ್ಜು ಆಗಬೇಕು ಅಷ್ಟು ಮಂದಿಯನ್ನು ನೇಮಕ ಮಾಡಲಾಗುವುದೆಂದು ಮೊಗುಂ ಉತ್ತರ ಬಂದಿದೆ. ಒಂದು ನಿದರ್ಶನವೇನೆಂದರೆ, ನಮ್ಮ ಮೈಸೂರು ಸಂಸ್ಥಾನದಲ್ಲಿ ಯಾರು ಎಷ್ಟು ಜಡ್ಜುಗಳು ಇರಬೇಕೆಂದು ತೀರ್ಮಾನ ಮಾಡಬೇಕಾಗಿದೆಯೋ ಅವರಿಗೆ ಗೊತ್ತಿಲ್ಲದೆ ಇರಬಹುದು ಎಂಬ ಭಾವನೆ ಬರುತ್ತದೆ. ಇಷ್ಟು ಮುಖ್ಯವಾದ ಮಾತು ತೀವ್ರವಾಗಿ ಜಡ್ಜುಗಳನ್ನು ನೇಮಕಮಾಡಬೇಕಾದ ವಿಚಾರವನ್ನು ಉಪೇಕ್ಷೆಯಿಂದ ಕಾಣುವುದು ಸರಿಯಾದುದಲ್ಲ. ಭಾರತದ ಸಂವಿಧಾನದ 216ನೇ ಆರ್ಟಿಕಲ್ ಹೀಗಿದೆ:–

"Every High Court shall consists of a Chief Justice and such other judges as the president may from time to time deem it necessary to appoint".

ಅಂದರೆ ನಮ್ಮ ರಾಷ್ಟ್ರಧ್ಯಕ್ಷರು ಪ್ರತಿಯೊಂದು ರಾಜ್ಯದಲ್ಲಿ ಎಷ್ಟು ಜಡ್ಜುಗಳು ಇರಬೇಕೆಂದು ಅಭಿಪ್ರಾಯಕೊಡುತ್ತಾರೋ ಅಷ್ಟು ಮಂದಿ ಜಡ್ಜುಗಳು ನೇಮಕ ಮಾಡುವುದು ಕರ್ತವ್ಯವಾಗಿದೆ. ಮತ್ತು ಕೆಲಸ ಕಾರ್ಯಗಳು ಹೆಚ್ಚಿಗೆ ಇದ್ದಾಗ, ಮುಂದೆ ಆರ್ಟಿಕಲ್; 224 ರಲ್ಲಿ ಈ ಪ್ರಕಾರವಾಗಿ ಹೇಳಿದೆ.

"If by reason of any temparary increase in the business of a High Court or by reason of arrears of work there in, it appears to the President that the number of the Judges of that court could be for the time being increased, the president may appoint duly qualified persons to be additional judges of the court for such period not exceeding two years as he may specify."

ಹೀಗಿರುವಾಗ ಇಷ್ಟು ದೊಡ್ಡ ಪ್ರಮಾಣದಲ್ಲಿ ಕೇಸುಗಳನ್ನು ಪೆಂಡಿಂಗ್ ಇಟ್ಟುಕೊಳ್ಳುವಂಥ ಪರಿಸ್ಥಿತಿಯನ್ನು ಉಂಟುಮಾಡುವುದು ಯಾರಿಗೂ ಗೌರವತರಕ್ಕಂಥ ವಿಚಾರವಲ್ಲವೆಂದು ಬಹಳ ವಿಷಾದದಿಂದ ನಾನು ಹೇಳಬೇಕಾಗಿದೆ. ತಡವಾಗಿ ತೀರ್ಮಾನ ಆಗುವುದರ ಮೂಲಕ ಕೆಡಕಾಗುತ್ತಿದೆ ಎಂಬ ಭಾವನೆ ಉಂಟಾಗುತ್ತದೆ. Justice delayed is wrose than justice denied. ಆದುದರಿಂದ ಈ ವಿಷಯವನ್ನು ತೀವ್ರಾಸಕ್ತಿಯಿಂದ ವಿಚಾರ ಮಾಡಬೇಕು. ತತ್ವವನ್ನು ಒಮ್ಮೆ ಒಪ್ಪಿಕೊಂಡ ಮೇಲೆ ಅದರಲ್ಲಿ ನಿಷ್ಠೆಇರಬೇಕು. ಈಗ ತಡವಾಗುವುದಕ್ಕೆ ಉಂಟಾಗಿರುವ ಪರಿಸ್ಥಿತಿಯನ್ನು ನಿವಾರಣೆ ಮಾಡುವುದರಲ್ಲಿ ದಕ್ಷತೆ ಲೋಪ ಬಂದಿದೆ. ಎಂದು ಬಹು ವಿಷಾದದಿಂದ ಹೇಳಬೇಕಾಗಿದೆ. ಜಡ್ಜುಗಳನ್ನು ನೇಮಕ ಮಾಡುವುದರಲ್ಲಿ ಇಷ್ಟು ವಿಳಂಬ ಆಗಬಾರದಿತ್ತು. ಇದಕ್ಕೆ ಕಾರಣಕರ್ತರು ಯಾರು ಮತ್ತು ಕೇಂದ್ರ ಸರ್ಕಾರದ ತಪ್ಪು ಈ ವಿಚಾರದಲ್ಲಿ ಎಷ್ಟರಮಟ್ಟಿಗೆ ಇದೆ ಎಂದು ಆಲೋಚನೆ ಮಾಡೋಣ. ಒಂದು ವೇಳೆ ಇದರಲ್ಲಿ ಕೇಂದ್ರ ಸರ್ಕಾರದ ತಪ್ಪು ಇಲ್ಲದೆ ಇದ್ದರೂ ಸಹ ನಮ್ಮವರ ವಿಚಾರದಲ್ಲಿ ತಡವಾಗಲು ತಪ್ಪಿಲ್ಲವೆಂದು ಹೇಳುವುದಕ್ಕೆ ನಾನು ತಯಾರು ಇಲ್ಲ. ವಿಪರೀತವಾಗಿ ತಡವಾಗುವ ಸಂದರ್ಭವುಂಟಾಗಲು ಏನಾದರೂ ಕಾರಣ ಇರಲಿಕ್ಕೇ ಬೇಕು ನಮ್ಮ ರಾಷ್ಟ್ರಾಧ್ಯಕ್ಷರಿಂದ ಜಡ್ಜುಗಳನೇಮಕವಾಗಲಿಕ್ಕೆ ಇಷ್ಟು ತಡವಾಯಿತು ಎಂಬುದು ಕಾರಣವಲ್ಲ. ಎಂದು ಹೇಳಲು ನಾನು ಹಿಂಜರಿಯುವುದು ಇಲ್ಲ.

ಇನ್ನು ಮುಂದಾದರೂ ಬಡವರಿಗೆ ನ್ಯಾಯ ಮುಫತ್ತಾಗಿ ದೊರೆಯತಕ್ಕ ಸಂದರ್ಭ ತಾತ್ಕಾಲಿಕವಾಗಿ ಇಲ್ಲದೆ ಹೋದರೂ ಆಗ, ಬಹಳ ಕಡಿಮೆಯ ಖರ್ಚಿನ ದರ್ಜೆಯಲ್ಲಿ ನ್ಯಾಯ ದೊರಕುವಂತೆ ಆಗಬೇಕು ಎನ್ನುವ ವಿಷಯಗಳನ್ನು ಒಪ್ಪಿಕೊಳ್ಳಬೇಕು. ಬಡವರಿಗೆ ಮುಫತ್ತಾಗಿ ನ್ಯಾಯ ದೊರಕಬಾರದು ಎಂದು, ಹೇಳುವವರ ಪೈಕಿ ನಾನಲ್ಲ. ಪ್ರಕೃತದಲ್ಲಿ ಪದ್ಧತಿಯೂ ನಡೆಯುತ್ತದೊ ಇಲ್ಲವೋ ಎಂಬ ಶಂಕೆ ಇರುವುದರಿಂದ ನಮ್ಮಲ್ಲಿ ನಡೆದುಕೊಂಡು ಬಂದಿರುವ ಪದ್ಧತಿಯನ್ನು ಅನುಸರಿಸಿದರು ಸಹ, ಬಡವನಿಗೆ ಕಡಿಮೆ ಖರ್ಚಿನಲ್ಲಿ ನ್ಯಾಯ ದೊರಕಬೇಕು. ಈಗ ನಾವು ವರಮಾನ ತೆರಿಗೆಯ ವಿಚಾರವನ್ನು ಒಂದು ರೀತಿಯಿಂದ ನೋಡುತ್ತಿದ್ದೇವೆ. ಸೇಲ್ಸ್ ಟ್ಯಾಕ್ಸ್ ಪ್ರಶ್ನೆ ಬಂದಾಗ ಇನ್ನೊಂದು ದೃಷ್ಟಿಯಿಂದ ನೋಡುತ್ತಿದ್ದೇವೆ ಮತ್ತು ಕೋರ್ಟ್ ಫೀ ಸ್ಟಾಂಪ್ ಸೂಟ್ಸ ವ್ಯಾಲ್ಯೂಯೇಷನ್ ಆಕ್ಟಿನಲ್ಲಿ ಪರಿಮಿತಿ ನಿಗದಿ ಮಾಡುವ ವಿಚಾರದಲ್ಲಿ ಮತ್ತೊಂದು ದೃಷ್ಟಿಯಿಂದ ನೋಡುತ್ತಿದ್ದೇವೆ. ಜನ ಸಾಮಾನ್ಯರ ದೃಷ್ಟಿ ನಮ್ಮ ರಾಜ್ಯಭಾರ ಮಾಡುವ ಜನರಿಗೆ ಇದೆಯೋ ಇಲ್ಲವೋ ಎಂಬ ಶಂಕೆ ಬಂದಿದೆ. ಸಾಮಾನ್ಯವಾಗಿ ತೆರಿಗೆಯ ವಿಷಯದಲ್ಲಿ ಅನುಸರಿಸುವ ಪದ್ಧತಿಗೂ ಇನ್‌ಕಂಟ್ಯಾಕ್ಸ ವಿಷಯದಲ್ಲಿ ಅನುಸರಿಸುವ ಪದ್ಧತಿಗೂ ಕೋರ್ಟಿನಲ್ಲಿ ನ್ಯಾಯ ದೊರಕಿಸಿಕೊಡುವ ವಿಷಯದಲ್ಲಿ ಅನುಸರಿಸುವ ಪದ್ಧತಿಗೂ ಎಷ್ಟೋ ಅಂತರವಿದೆ. ನಮ್ಮ ನ್ಯಾಯವನ್ನು ಮಾರಾಟ ಮಾಡಿಕೊಳ್ಳಬಾರದು. Justice of the country should not be sold ಎಂಬ ತತ್ವವನ್ನು ಒಪ್ಪಿಕೊಳ್ಳುವುದಿಲ್ಲವೇ? ಈ

ರೀತಿಯಾಗಿ ಒಪ್ಪಿದ ಮೇಲೆ ನಮ್ಮ ದೇಶದಲ್ಲಿ ಹಿಂದಿನವರು ಮಂಡಿಸಿರತಕ್ಕಂಥ ಬಜೆಟ್‌ನ್ನು ಯೋಚನೆ ಮಾಡಿದರೆ ಹಿಂದಿನ ಐದು ತಿಂಗಳುಗಳಲ್ಲಿ ಬಂದಿರತಕ್ಕಂಥ ಅಂಕಿ ಅಂಶಗಳನ್ನು ನೋಡಿದರೆ, 26,49,000 ರೂಪಾಯಿ ವರಮಾನ ಬರುತ್ತಿತ್ತು. ಮತ್ತು ಖರ್ಚು ಸಹ 26,91,800 ರೂಪಾಯಿ ಖರ್ಚಾಗುತ್ತಿತ್ತು. ಹಿಂದಿನ ಐದು ತಿಂಗಳ ಅಂಕಿ ಅಂಶಗಳಿಂದ ಗೊತ್ತಾಗುತ್ತದೆ. ಇದನ್ನು ನೊಡಿದರೆ ಈ ವರಮಾನಕ್ಕೂ ಖರ್ಚಿಗೂ ಸರಿದೂಗುತ್ತದೆ. ಬೇಕಾದರೆ ವಿಶದವಾಗಿ ಸ್ಟಾಂಪಿನ ಮೂಲಕ ಇಷ್ಟು ಖರ್ಚಾಗಿದೆ Administration of justice ಮೂಲಕ ಇಷ್ಟು ಎಂದು ಹೇಳಬಲ್ಲೆ. ಅದು ಅನಾವಶ್ಯಕ ಆದ್ದರಿಂದ, ನಾನು ಕೇಳುತ್ತೇನೆ. ಇವತ್ತಿನ ದಿವಸ ಕೊರ್ಟ ಪೀಜ್ ಸ್ಟಾಂಪ್ ಆಕ್ಟನ್ನು ಇಂಟ್ರಡ್ಯೂಸ್ ಮಾಡುವಾಗ ನಮ್ಮ ನ್ಯಾಯವನ್ನು ಮಾರಾಟ ಮಾಡಬೇಕೆಂಬ ದೃಷ್ಟಿಯಿಂದ ಸಭೆಯ ಮುಂದೆ ಇಟ್ಟಿದ್ದಾರೋ ಅಥವಾ ನ್ಯಾಯವನ್ನು ದೊರಕಿಸತಕ್ಕಂಥ ವ್ಯವಸ್ಥೆಗೆ ಖರ್ಚು ಬಹಳ ಹೆಚ್ಚಾಗುತ್ತದೆ. ಅದನ್ನು ಸರಿತೂಗಿಸೋಣ ಎಂಬ ದೃಷ್ಟಿಯಿಂದ ಇಟ್ಟಿದ್ದಾರೋ ಅಥವಾ ಯಾವುದೊ ಒಂದು ರೀತಿಯಿಂದ ದೇಶಕ್ಕೆ ಉತ್ಪತ್ತಿ ಬರಲಿ, ಈ ಬಾಬಿನಿಂದಲೂ ಸ್ವಲ್ಪ ಮಟ್ಟಿಗೆ ಉತ್ಪತ್ತಿಯನ್ನು ಹೆಚ್ಚಿಗೆ ಮಾಡೋಣ ಎನ್ನುವ ದೃಷ್ಟಿಯಿಂದ ಈ ಕೋರ್ಟು ಫೀಜ್ ಸ್ಟಾಂಪ್‌ನ್ನು ಜಾಸ್ತಿ ಮಾಡಿದ್ದಾರೋ, ಎನ್ನುವ ಪ್ರಶ್ನೆಯನ್ನು ಈಗ ಆಲೋಚನೆ ಮಾಡಬೇಕಾಗಿದೆ. ಈ ದೃಷ್ಟಿಯಿಂದ ಹೆಚ್ಚಿಗೆ ಹೇಳಲು ಇಷ್ಟವಿಲ್ಲ. "Double thinking and double action is against a man of conviction" ಒಬ್ಬ ಮನುಷ್ಯನಿಗೆ ಎಷ್ಟೇ ಕಷ್ಟ ಬರಲಿ ಎಷ್ಟೇ ತೊಂದರೆ ಬರಲಿ ನಿಜವಾದ ಭಕ್ತಿ ಒಂದು ತತ್ವದಲ್ಲಿ ಇದ್ದ ಪಕ್ಷದಲ್ಲಿ ಆ ತತ್ವಕ್ಕೆ ಸರಿಯಾದ ರೀತಿಯಲ್ಲಿ ವ್ಯವಸ್ಥೆ ಮಾಡತಕ್ಕದ್ದು ಅವನ ಕರ್ತವ್ಯವಾಗಿದೆ. ಇಲ್ಲದೇ ಹೋದರೆ "it amount to double thinking and double action" ಇದನ್ನು ನಾವು ತೀವ್ರವಾಗಿ ಆಲೋಚನೆ ಮಾಡಬೇಕಾಗಿ ಬಂದಿದೆ.

ತತ್ವವನ್ನು ಮಾತು ಎತ್ತಿದರೆ ಹೇಳುತ್ತಾರೆ. ಅದನ್ನು ಬೇಕಾದಷ್ಟು ಸಾರಿ ಹೇಳುತ್ತಿರುತ್ತಾರೆ. ಆದರೆ ಆ ತತ್ವಕ್ಕೆ ಅನುಸಾರವಾಗಿ ವ್ಯವಸ್ಥೆಯನ್ನು ಏಕೆ ಮಾಡುತ್ತಾ ಇಲ್ಲ? ಆ ತತ್ವವನ್ನು ಎಷ್ಟರ ಮಟ್ಟಿಗೆ ಅನುಷ್ಠಾನಕ್ಕೆ ತಂದಿದ್ದಾರೆ. ಎನ್ನುವ ವಿಚಾರವನ್ನು ನೋಡುತ್ತಾ ಹೋದರೆ ಏನು ಕಾಣುತ್ತಾ ಇಲ್ಲ. ಮಾತೆತ್ತಿದರೆ ನಾಲಗೆಯ ತುದಿಯಲ್ಲಿತತ್ವ ಕುಣಿಯುತ್ತದೆ.

ಆದರೆ ನಮಗೆ ಬೇಕಾದುದು ಅದನ್ನು ಅನುಷ್ಠಾನಕ್ಕೆ ತರುವ ಮಾರ್ಗವೇ ಹೊರತು ಬಾಯಿ ಪಠನವಲ್ಲ. ಎಂದು ನಾನು ತಮ್ಮಲ್ಲಿ ಅತಿ ವಿನಯದಿಂದ ಬೇಡಿಕೊಳ್ಳುತ್ತೇನೆ. ಈ ತತ್ವಗಳ ವಿಚಾರದಲ್ಲಿ ಒಂದು ಕೆಟಗಾರಿಕಲ್ ಸ್ಟೇಟ್‌ಮೆಂಟ್ ಮಾಡಬೇಕು ಇಂತಿಂಥ ವಿಚಾರದಲ್ಲಿ ನಿಮಗೆ ನಂಬಿಕೆ ಇದೆ. ನಂಬಿಕೆ ಇರುವ ದೆಶೆಯಿಂದ ಎಷ್ಟೇ ಎಡರು ತೊಡರುಗಳು ಬರಲಿ ನಂಬಿಕೆಗೆ ತಕ್ಕ ವ್ಯವಸ್ಥೆ ಮಾಡುತ್ತೇವೆ. ಇಂತಿಂಥ ವಿಚಾರದಲ್ಲಿ ನಂಬಿಕೆ ಇಲ್ಲ ಆದ್ದರಿಂದ ವ್ಯವಸ್ಥೆ ಮಾಡುವುದಕ್ಕೆ ಇಷ್ಟವಿಲ್ಲ ಎಂದು ಹೇಳಲಿ. ಒಂದಾನೊಂದು ಕಾಲದಲ್ಲಿ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಮಾರಾಟ ಮಾಡಬಹುದಾಗಿತ್ತು.

ಅಂತಹ ಕಾಡಿನ ಕಾನೂನನ್ನು ಈಗ ಜಾರಿಗೆ ತರತಕ್ಕ ಮೋಭಾವನೆಯನ್ನು ಬಿಟ್ಟುಬಿಡಬೇಕು. ನಾವು ಈಗ 1957ನೆಯ ಇಸ್ವಿಯಲ್ಲಿ ಇದ್ದೇವೆ. ಆ ತತ್ವಕ್ಕೆ ಅನುಸಾರವಾಗಿ ವ್ಯವಸ್ಥೆ ಮಾಡಬೇಕು. ಇಲ್ಲದಿದ್ದರೆ ತತ್ವದಲ್ಲಿ ನಂಬಿಕೆ ಇಲ್ಲ. ಎನ್ನುವ ವಿಚಾರ ಹೇಳಬೇಕು ಎಂದು ಮತ್ತೊಮ್ಮೆ ಒತ್ತಿಹೇಳುತ್ತೇನೆ.

ಇಷ್ಟು ಹೇಳಿ ಬಡವರಿಗೆ ಕೆಲವು ಸಂದರ್ಭಗಳಲ್ಲಿ ಕೋರ್ಟ ಫೀ ಸ್ಟಾಂಪನ್ನು ಕಡಿಮೆ ಮಾಡಬೇಕೆಂದು ಕೇಳುತ್ತೇನೆ. ಶಕ್ತಿ ಇಲ್ಲದೆ ಇರುವ ಜನಗಳ ವಿಚಾರದಲ್ಲಿ ಏನು ಮಾಡಬೇಕೋ ಅದನ್ನು ಸಹ ನಾವು ಉಪೇಕ್ಷೆಯಿಂದ ಕಾಣತಕ್ಕದ್ದಲ್ಲ. ಈ ವಿಚಾರದಲ್ಲಿ ಏನು ಮಾಡಬೇಕು ಎನ್ನುವುದನ್ನು ಲೋಚನೆ ಮಾಡಬೇಕು. ಅದನ್ನು ಸಹ ನಾವು ಉಪೇಕ್ಷೆಯಿಂದ ಕಾಣತಕ್ಕದ್ದು ಸರಿಯಿಲ್ಲ. ಈ ವಿಚಾರದಲ್ಲಿ ನಾವು ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ಅನುಸರಿಸಿಕೊಂಡು ಬಂದಿರತಕ್ಕ ವಿಚಾರಗಳು ಮನಸ್ಸಿಗೆ ತೆಗೆದುಕೊಳ್ಳಲೇಬೇಕು. ಅಲ್ಲಿಯೂ ಸಹ ಬಡವರಿಗೆ ಸಹಾಯ ಮಾಡಲು ಮತ್ತು ಅವರಿಗೆ ನ್ಯಾಯ ಮುಫತ್ತಾಗಿ ದೊರೆಯಬೇಕು ಎನ್ನುವ ರೂಪದಲ್ಲಿ ಬೇಕಾದಷ್ಟು ವ್ಯವಸ್ತೆಗಳನ್ನು ಮಾಡಿರುವುದು ನಮ್ಮ ಗ'ಮನಕ್ಕೆ ಬಂದಿದೆ. ಇಲ್ಲಿಯೂ ಸಹ ಕೈಯಲ್ಲಿ ಕಾಸು ಇಲ್ಲದೆ ಇರುವವರಿಗೆ ಅನ್ಯಾಯವಾದ ಸಂದರ್ಬದಲ್ಲಿ ಅವರಿಗೆ ನ್ಯಾಯ ದೊರಕಿಸಿ ಕೊಡಬೇಕಾದಪ್ರಸಂಗ ಬಂದರೆ ಅದಕ್ಕೆ ಹಿಂಜರಿದು ಮಾತನಾಡುವುದು ಸರಿಯಲ್ಲ ಎಂದು ಹೇಳುತ್ತೇನೆ. ಈ ಸಂಧರ್ಭದಲ್ಲಿ ಒಂದು ವಿಚಾರ ಹೇಳುತ್ತೇನೆ. ಪ್ರಭುತ್ವ ನಡೆಸತಕ್ಕಂಥವರು ಜಡ್ಜುಗಳ ನೇಮಕ ವಿಚಾರದಲ್ಲಿ ಬಹಳ ಹುಷಾರಾಗಿ ನಡೆದುಕೊಂಡು ಹೋಗಬೇಕಾಗಿತ್ತು. ಆದರೆ ಅಷ್ಟು ತೀವ್ರವಾದ ಗಮನವನ್ನು ಈ ಜಡ್ಜಿಗಳ ನೇಮಕದ ವಿಚಾರದಲ್ಲಿ ಕೊಟ್ಟಿಲ್ಲ. ಯಾವುದೋ ಪರ್ಸನಲ್ ಅಥವಾ ಸ್ವಂತ ಅಥವಾ ಪಾರ್ಟಿ ಇಂಟ್ರೆಸ್ಟಿನ ದೃಷ್ಟಿಯಿಂದ ಒಂದು ನಮೂನೆಯಾದ ಅಭಿಪಾಯಗಳು ಎದ್ದು ಬಂದು ಕಾಣುವ ರೀತಿಯಲ್ಲಿ ಬಂದಿರತಕ್ಕ ಪ್ರಸಂಗ ಕಾಣುತ್ತದೆ. ಯಾರ ವಿಚಾರವನ್ನು ಹೇಳದೇ ಹೋದರೂ ಕೆಲವು ಸ್ಥೂಲವಾದ ಅಂಶಗಳನ್ನು ಹೇಳದೇ ಹೋದರೆ ಅದು ಅಪಾರ್ಥವಾದೀತು. ಎನ್ನುವ ವಿಚಾರವನ್ನು ತಮ್ಮ ಗಮನಕ್ಕೆ ತರುತ್ತೇನೆ. 1948ನೆ ಇಸ್ವಿಯಿಂದ 6–7 ವರ್ಷ ನೆಡೆದುಕೊಂಡು ಬಂದಿರತಕ್ಕ ವಿಧಾನದಲ್ಲಿ ತೀರ್ಮಾನವಾಗಿ ನೇಮಕ ಆಗಿದ್ದಂತೆ ಮತ್ತು ನ್ಯಾಯಾಧೀಶರ ವಿಚಾರದಲ್ಲಿ ಕೆಲವು ಜಡ್ಜಿಗಳು ರಾಜಿನಾಮೆ ಕೊಡಲು ಕಾರಣ ಆಗಿರತಕ್ಕ ವಿಚಾರವನ್ನು ಮತ್ತು ಇನ್ನು ಕೆಲವರು ಮನಸ್ಸು ಇಲ್ಲದೆ ರಿಟೈರ್ ಆಗಿರತಕ್ಕ ಸಂದರ್ಭಗಳನ್ನು ಇತ್ತೀಚೆಗೆ ನೇಮಕ ಮಾಡಿರುವ ಸಂದರ್ಭಗಳಲ್ಲಿಯೂ ಸಹ ಅನೇಕ ಎಡರು ತೊಡರುಗಳು ಬಂದಿರುವುದನ್ನೂ ಗಮನಿಸಿ ನೋಡಿದರೆ, ರಾಜ್ಯಭಾರ ವ್ಯವಸ್ಥೆ ಮಾಡಿರತಕ್ಕ ಜನರೂ ಈ ಜಡ್ಜಿಗಳನ್ನು ನೇಮಕ ಮಾಡತಕ್ಕ ವಿಚಾರದಲ್ಲೂ ಸಹ ಒಂದು ಮೇಲ್ಪಟ್ಟು ರೀತಿಯಲ್ಲಿ ಆಲೋಚನೆ ಮಾಡದೆ ನಾನಾ ವಿಚಾರದಲ್ಲಿ ಕೈ ಹಾಕಿರತಕ್ಕದ್ದು ನನ್ನ ಗಮನಕ್ಕೆ ಬಂದಿದೆ. ಇದನ್ನು ಯಾರೂ ಇಲ್ಲ ಎಂದು ಹೇಳುವಾಗ ಹಾಗೆ ಇಲ್ಲ. ಪ್ಯಾಲೇಸ್ ಹತ್ತಿರ ನೆಡೆದ ದೊಂಬಿಕೇಸಿನ ವಿಚಾರದಲ್ಲಿ ನಡೆದಿರತಕ್ಕ ಒಂದು ತೀರ್ಪನ್ನು ಸಹ ನಾವು ಗಮನಕ್ಕೆ ತೆಗೆದುಕೊಂಡು ಆಲೋಚನೆ ಮಾಡಬೇಕಾದ ವಿಚಾರ ಇದೆ. ಈ ದೃಷ್ಟಿಯಿಂದ.....

ಶ್ರೀ ಎಸ್. ನಿಜಲಿಂಗಪ್ಪ:- ಅದು ಸಬ್ ಜುಡೀಸ್.

ಶ್ರೀ ಕೆ. ಕೆಂಚಪ್ಪ:- ಹಿಂದೆ ಒಂದು ರೈಟಿಂಗ್ ಆದ ವಿಚಾರ ಹೇಳುತ್ತೇನೆ.

ಶ್ರೀ ಎಸ್. ನಿಜಲಿಂಗಪ್ಪ:- ಅದು ಸಬ್ ಜುಡೀಸ್.

ಶ್ರೀ ಕೆ. ಕೆಂಚಪ್ಪ:- ಜಡ್ಜಮೆಂಟ್ ಮುಗಿದು ಹೋಗಿದೆ ಎಂದು ತಿಳಿದುಕೊಂಡು ಹೇಳಿದ್ದು. ನಾವು ಆ ವಿಚಾರವನ್ನು ಆಲೋಚನೆ ಮಾಡಬೇಕಾಗಿದೆ. ಇಷ್ಟು ಹೇಳಿ ನಾನು ಪೋಲೀಸ್ ಖಾತೆ ವಿಚಾರಕ್ಕೆ ಬರುತ್ತೇನೆ. ಪೋಲೀಸಿನವರ ವಿಚಾರದಲ್ಲೂ ಸಹ ನಾನಾ ಬಗೆಯ ವಿಷಯಗಳನ್ನು ನನ್ನ ಮಿತ್ರರು ಹೇಳಿರುವುದರಿಂದ ಅವರ ನೇಮಕ ವಿಚಾರದಲ್ಲಿ ಸಹ ಸರ್ಕಾರದ ಮನೋಭಾವನೆ ಯಾವ ರೀತಿ ಇದೆ ಎನ್ನುವುದನ್ನು ತಮ್ಮ ಗಮನಕ್ಕೆ ತರುತ್ತೇನೆ. ಇದು ಪೋಲೀಸ್ ಖಾತೆಯಲ್ಲಿರತಕ್ಕಂಥ ನೌಕರಿಯಲ್ಲಿ ವಿಪರೀತವಾದ ಅಸಮಧಾನವನ್ನು ತಂದಿಡುವುದಕ್ಕೆ ಕಾರಣವಾಗಿದೆ ಎಂಬುದು ಅಷ್ಟೇ ಅಲ್ಲ. ಈ ದೆಸೆಯಿಂದ ಆಡಳಿತ ವಿಪರೀತಸಡಿಲವಾಗಿ ದೇಶದ ಹಿತಕ್ಕೆ ತುಂಬ ತೊಂದರೆ ಬಂದಿದೆ ಎನ್ನುವ ವಿಚಾರವನ್ನು ಹೇಳುವುದಕ್ಕೆ ಕೂಡ ನಾನು ಹಿಂಜರಿಯುವುದಿಲ್ಲ. ಏಕೆಂದರೆ 1947ನೆ ಇಸವಿಯಲ್ಲಿ ಇದ್ದಂಥ ಪೋಲೀಸ್ ಐ.ಜಿ. ಯವರು ಕಂಪಲ್ ಸರಿಯಾಗಿ ರಿಟೈರ್ ಆಗುವುದಕ್ಕೆ ಕಾರಣವೇನು?

ಆಗಿನ ಕಾಲದಲ್ಲಿ ಡಿ.ಐ.ಜಿ. ಆಗಿರತಕ್ಕ ಹಳಬರು ಇಬ್ಬರು ಒಂದಲ್ಲ ಒಂದು ವಿಧವಾಗಿ ಕಷ್ಟಕ್ಕೆ ಒಳಗಾಗಿ ಕಂಪಲ್‌ಸರಿ ರಿಟೈರ್ ಆಗುವುದಕ್ಕೆ ಕಾರಣವೇನು? ಡಿ.ಎಸ್.ಪಿ. ಯನ್ನು ಐ.ಜಿ. ಯಾಗಿ ಮಾಡಿರುವುದರಿಂದ ಡಿ.ಐ.ಜಿ. ತಮ್ಮ ಕೆಳಗೆ ಇರತಕ್ಕ ಡಿ.ಎಸ್.[ಇ. ಯನ್ನು ಐ.ಜಿ. ಯಾಗಿ ಮಾಡಿರುವುದರಿಂದ ಡಿ ಐ ಜಿ ಆಗಿರುವುದಕ್ಕೆ ಇಷ್ಟ ಪಡದೆ ರಾಜಿನಾಮೆ ಕೊಟ್ಟು ಇನ್ನು ಮುಂಚಿತವಾಗಿ ಹೋಗುವುದಕ್ಕೆ ಕಾರಣವೇನು? ಇವೆಲ್ಲ 1947ನೆ ಇಸವಿಯಿಂದ 1952ನೇ ಇಸವಿಯವರೆಗೂ ನೆಡೆದುಕೊಂಡು ಬಂದಿರತಕ್ಕ ವಿಚಾರ. ಹೀಗೆಲ್ಲ ಇರುವುದು ರಾಜ್ಯಭಾರ ಮಾಡತಕ್ಕವರು ಕೈ ಹಾಕುವುದಕ್ಕೆ ಹೋಗಿರುವುದರ ದೆಸೆಯಿಂದ. ಇನ್ನೇನು 1955ನೇ ಇಸವಿಯಲ್ಲಿ ಸ್ವಲ್ಪ ದಿವಸ ಡಿ ಎಸ್ ಪಿ ಆಗಿದ್ದವರು ಐ. ಜಿ. ಆಗಿರುವುದಕ್ಕೆ ಕಾರಣ ಏನು ಬಂತು?

ಅಧ್ಯಕ್ಷರು:- ಅವೆಲ್ಲ ಈಗ ಸಂಬಂಧವಿಲ್ಲ. ಹೊಸ ಆಡಳಿತದ ಬಗ್ಗೆ ಏನಾದರೂ ಇದ್ದರೆ ಹೇಳಿ.

ಶ್ರೀ ಕೆ. ಕೆಂಚಪ್ಪ:- ಈಗಿನ ಆಡಳಿತ ವಿಚಾರಕ್ಕೆ ಎರಡು ನಿಮಿಷ ಬರುತ್ತೇನೆ. ಕೆಲವರು ಅಧಿಕಾರಕ್ಕೆ ಬರತಕ್ಕ ಸಂದರ್ಭ ಇದ್ದರೂ ಸಹ ಅವರನ್ನು ಹಿಂದಕ್ಕೆ ತಳ್ಳಿ ಬೇರೆಯವರನ್ನು ನಾಮಕಾವಸ್ಥೆಗೆ ತೆಗೆದುಕೊಂಡು ಬಂದಿರುವುದರ ಮೂಲಕ ಅವರಿಗೆ ಚಾನ್ಸ್ ತಪ್ಪಿಸಿ ಬಿಟ್ಟಿದ್ದಾರೆ. ಈಗ ನಮ್ಮ ಮೈಸೂರು ಸಂಸ್ಥಾನದ ಪೋಲೀಸ್ ಖಾತೆಯಲ್ಲಿ ಬೇಕಾದಷ್ಟು ಜನ ಸೀನಿಯಾರಿಟಿ ಲೀಸ್ಟಿನಲ್ಲಿದ್ದರೂ ಸಹ ಅಥವಾ ಇಂಡಿಯನ್ ಅಡ್ಮಿನಿಸ್ಟ್ರೇಟಿವ್ ಸರ್ವೀಸ್‌ನಲ್ಲಿ ಬೇಕಾದಷ್ಟು ಜನ ಇದ್ದರೂ ಸಹ ಅವರನ್ನು ಬಿಟ್ಟು

1956 ನವೆಂಬರ್ ತಿಂಗಳಲ್ಲಿ ಆಂಧ್ರದಲ್ಲಿ ರಿಟೈರ್ ಆಗಿರತಕ್ಕಂಥವರನ್ನು ಈಗ ಇಲ್ಲಿಗೆ ಐ.ಜಿ. ಆಗಿ ತರಲು ಕಾರಣವೇನು?

**Mr. Speaker:-** He was in service in Hyderabad?

ಶ್ರೀ ಕೆ. ಕೆಂಚಪ್ಪ:- ಹಾಗಿದ್ದರೂ ಅವರು ರಿಟೈರ್ ಆದ ಮೇಲೂ ಮತ್ತೆ ಇಲ್ಲಿ ಅವರನ್ನು ಐ.ಜಿ.ಪಿ. ಆಗಿ ನೇಮಕ ಮಾಡುವುದಕ್ಕೆ ಕಾರಣವೇನು? ಇದರಿಂದ ಇಲ್ಲಿ ಮೈಸೂರು ಸಂಸ್ಥಾನದಲ್ಲಿ ಕೆಲಸ ಮಾಡುತ್ತಿರುವವರಿಗೆ ಎಷ್ಟೋ ಅಸಮಾಧಾನ ಬಂದಿತು ಕರ್ನಾಟಕದಲ್ಲಿ ಸೇವೆಸಲ್ಲಿಸಿರತಕ್ಕ ದಕ್ಷರಿರುವಾಗ ಹೀಗೇಕೆ ಮಾಡಬೇಕಾಗಿತ್ತು?

ಅಧ್ಯಕ್ಷರು:- ಇವರಿಗೇಕೆ ಎಕ್ಸಟೆನ್‌ಷನ್ ಕೊಟ್ಟಿರಿ ಎಂದು ಕೇಳಿದರೆ ನನ್ನ ಅಭ್ಯಂತರವಿಲ್ಲ. ಹಳೆಯ ಮೈಸೂರಿನವರಾಗಲಿ ಹೊಸ ಮೈಸೂರಿನವರಾಗಲಿ ಎಂದರೆ ಇವರು ಮೈಸೂರಿನವರಲ್ಲವೆ?

ಶ್ರೀ ಕೆ. ಕೆ.ಂಚಪ್ಪ:- ಇವರು ಮೈಸೂರಿನವರಾಗುತ್ತಾರೆ. ಆದರೆ ನಮ್ಮ ಜನರಲ್ಲಿ ಅಧಿಕಾರದಲ್ಲಿದ್ದವರನ್ನೇ ಏಕೆ ನೇಮಕ ಮಾಡಬಾರದಾಗಿತ್ತು? ಇವರಿಗೆ ಎಕ್ಸಟೆನ್‌ಷನ್ ಕೊಟ್ಟು ಏಕೆ ಮಾಡಿದರು?

ಇದನ್ನೆಲ್ಲ ನೋಡಿದರೆ ಇದು Democracy ಅಲ್ಲ, ಇದರ ಹೆಸರಿಲ್ಲಿ Fascist Bureacucracy or Dictatorship ನಡೆಯುತ್ತಿದೆ. ಎಂಬುದು ವ್ಯಕ್ತವಾಗುತ್ತದೆ. ತಮ್ಮ ಮೂಗಿನ ನೇರಕ್ಕೆ ಕೆಲಸ ಮಾಡಿಕೊಳ್ಳುವುದಕ್ಕೆ ವ್ಯವಸ್ಥೆ ಮಾಡುವ ದೃಷ್ಟಿಯಿಂದ ಮಾಡುತ್ತಿದ್ದಾರೆ. ಇದು ದೊಡ್ಡ ಮರವಾಗಿ ಬೆಳೆದು ಹೋಗಿದೆ. ಈ ಹೊತ್ತಿನ ದಿವಸ ಆಡಳಿತದಲ್ಲಿ ಬಿಗಿ ತಪ್ಪುವುದಕ್ಕೆ ಇದೇ ಕಾರಣ ಬಿಕ್ಕಟ್ಟಿನಿಂದ ಆಡಳಿತ ನಡೆಸಿದ್ದರೆ ಈ ರೀತಿ ಆಗಿತ್ತಿರಲಿಲ್ಲ.

**Mr Speaker:-**The Hon'ble member started at 6-22. as The Hon'ble member happens to be the The hon'ble member happens to be the leader of the opposition , I have to be lenient . but 10 or 15 minutes more would be too much . Please finish in five minutes.

ಶ್ರೀ ಕೆ. ಕೆಂಚಪ್ಪ:- ಈ ದೃಷ್ಟಿಯಿಂದ ಆಲೋಚನೆ ಮಾಡಿದರೆ ಮೈಸೂರ್ ಪೋಲೀಸ್ ಇಲಾಖೆಯಲ್ಲಿ ಅವ್ಯವಸ್ಥೆಗೆ ಮುಖ್ಯ ಕಾರಣವೆಂದರೆ, ಅಧಿಕಾರಿಗಳನ್ನು ನೇಮಕ ಮಾಡುವುದರಲ್ಲಿ ಸರ್ಕಾರ ಅನುಸರಿಸಿಕೊಂಡು ಬರತಕ್ಕ ವಿಧಾನ ಎಂದು ಖಂಡಿತವಾಗಿ ಹೇಳಬೇಕಾಗಿ ಇನ್ನು ಜೈಲುಗಳ ವಿಚಾರದಲ್ಲಿ ಎರಡು ಮಾತು ಆಡಿ ಮುಗಿಸುತ್ತೇನೆ. ಜೈಲುಗಳ ವ್ಯವಸ್ಥೆಯ ವಿಚಾರದಲ್ಲಿ ಒಂದೆರಡು ಅಂಶಗಳನ್ನು ಒತ್ತಿ ಹೇಳುತ್ತೇನೆ. ನಾವೆಲ್ಲರೂ ಹಿಂದೆ ಒಂದಲ್ಲ ಒಂದು ರೀತಿಯಲ್ಲಿ ಜೈಲಿಗೆ ಹೋಗಿದ್ದವರೇ ಆಗಿದ್ದೇವೆ. ಅದರಲ್ಲಿಯೂ not once or twice a number of times. ನಾನು ಮಾನ್ಯ ನಿಜಲಿಂಗಪ್ಪನವರು ಪದೇ ಪದೇ ಜೈಲಿಗೆ ಹೋದಾಗ ಜೈಲಿನಲ್ಲಿ ಮಾತನಾಡುತ್ತಿದ್ದೆವು

ಜೈಲಿನಲ್ಲಿ ವ್ಯವಸ್ಥೆಗೆ ಯಾರೇ ಜವಾಬ್ದಾರರಾಗಲಿ, ಅದು ಯಾರ ಕೈಯಲ್ಲೆ ಇರಲಿ, ನಾವು ಕೂಡಲೇ ರಾಜಕೀಯ ಖೈದಿಗಳ ವಿಚಾರದಲ್ಲಿ ಸರಿಯಾದ ವ್ಯವಸ್ಥೆ ಮಾಡುವ ಪ್ರಯತ್ನ ಮಾಡಬೇಕು, ಇದು ಪ್ರಜೆಗಳ ಹಕ್ಕು ಎಂದುಕೊಳ್ಳುತ್ತೇವೆ. ಆದರೆ ಈ ಹೊತ್ತಿನ ಸ್ಥಿತಿಯನ್ನು ನೋಡಿದರೆ ನನಗೆ ವ್ಯಸನವಾಗುತ್ತದೆ. ಇದುವರೆಗೂ ರಾಜಕೀಯ ಖೈದಿಗಳ ವಿಚಾರದಲ್ಲಿ ಎಳ್ಳಷ್ಟೂ ಅನುಕೂಲವಾಗಿಲ್ಲ. ಈ ಹೊತ್ತು ಹಿಂದಿದ್ದಂತೆಯೇ ಅನುಷ್ಠಾನದಲ್ಲಿದೆ. ನಿಜವಾಗಿಯು ಅವರು ಹಿಂದಿದ್ದ ಒಳ್ಳೆಯ ಭಾವನೆಯನ್ನೇ ಈಗಲೂ ಇಟ್ಟುಕೊಂಡು ಅದನ್ನು ಕಾರ್ಯಗತ ಮಾಡಬೇಕೆಂದು ಉದ್ದೇಶದಿಂದ ಕೆಲಸ ನಡೆಸಿದ್ದಾರೆಯೇ? ನಿಜವಾಗಿ ಅದರಂತೆ ನಡೆಸಬೇಕೆಂದು ಈಗಲೂ ಅವರ ಮನಸ್ಸಿನಲ್ಲಿದೆಯೇ ಎಂಬ ಬಗ್ಗೆ ಅವರು ಆತ್ಮಶೋಧನೆ ಮಾಡಿಕೊಳ್ಳಬೇಕಾಗಿದೆ. ಜೈಲನ್ನು ಸ್ವಾವಲಂಬನೆಯಿಂದ ನಡೆಸಿಕೊಂಡು ಬರಬೇಕಾದುದು ಅವಶ್ಯಕ. ಹೀಗೆ ನೆಡೆಸುವುದು ಕಷ್ಟವೇನೂ ಅಲ್ಲ. ಜೈಲು ಸುಧಾರಣೆ, ಲಾಕಪ್ ಸುಧಾರಣೆ, ಸಂಬಂಧವಾಗಿ ಈ ಬಡ್ಜಟ್ಟಿನಲ್ಲಿ ಎಷ್ಟು ಹಣ ಒದಗಿಸಿದರೂ ಕಂಡುಬರುತ್ತಿಲ್ಲ. ಖೈದಿಗಳು ವಾಸ ಮಾಡುವ ಮನೆ ಸರಿಯಾಗಿದ್ದು ಅಲ್ಲಿ ನೈರ್ಮಲ್ಯವಿರಬೇಕು. ಒಂದು ಸಾರಿ ಜೈಲಿಗೆ ಹೋಗಿ ಹೊರಗೆ ಬಂದವನು ಮತ್ತೆ ತಪ್ಪು ಮಾಡಬಾರದೆಂಬ ಭಾವನೆ ಅವನಲ್ಲಿ ಬರುವಂತೆ ಮಾಡಬೇಕು. ಈ ಯೋಚನೆಯನ್ನು ಸರ್ಕಾರ ಮಾಡಬೇಕು. This is also connected with social patholagy. If a person becomes a thief either his parents should be accused.

ಇದರಲ್ಲಿ ಒಂದು ವ್ಯತ್ಯಾಸವಿದೆ ಜಪಾನ್ ದೇಶಗಳಲ್ಲಿ ಮನೆಗಳಿಗೆ ಬೀಗಹಾಕುವುದಿಲ್ಲ. ಆ ರೀತಿ ರಾಜ್ಯಭಾರ ಅಲ್ಲಿ ನೆಡೆದುಕೊಂಡು ಬಂದಿದೆ. ಆ ರೀತಿಯ ಭಾವನೆಯನ್ನು ಅಲ್ಲಿಟ್ಟುಕೊಂಡುದ್ದಾರೆ. ಆದರೆ ಆ ನೀತಿಯನ್ನು ಇಲ್ಲಿ ಅನುಸರಿಸಿಲ್ಲ. 7,80,000 ರೂಪಾಯಿ ಖರ್ಚು 37,35,000 ರೂಪಾಯಿ ಖರ್ಚು 2,95,500 ರೂಪಾಯಿ ಖರ್ಚಾಗಿದೆ. ಆದರೆ ವ್ಯವಸ್ಥೆ ಸರಿಯಾಗಿಲ್ಲ. ಈ ಹಣವನ್ನು ಯಾವರಿತಿ ಹಂಚಿದ್ದಾರೆಂದು ನೋಡಿದರೆ ಜೈಲುಗಳಿಗೆ 13,20,700 ರೂಪಾಯಿಗಳನ್ನೊದಗಿಸಿದ್ದಾರೆ. ಸಣ್ಣ ಜೈಲುಗಳಿಗಷ್ಟೆಂಬುದು ಸ್ಪಷ್ಟವಾಗಿಲ್ಲ. 13,20,700 ರೂಪಾಯಿ ಎಲ್ಲಾ ಜೈಲುಗಳ ಮತ್ತು ಲಾಕಪ್‌ಗಳ ಸಿಬ್ಬಂದಿಗಾಗಿ, ಎಂದರೆ ಒಟ್ಟು ಖರ್ಚಿನ ಮೂರನೆಯೊಂದು ಭಾಗ ಸಿಬ್ಬಂದಿಯ ಖರ್ಚು. ಬಾಕಿ ಖರ್ಚು ನೋಡಿದರೆ ನಿಜವಾಗಿ ಉಪಯುಕ್ತವಾದ. ಖರ್ಚು ಮಾಡಿರುವುದು Sanitation 1,300 ರೂಪಾಯಿ, Miscellaneous services and supplies 13,000 other charges 4,000 ಉಪ ಜೈಲುಗಳಲ್ಲಿ ಯಾವ ರೀತಿ ಖರ್ಚುಮಾಡುತ್ತಾರೆಂದು ತಿಳಿಸಿಲ್ಲ. Sanitation charges ಎಂದರೆ works and repairs ಎಂದು ಹೇಳಿದ್ದಾರೆ. ಚರಂಡಿಗಳನ್ನು ಮಾಡುವುದಕ್ಕೆ ಖರ್ಚು ಅಥವಾ ಯಾವುದಕ್ಕೆ ಖರ್ಚು ಮಾಡುತ್ತಾರೆಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ ಇಲ್ಲಿ:-

| | |
|---|---|
| other allowances | 33,000 |
| contingency | 3,56,900 |
| Sanitation | 60,000 |
| Miscellaneous services and supplies | 97,000 |
| other charges | 21,000 |
| **Total** | **5,67,900** |

ಇಷ್ಟು ಹಣವನ್ನು ಯಾವ ಬಾಬುಗಳಿಗೆ ಖರ್ಚು ಮಾಡುತ್ತಾರೆಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಇದರ ಪೈಕಿ ನ್ಯಾಯವಾದ ರೀತಿಯಲ್ಲಿ ಖೈದಿಯಲ್ಲಿ ಎಷ್ಟು ಖರ್ಚಾಗುತ್ತದೆಂದು ನಾನು ಕೇಳುತ್ತೇನೆ. ಕಾಮಗಾರಿ ಮತ್ತು ರಿಪೇರಿಗಳಿಗೆ 33 ಸಾವಿರ ರೂಪಾಯಿಗಳನ್ನು ಮೀಸಲಾಗಿ ಇಟ್ಟಿದ್ದಾರೆ. ಎಷ್ಟು ಸರಿಯಾಗಿ ಕಾಣುವುದು. ಖೈದಿಗಳ ಉಪಚಾರಕ್ಕೆ, ಸುಧಾರಣೆಗೆ ಯಾವ ರೀತಿ, ಖರ್ಚು ಮಾಡುತ್ತಾರೆಂಬುವುದು ಇಲ್ಲ. ಮೊದಲನೆಯ ಮತ್ತು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಯಾವ ರೀತಿ ಮತ್ತು ಎಷ್ಟು ಹಣವನ್ನೊದಗಿಸಿದ್ದಾರೆ ಕೇಳಿದರೆ, ಏನು ಇಲ್ಲ. A big blank. ಅಂದ ಮೇಲೆ ಜೈಲು ಸುಧಾರಣೆಗಳನ್ನು ಎಷ್ಟರ ಮಟ್ಟಿಗೆ ಮಾಡುತ್ತಿದ್ದೇವೆಂದು ಗೊತ್ತಾಗುತ್ತದೆ. ಕೈದಿಗಳು ಮಾನವರು ಅವರನ್ನು ಮನುಷ್ಯರಂತೆ ನೋಡುವ ರೀತಿಯಲ್ಲಿ ನೋಡಬೇಕು ಎಂಬ ಮನೋಭಾವವನ್ನಿಟ್ಟುಕೊಂಡಿಲ್ಲವೆಂಬುದು ವ್ಯಕ್ತವಾಗುತ್ತದೆ. ಒಂದು ದಿವಸಜೈಲಿನಲ್ಲಿ ಶ್ರೀ ನಿಜಲಿಂಗಪ್ಪನವರು ಒಂದುಕಡೆ, ನಾನು ಒಂದುಕಡೆ ಇದ್ದಾಗ ನಮ್ಮ ತಲೆಯೊಡೆದು ಹಾಕುತ್ತಿದ್ದರು, ಏನೋ ದೇವರ ದಯದಿಂದ ಅದು ತಪ್ಪಿತು. ಒಂದು ಜೈಲಿನಲ್ಲಿ 60 ಜನರಿರುವಾಗ ಒಬ್ಬರೊಂದಿಗೆ ಇನ್ನೊಬ್ಬರು ಮಾತನಾಡಿದರೂ ಅದು ಅಪರಾಧ.ಹೀಗೆ ಹಿಂದಿರುವ ಏರ್ಪಾಡುಗಳನ್ನೇ ಈಗಲೂ ಇಟ್ಟುಕೊಂಡು ನಾವು ಸುಧಾರಣೆ ಮಾಡುತ್ತಿದ್ದೇವೆ ಎಂದು ಹೇಳುತ್ತಾರೆ. ಸುಧಾರಣೆ ಮಾಡಬೇಕೆಂಬ ಇಷ್ಟ ಇವರಿಗಿಲ್ಲ. ಮಕ್ಕಿಕಾಮಕ್ಕಿ ಹಿಂದಿನಿಂದ ಯಾವ ರೀತಿ ಇದೆಯೋ ಅದೇ ರೀತಿ ಮುಂದುವರೆಸಿಕೊಂಡು ಹೋಗಬೇಕೆಂಬ ಲಾಯರ್ ಆಗಿರುವುದರಿಂದ ಅವರಿಗೆ ಇದು ಗೊತ್ತಿದೆ. ಈ ಮಸೂದೆಯು ಸೆಲೆಕ್ಟ ಕಮಿಟಿಗೆ ಹೋದಾಗ ಕೂಲಂಕಷವಾಗಿ ಚರ್ಚೆ ಮಾಡಬಹುದು,. ಆದುದರಿಂದ ಈ ಮಸೂದೆಯ ಚರ್ಚೆಗೆ ಒಂದು ದಿವಸ ಕೊಟ್ಟಿದ್ದಾರೆ.

ಸ್ಟಾಂಪ್ ಬಿಲ್ಲು ಚರ್ಚೆಯಾಗಿಲ್ಲ. ಸೂಕ್ತ ಬದಲಾವಣೆ ಮಾಡುವುದಕ್ಕೆ ಒಂದು ದಿವಸ ಚರ್ಚೆಗೆ ಕೊಟ್ಟಿದೆ. ಸ್ಯಾಲರಿ ಬಿಲ್ಲಿನಲ್ಲಿ ವಿಶೇಷವೇನೂ ಇರದೆ ಭತ್ಯ ಜಾಸ್ತಿ ಮಾಡುವುದು ಅಷ್ಟೆ ಇದೆ. ಈ ಮಸೂದೆಯನ್ನು ಅರ್ಧ ಗಂಟೆಯೊಳಗೆ ಮುಗಿಸಬಹುದು. The will not take more than half an hour ro three - fourths of an hour. ಬೆಂಗಳೂರು ಮುನಿಸಿಯಲ್ ಕಾಪೂರಷನ್ ಬಿಲ್ಲಿನಲ್ಲಿ ಒಂದೇ ವಿಷಯ ಇದೆ. ಕಾರ್ಪೋರೇಷನ್ನಿನಲ್ಲಿ ಐ.ಎ.ಎಸ್. ಆಫೀಸರನ್ನು ನೇಮಿಸುವುದಾದಲ್ಲಿ ಅವರಿಗೆ ದೊರೆಯುತ್ತಿರುವ ಸಂಬಳವನ್ನು ಕೊಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡುವುದಷ್ಟೇ

ಆಗಿದೆ. ಇದೇನು ಅಷ್ಟು ಚರ್ಚಾಸ್ಪದ ವಿಷಯವಲ್ಲ. ಮೋಟಾರ್ ವೇಹಿಕಲ್ಸ ಬಿಲ್ಲಿಗೆ ಒಂದು ದಿವಸ ಒಂದೂವರೆ ಗಂಟೆ ಮತ್ತು ಇನೊಂದು ದಿವಸ ಎರಡು ಗಂಟೆ ಕೊಟ್ಟಿದ್ದಾರೆ ಇದರ ಬಗ್ಗೆ ಸೆಲೆಕ್ಟ ಕಮಿಟಿಯ ರಿಪೋರ್ಟ್ ಇದೆ.

ಸೆಲೆಕ್ಟ್ ಕಮಿಟಿಯಲ್ಲಿ ಚರ್ಚೆ ಮಾಡಿ ಬದಲಾವಣೆ ಮಾಡಲಾಗಿದೆ. ಇನ್ನು ಇರಿಗೇಷನ್ನು ಬಿಲ್ಲಿಗಾಗಿ ಎರಡು ದಿವಸ ಕೊಡಲಾಗಿದೆ. ಶ್ರೀ ಕೆಂಚಪ್ಪನವರು ಜಾಸ್ತಿ ಕಾಲ ಕೊಡಿ ಎಂದು ಕೇಳಿದ್ದರಿಂದ ನಾವು ಅದಕ್ಕೆ ಒಪ್ಪಕೊಂಡಿದ್ದೇವೆ; ಈ ಸಭೆಯ ಸದಸ್ಯರ ಅಧಿಕಾರವನ್ನು ಮೊಟಕುಮಾಡಬೇಕೆಂದಿಲ್ಲ. ಈ ಸಭೆಯಲ್ಲಿ ernest ಆಗಿ ಕೆಲಸ ಮಾಡಬೇಕೆಂದು ಹೀಗೆ ಮಾಡಿದ್ದೇವೆ. ಎಲ್ಲಾ ಮಸೂದೆಗಳಿಗೆ ಸಾಕಷ್ಟು ಅವಕಾಶಕೊಡಲಾಗಿದೆ. ಆದುದರಿಂದ Business Advisory Committee ಯ Report ನ್ನು ಒಪ್ಪಿಕೊಳ್ಳಬೇಕು ಎಂದು ಕೇಳಿಕೊಳ್ಳುತ್ತೇನೆ.

* * * * *

## ನೀರಾವರಿ

ಶ್ರೀ ಕೆ. ಕೆಂಚಪ್ಪ:- ಮಾನ್ಯ ಅಧ್ಯಕ್ಷರೇ, ಈಗ ನಾನು ಮೈಸೂರು ಸಂಸ್ಥಾನಕ್ಕೆ ಅನ್ವಯಿಸುವಂತೆ ಮೈಸೂರು ಇರಿಗೇಷನ್ ಆಪ್ ಬೆಟರ್‌ಮೆಂಟ್ ಕಾಂಟ್ರಿಬ್ಯೂಷನ್ ತೆಗೆದುಕೊಳ್ಳತಕ್ಕಂಥ ನೀರಿನ ತೆರಿಗೆ ವಿಚಾರವಾಗಿಯೂ ತಂದಿರತಕ್ಕ ಮಸೂದೆಯ ವಿಚಾರವಾಗಿ ಮತ್ತು ಅದರಲ್ಲಿ ಅಡಕವಾಗಿರುವ ಅನೇಕ ವಿಷಯಗಳ ವಿಚಾರವಾಗಿಯೂ ನಾನು ವಿರೋಧಿಸತಕ್ಕವನಾಗಿದ್ದೇನೆ. ನನಗೆ ತಿಳಿದಮಟ್ಟಿಗೆ ಮೈಸೂರು ಸಂಸ್ಥಾನದಲ್ಲಿ ನೀರಾವರಿ ಯೋಜನೆಗಳನ್ನು ತೆಗೆದುಕೊಂಡು ಜಮೀನಿಗೆ ನೀರನ್ನು ಕೊಡುವ ಪದ್ಧತಿ 1898 ನೆಯ ಇಸವಿಯಿಂದಲೂ ಇದೆ. ಅಲ್ಲಿಂದೀಚೆಗೆ ನೀರಿನ ದರ ನಾನಾ ಥರಾ ಇದೆ ತರೀ ದರ ಇದೆ. ಬರಿ ತರೀ ಅಲ್ಲದೆ ಹಂಗಾಮಿ ವಾಟರ್ ರೇಟ್ ಅಥವಾ ನೀರಿನದರ ಇದೆ ಮತ್ತು ಇನ್ನು ಅನೇಕ ವಿಚಾರಗಳಿವೆ. ಅದನ್ನು ಮುಂದೆ ಆಲೋಚನೆ ಮಾಡುವವನಿದ್ದೇನೆ. ಇದರಲ್ಲಿ ಒಂದು ತತ್ವ ಇದೆ. ಆ ತತ್ವವನ್ನು ಇಲ್ಲಿ ಸರಿಯಾಗಿ ಪ್ರತಿಪಾದಿಸಿಲ್ಲ. they are approaching the problem from a wrong direction. ಎಂದರೆ ಅದನ್ನು ಯಾವ ರೀತಿ ಆಲೋಚನೆ ಮಾಡಬೇಕಿತ್ತೋ ಯಾವ ದೃಷ್ಟಿಯಿಂದ ಅದನ್ನು ನೋಡಬೇಕಿತ್ತೋ ಆ ದೃಷ್ಟಿಯಿಂದ ಅದನ್ನು ನೋಡುತ್ತಾ ಇಲ್ಲ; ಮತ್ತು ಯಾರಿಗೆ ಸಂಬಂಧ ಪಟ್ಟುದ್ದು ಎನ್ನುವ ವಿಚಾರ ಸಹ ಇದರಲ್ಲಿ ತುಂಬಾ ಭಿನ್ನವಾಗಿದೆ ಎಂದು ಹೇಳುವುದಕ್ಕೆ ನಾನು ನಿಂತಿದ್ದೇನೆ. ಮುಖ್ಯವಾಗಿ ಸ್ಟೇಟ್‌ಮೆಂಟ್ಸ್ ಆಫ್ ಆಬ್ಜೆಕ್ಟ್ಸ್ ಮತ್ತು ರೀಜನ್ಸನಲ್ಲಿ ಹೀಗೆ ಹೇಳಿದ್ದಾರೆ.:-

"The principle of levying betterment contribution and water rates in respect of lands benefited from irrigation work is now accepted universally."

ಇದನ್ನು ನಾವು ಒಪ್ಪುವುದಕ್ಕಾಗುವುದಿಲ್ಲ. ಪ್ರಪಂಚದ ಎಲ್ಲಾ ಭಾಗದಲ್ಲೂ ಇವರು ಇಟ್ಟಿರತಕ್ಕ ತತ್ವವನ್ನು ಒಪ್ಪಿದ್ದಾರೆ ಎನ್ನುವ ವಿಚಾರವನ್ನು ನಾವು ಒಪ್ಪುವುದಕ್ಕಾಗುವುದಿಲ್ಲ. ಏಕೆಂದರೆ ನಮ್ಮ ಸಂಸ್ಥಾನದಲ್ಲಿ ಇದನ್ನು ಒಪ್ಪಿಲ್ಲ. ನಮ್ಮಲ್ಲಿ ಇರತಕ್ಕ ರೈತರ ಪದ್ಧತಿ. ಒಂದು ನೀರಾವರಿ ಯೋಜನೆ ಮಡಿ ಜಮಿನಿಗೆ ನೀರನ್ನು ಕೊಡುವುದರ ಮೂಲಕ ಮೀನಿನ ಬೆಲೆ ಹೆಚ್ಚಾಗುತ್ತದೆ. ಆದ್ದರಿಂದ ಹೆಚ್ಚಾಗಿರತಕ್ಕ ಜಮೀನಿನ ಬೆಲೆಯಲ್ಲಿ ಒಂದು ಭಾಗವನ್ನು ಸರ್ಕಾರದವರು ಪಡೆಯಬೇಕು. ಎನ್ನತಕ್ಕ ಭಾವನೆಯನ್ನು ಅದರಲ್ಲಿ ಕೊಟ್ಟಿದ್ದಾರೆ. ಅದು ಸರಿಯಲ್ಲ. ಮೈಸೂರು ಸಂಸ್ಥಾನದಲ್ಲಿ ಕೆರೆಗಳನ್ನು ಕಟ್ಟುವಾಗ ಕೆರೆಗಳನ್ನು ಎರಡು ಭಾಗವಾಗಿ ವಿಂಗಡಿಸಿದ್ದಾರೆ. ಒಂದು ಪ್ರೊಟೆಕ್ಟಿವ್. ಆ ತತ್ವವನ್ನು ಬಹಳ ದಿವಸದಿಂದ ಅನುಸರಿಸಿಕೊಂಡು ಬಂದಿದ್ದಾರೆ. ಇದಕ್ಕೆ ಒಂದೇ ಒಂದು ನಿದರ್ಶನ ಹೇಳಬೇಕಾದರೆ, Committee for revision system in Mysore ಎನ್ನುವುದರಲ್ಲಿ ಒಂದು ಅಭಿಪ್ರಾಯ ಕೊಟ್ಟಿದ್ದಾರೆ. ಅವರು ಈ ಅಭಿಪ್ರಾಯವನ್ನು ಹೀಗೆ ಬರೆದಿದ್ದಾರೆ:- "We are opinion that in future irrigation works shoud be classified into two categories , protective and productive. protective works shoud be undertaken having regard to the general benefit the country whould derive and not the return. "

ಈ ರೀತಿಯಾಗಿ ಅವರು ಅಭಿಪ್ರಾಯಪಟ್ಟಿದ್ದಾರೆ ; ಮತ್ತು ಹಿಂದೆಯೂ ಸಹ ಕೆಲಸವನ್ನು ಮಾಡುವಾಗ ಯಾವರೀತಿಯನ್ನು ಅನುಸರಿಸುತ್ತಾರೆಂಬುದನ್ನು ನೋಡಿ. ನನಗೆ ಗೊತ್ತಿರುವಂತೆ 1937ನೆಯ ಇಸವಿಯಲ್ಲಿ ಆಗಿನ ದಿವಾನರಾಗಿದ್ದ ಸರ್ ಮಿರ್ಜಾಇಸ್ಮೈಲರು ಗಾಯತ್ರಿ ಕೆರೆಯನ್ನು ಕಟ್ಟುವ ಸಂದರ್ಭದಲ್ಲಿ ಅದರಿಂದೇನು ಉತ್ಪತ್ತಿ ಬರುವುದಿಲ್ಲವೆಂದು ಹೇಳಿದಾಗ ಅಸೆಂಬ್ಲಿಯಲ್ಲಿ ವಿಪುಲವಾದ ಚರ್ಚೆ ನಡೆಯಿತು; ಆಗ್ಗ ಈಗಿನ ಮಂತ್ರಿಗಳಾಗಿರುವ ಶ್ರೀಮಾನ್ ವಿರಣ್ಣ ಗೌಡರೂ ಸಭೆಯುಲ್ಲಿದ್ದರು; ಮಿರ್ಜಾಇಸ್ಮೈಲರು ಕೊನೆಯಲ್ಲಿ ಕೊಡುವಾಗ, ಅತೀ ಕನಿಷ್ಠದೇಶದಲ್ಲಿರುವ ಜಾಗದಲ್ಲಿ ತಾವು ಕೆರೆಯನ್ನು ಕೊಡುತ್ತಿರುವುದರಿಂದ ತಾವು ಉತ್ಪತ್ತಿಯನ್ನು ನಿರೀಕ್ಷಣೆ ಮಾಡುವುದಿಲ್ಲ. ಕೆರೆಯನ್ನು ಕಟ್ಟಿಸಿ ಕೊಡುತ್ತೇವೆಂದು ಹೇಳಿದರು. ಅದರಂತೆ ಇಂದು ಈ ಕೆರೆ ಕಟ್ಟಲಾಗುತ್ತಿದೆ.

ಅಂದ ಮೇಲೆ ತಮಗೆ ಗೊತ್ತಿದೆ. ಅಂಥ ಸ್ಥಳಗಳಲ್ಲಿ ಈ ರೀತಿಗಳಲ್ಲಿ ಕೆರೆಗಳನ್ನು ಕೊಟ್ಟರೂ ಜಮೀನಿನ ಬೆಲೆ ಯಾವ ರೀತಿ ಹೆಚ್ಚಾಗುತ್ತದೆ. ಅಲ್ಲಿ ಹೇಗೆ ತೆಗೆದುಕೊಳ್ಳುತ್ತೀರಿ? ಈ ಪ್ರಶ್ನೆಗೂ ತಾವು ಉತ್ತರ ಕೊಡಬೇಕಾಗುತ್ತದೆ. ಇನ್ನೊಂದು ಪ್ರಶ್ನೆ ಕೇಳುತ್ತೇನೆ. ಜಮೀನಿಗೆ ನೀರನ್ನು ಕೊಡುವುದರ ಮೂಲಕ ಜಮೀನಿನ ಬೆಲೆ ಹೇಗೆ ಹೆಚ್ಚುತ್ತದೆ? ಸರ್ಕ

ಸೆಟಲ್‌ಮೆಂಟಿನವರು ಜಮೀನಿನ ಬೆಲೆ ಹೇಗೆ ಹೆಚ್ಚುತ್ತದೆಂಬುದನ್ನು ಗೊತ್ತು ಮಾಡಿದ್ದಾರೆ. ಜಮೀನಿನ ಬೆಲೆ ರೈಲ್ವೆ ಸ್ಟೇಷನ್ನಿಗೆ ಎಷ್ಟು ದೂರದಲ್ಲಿದೆ. ಎಷ್ಟು ಉತ್ಪತ್ತಿ ಆ ಜಮೀನು ಕೊಡಬಲ್ಲದು, ಅದಕ್ಕೆ ಹೋಗಲು ರಸ್ತೆಗಳಿವೆಯೇ ಇಲ್ಲವೇ, ಅದರ ಮಣ್ಣು ಯಾವ Classification ನಲ್ಲಿ ಬರುತ್ತದೆ. ವಗೈರೆ ವಗೈರೆ ಮೇಲೆ ನಿಗದಿಯಾಗುತ್ತದೆಂದು ಹೇಳಿದ್ದಾರೆ. ಖುಷ್ಕಿ ಜಮೀನಿಗೆ ಅಲ್ಲ. ತರಿ ಜಮೀನಿಗೂ ಇದು ಅನ್ವಯಿಸುತ್ತದೆಂದು ಸರ್ವೆಮ್ಯಾನುಯಲ್ಲಿನಲ್ಲಿ ಕೂಡ ಉಲ್ಲೇಖಿತವಾಗಿದೆ. ಈ ದೃಷ್ಟಿಯಿಂದ ನಾನು ಹೆಳುವುದೇನೆಂದರೆ, ಜಮೀನಿಗೆ ನೀರು ಕೊಟ್ಟಿದ್ದರಿಂದ ಜಮಿನಿನ ಬೆಲೆ (Lot the yield) ಜಾಸ್ತಿಯಾಗತ್ತದೆಂದು ಯಾರೂ ಹೇಳಿಲ್ಲ.

I shall come to the point of water rate and think of the question of yield and increased yield. ಈಗ ತಾವು ಜಮೀನಿನ ಬೆಲೆ ಜಾಸ್ತಿಯಾಗುತ್ತದೆಂದು ಹೇಳಿ ಕಾಂಟ್ರಿಬ್ಯೂಷನ್ ಕೊಡಬೇಕಾಗಿದೆಯೆಂದು ನಿಮ್ಮ ಸೆಕ್ಷನ್ನಿನಿಂದ ವಿಶದವಾಗುತ್ತದೆ. ಜಮೀನಿನ ಬೆಲೆ ಹೆಚ್ಚುವುದೇನಿದ್ದರೂ ಜಮೀನಿನಲ್ಲಿ ಉತ್ಪತ್ತಿಯಾಗುವ ಮಾಲುಗಳ ಮೇಲೆ ಅವಲಂಬಿಸುತ್ತದೆ. ನೀರನ್ನು ಕೊಡುವುದರಿಂದ ಜಮೀನಿನ ಬೆಲೆ ಇನ್ನೂ ಕಡಿಮೆಯಾಗುತ್ತದೆನ್ನಬಹುದು. ಜಮೀನಿನ ಸಾರವೆಲ್ಲ ಜಾಗ್ರತೆ ಹೋಗಿಬಿಡುತ್ತದೆ. ರೈತನು ಅಂಥ ಜಮೀನಿಂದ ಹೆಚ್ಚಿಗೆ ಬೆಲೆ ಬರುವಂತೆ ಮಾಡಬೇಕೆಂದರೆ ದೊಡ್ಡಪ್ರಮಾಣದಲ್ಲಿ ಗೊಬ್ಬರ ಗೋಡುಗಳನ್ನು ಹಾಕಿ ಜಮೀನನ್ನು ಫಲವತ್ತಾಗಿ ಮಾಡಬೇಕಾಗುತ್ತದೆ. This is a fundamental principle in re-classification of soil survey.

ಶ್ರೀ ಎಚ್.ಕೆ. ವೀರಣ್ಣಗೌಡ:- ಅಂದರೆ, ನೀರು ಕೊಟ್ಟ ಜಮೀನಿಗಳಿಗೆ ಕಡಿಮೆ ಕಂದಾಯ ಹಾಕಬೇಕೆ? ಅವರ ಅಭಿಪ್ರಾಯವನ್ನು ನಾನು ಸರಿಯಾಗಿ ಅರ್ಥಮಾಡಿಕೊಂಡರೆ ನನಗೆ ಉತ್ತರ ಕೊಡುವುದಕ್ಕೆ ಸಾಧ್ಯವಾಗುತ್ತದೆ. ಹಾಗಿಲ್ಲದೆ ಅವರು ಹೇಳಿದ್ದನ್ನೆ ಸರಿಯಾಗಿ ತಿಳಿದುಕೊಳ್ಳದೆ ಹೊದರೆ ನಾನು ಏನು ಮಾಡಲೂ ಸಾಧ್ಯವಾಗುವುದಿಲ್ಲ.

ಶ್ರೀ ಕೆ. ಕೆಂಚಪ್ಪ:- ನಾನು ತಿಳಿಗನ್ನಡದಲ್ಲಿ ಸಾಧ್ಯವಾದ ಮಟ್ಟಿಗೆ ಎಲ್ಲರಿಗೂ ತಿಳಿಯುವಹಾಗೆ ಹೇಳುತ್ತಿದ್ದೇನೆ. ನಮ್ಮ ರೆವಿನ್ಯೂ ಮಂತ್ರಿಗಳು ಮಾತನಾಡುವಾಗ "The land problem is a very complex problem" ಎಂದು ಹೇಳಿದ್ದು ನಿಜ. ಇದು ಸರ್ವೇ ಸಾಮಾನ್ಯವಾಗಿ ಎಲ್ಲರಿಗೂ ಕಾಣುವಷ್ಟು ಸುಲಭವಾದ ಪ್ರಶ್ನೆಯಲ್ಲ. ಅದನ್ನು ನಾವು ಕಾನೂನು ರೀತಿಯಲ್ಲಿ ತೀವ್ರವಾಗಿ ಅಳವಡಿಸಿ ನೋಡದಹೊರತು ಸುಮ್ಮನೆ ಅರ್ಥವಾಗುವುದಿಲ್ಲ. ಇದು ಗೊತ್ತಿಲ್ಲದೆ ನಾನು ಹೇಳುವುದು ಗೊತ್ತಾಗುವುದಿಲ್ಲವೆಂದರೆ ಅದಕ್ಕೆ ನಾನು ಜವಾಬ್ದಾರನಲ್ಲ. ನಾನು ಸಾಧ್ಯವಾದ ಮಟ್ಟಿಗೆ ವಿಶದವಾಗಿ ಹೇಳುತ್ತೇನೆ.

ಶ್ರೀ ಎಚ್.ಕೆ. ವೀರಣ್ಣ ಗೌಡ:- ನೀರು ಕೊಡುವುದರಿಮದ ಸಾರ ಕಡಿಮೆ ಆಗುತ್ತದೆಂದು ಹೇಳಿದ ಮೇಲೆ, ಹಾಕಿರುವ ಕಂದಾಯವನ್ನು ಕಡಿಮೆ ಮಾಡಬೇಕೇ

ಅಥವಾ ಸರ್ಕಾರದವರೇ ರೈತರಿಗೆ ಕಾಂಟ್ರಿಬ್ಯೂಷನ್ ಏನಾದರೂ ಕೊಡಬೇಕಾಗುತ್ತದೆಯೇ ಎಂಬುದಕ್ಕೆ ಉತ್ತರ ಕೊಡಬೇಕೆಂದು ಕೇಳುತ್ತಿದ್ದೇನೆ.

ಶ್ರೀ ಕೆ. ಕೆಂಚಪ್ಪ:- ನೀರನ್ನು ಕೊಡುವುದರಿಂದ ಜಮೀನಿನ ಫಲವತ್ತು ಅಥವಾ ಉತ್ಪನ್ನ ಶಕ್ತಯೇನೋ ಕಡಿಮೆಯಾಗುವುದು ನಿಜ. ಆದರೆ ಇದಕ್ಕೆ ಸರ್ಕಾರದವರು ದುಡ್ಡುಕೊಡಬೇಕೆಂದು ಯಾವ ಕಾನೂನಿನಲ್ಲೂ ಇಲ್ಲ. ಅದನ್ನು ಯಾರೂ ಕೇಳುವುದಿಲ್ಲ. ಅಂತು ಜಮೀನಿನ ಸಾರ ಕಡಿಮೆಯಾಗುವುದರಿಮದ ರೈತ ಜಮೀನಿನ ಫಲವಂತಿಕೆಯನ್ನು ಹೆಚ್ಚಿಗೆ ಮಾಡುವುದಕ್ಕೆ ಪ್ರಯತ್ನಮಾಡಿ ಗೊಬ್ಬರ ಗೋಡುಗಳಿಗೆ ಹಣ ಖರ್ಚು ಮಾಡುತ್ತಿರುತ್ತಾನೆ ನೀರು ಬಿಡುವುದರಿಮದ ಜಮಿನಿನಲ್ಲಿರತಕ್ಕ ಪೈರುಗಳನ್ನು ಬೆಳೆಸತಕ್ಕ ವಸ್ತುಗಳಿಗೆ ವಿರುದ್ಧವಾದ ವಸ್ತುಗಳನ್ನು ಅಲ್ಕ ಲೈನಿಟಿಯನ್ನೂ ಡ್ರೈನೇಜ್ ಮೂಲಕ ತೆಗೆದರೂ ಆ ಪ್ರಕಾರ ಸಹಾಯ ಮಾಡಿದರೂ ಇನ್ನೊಂದು ವಿಧದಲ್ಲಿ ಹಗಲು ರಾತ್ರಿ ನೀರು ಹರಿದು ಜಮೀನಿನಲ್ಲಿರುವ ಸಾರವತ್ತಾದ ಭಾಗವು ಕೊಚ್ಚಿಹೋಗಿ ಸಾರಕಡಿಮೆಯಾಗುವ ವಿಷಯ ಇದೆ. ಶ್ರೀಮಾನ್ ವೀರಣ್ಣಗೌಡರಿಗೂ ಜಮೀನಿದೆ ಅವರಿಗೂ ಈ ವಿಷಯ ಗೊತ್ತಿರಬೇಕು. ಆದ್ದರಿಂದ ಹೀಗೆ ಕಡಿಮೆಯಾದ ಸಾರವನ್ನು ಮನುಷ್ಯ ಪ್ರಯತ್ನದಿಂದ ಸರಿಪಡಿಸದಿದ್ದರೆ ಹೆಚ್ಚಿಗೆ ಬೆಲೆ ಹೇಗೆ ಬರುತ್ತದೆ? ಎಂದು ನಾನು ಕೇಳಬಯಸುತ್ತೇನೆ. ನಿದರ್ಶನ ರೂಪವಾಗಿ ವಿಚಾರ ಹೇಳುತ್ತೇನೆ. ವಾಣಿ ವಿಲಾಸ ಸಾಗರವನ್ನು 1884 ರಲ್ಲಿ ಕಟ್ಟಿದರೂ 1916ನೆಯ ಇಸವಿಯವರೆಗೂ ಒಂದು ಕಾಸೂ ವಾಟರ್ ರೇಟು ಹಾಕಿರಲಿಲ್ಲ. 32 ವರ್ಷ ಸತತವಾಗಿ ರೈತರು ನೀರನ್ನು ಉಪಯೋಗಿಸುತ್ತಿದ್ದರು. ಅಂಥದ್ದರಲ್ಲಿ ನೀರೂದಗಿಸಿದ್ದರಿಂದ ಫಲವಂತಿಕೆ ಹೆಚ್ಚಾಯಿತೆಂದರೆ, 1933ನೆಯ ಇಸವಿಯಲ್ಲೇಕೆ ರೈತರೆಲ್ಲರು ಜಮೀನನ್ನೂ ಬೀಳುಬಿಟ್ಟರು. ಸರ್ಕಾರದ ಪಡಕ್ಕೇಕೆ ಅಷ್ಟು ಭೂಮಿಯೂ ಬಂತೆಂಬುದನ್ನು ಯೋಚನೆ ಮಾಡಿ, ಅದಕ್ಕೂ ಇದಕ್ಕೂ ಸಂಬಂಧ ಕಲ್ಪಿಸಬಾರದೇ? ಮನುಷ್ಯನ ಶಕ್ತಿಯಿಂದ ಬೆಲೆ ಜಾಸ್ತಿಯಾದರೆ, ಮನುಷ್ಯನ ಕೀರ್ತಿಗೆ ಅದು ಸಂಭಂದಿಸಿದ್ದು, ಆದ್ದರಿಂದ ಸರ್ಕಾರದ ನೀರಿನಿಂದಾಯಿತೆಂದು ಹಾಕುವುದು ಯುಕಲ್ತವಲ್ಲ.

ಇನ್ನೊಂದು ತತ್ವವನ್ನು ನಾವು ನೋಡಬೇಕು. ನೀವು ಖರ್ಚುಮಾಡುವ ಹಣವೆಷ್ಟು? ನೀವು ಶೇಕಡ ಎಷ್ಟು ಬರಬೇಕೆಂದು ನಿರೀಕ್ಷಿಸುತ್ತೀರಿ? ಇದರಲ್ಲೊಂದು ಸರ್ವೆ ಸಾಮಾನ್ಯವಾದ ರೀತಿಯಿರಬೇಡವೇ? ಅಂಜನಾಪುರ ಪ್ರಾಜೆಕ್ಟಿಗೆ 71 ಲಕ್ಷ ರೂಪಾಯಿಗಳನ್ನೂ ಖರ್ಚು ಮಾಡಿದ್ದೀರಿ. 18,000 ನೀರು ಹಾಯುತ್ತದೆ. ಎಕರೆ ಒಂದಕ್ಕೆ 20 ರೂಪಾಯಿ ಹಾಕಿರುತ್ತೀರಿ. ಅದೇ ಬಯಲು ಸೀಮೆಯಲ್ಲಿ 30 ಲಕ್ಷ ರುಪಾಯಿಗಳನ್ನು ಚರ್ುಮಾಡಿ 3,000 ಎಕರೆಗೆ ನೀರು ಹಾಯಿಸುವುದಕ್ಕ ಏರ್ಪಾಡುಮಾಡಿದ್ದಿರಿ. ಅದಕ್ಕೆ 20 ರೂಪಾಯಿ ಾಕಿದ ಮೇಲೆ ಅದೇ ರೀತಿ ನೋಡಿದರೆ 54-8.0 ಹಾಕಬೇಕಾಗುತ್ತದೆ. ಮೊನ್ನೆ ಕರಿಯಾಲ ಪ್ರಾಜೆಕ್ಟಿನಲ್ಲಿ ನಾನು ನೋಡಿದ್ದೇನೆ. 500 ರುಪಾಯಿಗಳನ್ನೇ ಕೇಳುವುದೇ? ಇದರಲ್ಲಿ ಯಾವ ತತ್ವವಿದೆ? ಮಗ್ಗಲಿನಲ್ಲಿ ಜಾವನೊಡನಹಳ್ಳಿ ಕೆರೆಯಹಿಂದೆ ವಸೂಲಿ ಮಾಡುತ್ತೀರಿ ನೋಡಿ.

ಮೊದಲಿನಲ್ಲೇ ಪಬ್ಲಿಕ್ ವರ್ಕ್ಸ್ ಮಂತ್ರಿಗಳು ಈ ಮಸೂದೆಯನ್ನು ಮಂಡಿಸುತ್ತಾರೆಂದು ತಿಳಿದೊಡನೆಯೇ ನಾನು ಅರ್ಥ ಮಾಡಿಕೊಂಡ ಇವರು ಬರಿ ಲೆಕ್ಕಾಚಾರ ಮಾಡುವವರು, ಜಮಿನಿನ ಕಂದಾಯಕ್ಕೂ ಕ್ಲಾಸಿಫಿಕೇಷನ್ನಿಗೂ ಸಂಬಂಧಿಸುವುದಿಲ್ಲ ಎಂದು.

ಒಬ್ಬರು ತಜ್ಞರು ಹೀಗೆ ಹೇಳಿದ್ದಾರೆ:-

"In Mysore officers who fix the demand for land revenue are also the officers to collect. this is a mistake."

ಇದನ್ನೂ ತಪ್ಪಿಸಬೇಕು.

Land revenue must be fixed by the survey Department and the collections must be made by the revenue Department and both the Departments must be supervised by the revenue Head.

ಆದರೆ ಈಗ ಪಬ್ಲಿಕ್ ವರ್ಕ್ಸ್ ಡಿಪಾರ್ಟಿಮೆಂಟಿನವರು ಏನು ಮಾಡುತ್ತಾರೋ ನೋಡೋಣ. ಅವರು ಲೆಕ್ಕಚಾರ ಮಾತ್ರ ಮಾಡುತ್ತಾರೆ. ಇದನ್ನೆಲ್ಲ ಅವರು ಾಡಬೇಕೆಂದು ನಾವು ಯೋಚನೆಮಾಡಬೇಕು.

ಶ್ರೀ ಟಿ. ಮರಿಯಪ್ಪ:- ಯಾವುದಾದರೂ ಒಂದು ಪ್ರೋಜೆಕ್ಟು ಆಗಬೇಕಾದರೆ ಅಸಿಸ್ಟೆಂಟ್ ಎಂಜಿನಿಯರು ಬಂದು ರೈತರಿಂದ ಮುಚ್ಚಳಿಕೆ ತೆಗೆದುಕೊಳ್ಳುತ್ತಾರೆ. ಈಗಲೂ ಹಾಗೆಯೇ ನಡೆಯುತ್ತದೆ.

ಶ್ರೀ ಕೆ. ಕೆಂಚಪ್ಪ:- ಈಗ ನೆಡೆಯುತ್ತಿದೆ ಎಂದರೆ ಅವರು ಯಾವುದಾದರೂ ಒಂದು ಕಾಂಟ್ರಿಬ್ಯೂಷನ್ ಬರೆಯಿರಿ ಎಂದು ಡೈರೆಕ್ಷನ್ ಕೊಡುತ್ತಾರೆ. ಅದಕ್ಕೆ ಯಾವ ಆಧಾರವೂ ಇರುವುದಿಲ್ಲ. ಈ ಬಿಲ್ಲಿನಲ್ಲಿಯೂ ಸಹ ಇಷ್ಟೇ ಪರ್ಸೆಂಟ್ ಕಾಂಟ್ರಿಬ್ಯೂಷನ್ ಇರಲೇಬೇಕೆಂದು ಹೇಳಿಲ್ಲ.

ಶ್ರೀ ಟಿ. ಮರಿಯಪ್ಪ:- ಎಷ್ಟೋ ಕಡೆ ರೈತರು 400 – 500 ರೂಪಾಯಿಗಳನ್ನೂ ಕಾಂಟ್ರಿಬ್ಯೂಷನ್ ಕೊಡುತ್ತೇವೆಂದು ಮುಂದೆಬರುತ್ತಾರೆ. ಅದಕ್ಕೋಸ್ಕರ it should not exceed Rs 500 ಎಂದು ಲಿಮಿಟ್ ಹಾಕಿಕೊಂಡಿದ್ದೇವೆ.

ಶ್ರೀ ಕೆ. ಕೆಂಚಪ್ಪ:- ತಾವು 500 ರೂಪಾಯಿಗಳನ್ನೂ ಕಾಂಟ್ರಿಬ್ಯೂಷನ್ ಕೊಡಿಯೆಂದು ಕರಿಯಾಲಾ ಪ್ರೊಜೆಕ್ಟಿನಲ್ಲಿ ಕೇಳಿದ್ದೀರಿ. ಅವರು ಮನೆ ಮಠ ಮಾರಿಬಿಟ್ಟು ಆ ಹಣವನ್ನು ನಿಮಗೆ ಕೊಡಬೇಕಾಗುವುದು. ಅವರ ಹೆಣ್ಣುಮಕ್ಕಳನ್ನು ದೇವರೇ ಕಾಪಾಡಬೇಕು.

Are you justified in fixing Rs 500 in kariyala project ? Has any one understood the real situation there ? I am quiting this instance in

order to show how unreasonably the contribution is fixed. There persons are ignorant about the entire situation based on considerations of survey Manual Act . they make an attempt to take these mutchalikas.

**Sri. T. Mariyappa :-** But the Hon'ble Member forgets that money invested on the project is somebody eles's money .

**Sri. K. Kenchappa. :-** Certainly , it is the country's money . I go to the extent of saying that if the amount that belongs to the country or the State is to be spent for a Particular area, ಇದು ಇನ್ನೊಂದು ಸ್ಥಳದವರ ಶೋಷಣೆ ಮಾಡುವ ವಿಚಾರ ಇದುವರೆಗೆ ಅನುಸರಿಸಿಕೊಂಡು ಬಂದಿರತಕ್ಕ ಪದ್ಧತಿ ಈ ಕಾಂಟ್ರಿಬ್ಯೂಷನ್ ವಿಚಾರದಲ್ಲಿ ಯಾವುದು ಎಂದು ಕೇಳುತ್ತೇನೆ. ಹಿಂದಿನಿಂದ ಹೊಯ್ಸಳ ದೊರೆಗಳು, ವಿಜಯನಗರದ ಅರಸರು, ಮರಾಠೆಯವರು ಮೊಗಲಾಯವರು, ಬಿದರೆ ನಾಯಕರು, ಟಿಪ್ಪುಸುಲ್ತಾನರು, ದಿವಾನ್ ಪೂರ್ಣಯ್ಯನವರು ಎಷ್ಟು ಜನರು ಅನುಸರಿಸಿಕೊಂಡು ಬಂದ ಪದ್ಧತಿ ಮತ್ತು ಇಂಗ್ಲೀಷರು ತಯಾರು ಮಾಡಿರತಕ್ಕ ಸರ್ವೆ ಮ್ಯಾನುಯಲ್ಲಿನಲ್ಲಿರುವ ತತ್ವವನ್ನು ಬಿಟ್ಟು ಬಿಟ್ಟು ರೈತರ ಉದ್ಧಾರಕರು ಎಂದು ಹೇಳಿಕೊಂಡು ನಾವು ಆ ಬಡ ಮನುಷ್ಯನ ಮೇಲೆ ಕಂದಾಯ ಹಾಕುವುದಕ್ಕೆ ಹೋಗಿದ್ದೀರಿ. ಇದು ನ್ಯಾಯವೆ ಎಂದು ಕೇಳುತ್ತೇನೆ. ಬೊಂಬಾಯಿನಲ್ಲಿ ಹಿಂದೆ ಇಂಗ್ಲೀಷ್ ಗರ್ವನರ್ ಆಗಿದ್ದವರು ಜನರ ಏಳಿಗೋಸ್ಕರ ಏನು ಆರ್ಡರ್ ಮಾಡಿದ್ದಾರೆ ಎಂಬುದನ್ನು ಗುಂಡಪ್ಪ ಗೌಡರು ಕಮಿಟಿಯ ವರದಿಯಲ್ಲಿ ಕೊಟ್ಟಿದ್ದಾರೆ. ಅವರು ನಮ್ಮ ಜನರಷ್ಟು ದೇಶಪ್ರೇಮಿಗಳಾಗದೆ ಇರದಿದ್ದರೂ ಸಹ ತಮ್ಮ ದೇಶಕ್ಕೆ ಹಿಂತಿರುಗಿ ಹೋದ ಮೇಲೆ ಅವರ ಕೀರ್ತಿ ಇಲ್ಲಿ ಬೆಳಗಬೇಕೆಂಬ ಸದುದ್ದೇಶದಿಂದ ವಿಚಾರವನ್ನು ಮೂಲಭೂತವಾಗಿ ವಿಮರ್ಶೆ ಮಾಡಿ ಒಂದು ಪದ್ಧತಿಯನ್ನುತಂದಿದ್ದರು. ಆ ರೀತಿ ಪರದೇಶದ ತಜ್ಞರು ಅನುಸರಿಸಿದಂಥಾ ಪದ್ಧತಿಯನ್ನು ದೇಶಭಕ್ತರಾದ ತಾವು ಅನುಸರಿಸುತ್ತಾ ಇಲ್ಲವಲ್ಲಾ ಎಂದು ವ್ಯಸನ ಪಡುತ್ತೇನೆ. ಆದ್ದರಿಂದ ತಾವು ಹಾಕತಕ್ಕಂಥ ದುಡ್ಡು ಜನರಿಂದ ವಾಪಸು ತೆಗೆದುಕೊಳ್ಳಬೇಕು. ಮೊದಲು ಏನು ಒಂದು ಭಾವನೆ ಇಟ್ಟುಕೊಂಡಿದ್ದೀರೋ ಅದು ಹೋಗಬೇಕು. ಅದು ಹೋಗದೇ ಇದ್ದರೆ ನಮ್ಮ ಬಾಳು ಸರಿಹೋಗುವುದಿಲ್ಲ. ನಮ್ಮ ದೇಶ ಉದ್ಧಾರವಾಗುವುದಿಲ್ಲ. ಎಂದು ಹೇಳಿ ನಾನು ಮುಂದೆ ಸಾಗುತ್ತೇನೆ. ಕ್ಲಾಜ್ 3ರಲ್ಲಿ ಒಂದು ವಿಚಾರ ಹೇಳಿದ್ದೀರಿ. ಅದು ಹೀಗಿದೆ:

"Clase 3 -Levy of betterment contribution -The government shall be entitld to levy a betterment contribution, in acordence with the provisons of this act, from the landholder or holder of any land which in its opinion, is benefited by the construction......"

ಅಲ್ಲಿಂದ ಮುಂದಕ್ಕೆ, "drainage work includes-(i) channels, whether natural or artificial...." ಎಂದು ಹೇಳಿದ್ದೀರಿ. ಒಂದು ನ್ಯಾಚುರಲ್ ಹಳ್ಳ ಹರಿಯುತ್ತದೆಂದು ಇಟ್ಟು ಕೊಳ್ಳೋಣ. ಅದಕ್ಕೆ ಒಂದು ಮೂರು ಕಾಸು ನೀವು ಖರ್ಚು ಮಾಡಿರುವುದಿಲ್ಲ. ಅಂಥ ಸಂದರ್ಭಗಳಲ್ಲಿಯೂ ಕೂಡ ನೀವು ಕಂದಾಯ ಹಾಕಬೇಕೆಂದು ಹೊರಟಿದ್ದೀರಲ್ಲ ಇದು ನ್ಯಾಯವೇ? ಕಪಿಲೆಯಿಂದ ನೀರು ಹಾಯಿಸಿಕೊಂಡರೂ ನಿಮ್ಮ ಆಕ್ಟ್ ಅನ್ವಯಿಸುತ್ತದೆ.

'Irrigation work includes all canals' ಎಂದು ಹೇಳಿದ್ದೀರಿ. what is a canal? Is it British canal? Is it suez canal? ಗಂಗಾನದಿಯನ್ನು ಏನಾದರೂ ನೆನಸಿಕೊಂಡರೆ ಅಲ್ಲಿ ಒಂದು ಟ್ರಿಬ್ಯೂಟರಿಯಿಂದ ಇನ್ನೊಂದಕ್ಕೆ ಹೋಗಲು ಮಾಡಿದಂತೆ ಇಲ್ಲಿ ನಾವು ಏನಾದರೂ ಮಾಡಿದ್ದೇವೆಯೇ? what is a canal and what is a channel? ಈ ವಿಚಾರಗಳನ್ನೆಲ್ಲ. ಆಲೋಚನೆ ಮಾಡಬೇಕಾಗುತ್ತದೆ. ಇದು ಕಾನೂನಿಗೆ ಸಂಬಂದವಾದ ವಿಷಯವಾದ್ದರಿಂದ ಬೇಕಾದಷ್ಟು ಮಾಡುವುದಕ್ಕೆ interpretation ಅವಕಾಶವಿದೆ.

Commonsense and legal aspects have no place. words and sentence that are incorporated there will be incorporated for the purpose of elucidating the real meaning of the sentences.

ಇದರಲ್ಲಿ well include ಮಾಡಿದ್ದೀರಿ. ನಮ್ಮ ರೆವಿನ್ಯೂ ಮ್ಯಾನ್ಯೂಯಲ್ ಮತ್ತು ಸರ್ವೆಮಾನ್ಯೂಯಲ್ ಪ್ರಕಾರ ನಾನಾ ವಿಧವಾದ ಭಾವಿಗಳು ಇವೆ. ಬೊಂಬಾಯಿಯಲ್ಲಿ ಬಾಗಾಯತ ಜಮೀನು ಸೇರಿಸಿದ್ದಾರೆ.

Land irrigated by wells : land irrigated by the wells on the bank of the rivers ; lands irrigated by wells just below the project which get water supply from the project water and the wells just below the channels where the lands get supply of water from the channel by percolation. Like this there are various kinds of wells.

*   *   *   *   *

## ವ್ಯಂಗ್ಯ ದೃಷ್ಟಾಂತ: ಒಂದು ಸ್ವಾರಸ್ಯವನ್ನು ಗಮನಿಸಿ

......ಇವನ್ನೆಲ್ಲಾ ಬಾಗಾಯಿತು ಎಂದು ಹೇಳುವುದಾದರೆ ತಾವು ಏನು ಮಾಡುತ್ತೀರಿ?

ಡಾಕ್ಟರ್ ಹತ್ತಿರ ಹೋಗಿ ನಮ್ಮ ವಕಾಲತ್ತು ತೆಗೆದುಕೊಳ್ಳಿ ಎಂದು ಹೇಳುವಂತೆ ಇದರಲ್ಲಿ ಮೂಲಭೂತ ಅಂಶಗಳಲ್ಲಿ ತಪ್ಪಾಗಿದೆ. ತಾವು ಈ 500 ರೂಪಾಯಿಗಳ ಹೇಗೆ ಯಾವ ಆಧಾರದ ಮೇಲೆ ಹೇಳಿದ್ದೀರಿ? ಯಾವ ಲೆಕ್ಕಚಾರದ ಪ್ರಕಾರ ತಮಗೆ ಇಷ್ಟು ಬರುತ್ತದೆ. ಹೇಳಿ? ಈ ನೀರು ಸರದಿಯನ್ನು ನಿಗದಿ ಮಾಡತಕ್ಕ ಅಧಿಕಾರ ನಿಮಗೆಲ್ಲಿಂದ ಬಂತು? Classification of the soil according to survey Manual Act is altogether different. ಈ ಸರ್ವೆ ಇಲಾಖೆಯವರಾದರೆ ಈ ಅಂಶಗಳನ್ನೆಲ್ಲಾ ಆಲೋಚನೆ ಮಾಡಿ ಈ ನೀರು ಸರದಿ ಕಾಂಟ್ರಿಬ್ಯೂಷನ್ ಇತ್ಯಾದಿ ಕಂದಾಯಗಳನ್ನು ನಿಗದಿ ಮಾಡುತ್ತಾರೆ. ಆ ಸರ್ವೆ ಇಲಖೆಯವರಾದರೆ ಪ್ರತಿಯೊಂದು ಜಮೀನಿನ ಸರ್ವೆ ನಂಬರ್ ಏನು; ಆ ಜಮೀನಿನ ಗುಣ ಎಂಥಾದ್ದು; ಸಾರವೇನು; ಆ ಭೂಮಿ ಏನು 16 ಆಣೆ ಸಾರ ಉಳ್ಳದ್ದೇ 14 ಆಣೆ ಸಾರ ಉಳ್ಳದ್ದೇ ಅಥವಾ ಕೇವಲ ಆಣೆ ಸಾರ ಉಳ್ಳದ್ದೇ ಎಂಬುದನ್ನೆಲ್ಲ ವಿಮರ್ಶೆ ಮಾಡಿ ನೋಡಿ ಕಂದಾಯವನ್ನು ನಿಗದಿ ಮಾಡುತ್ತಾರೆ. ಆದರೆ ತಾವೀಗ ಆ ಮೊಬಲಗನ್ನು ಯಾರು ರೀತಿ ನಿಗದಿ ಮಾಡಿದ್ದೀರಿ ಎನ್ನುವುದೇ ನನಗೆ ಗೊತ್ತಾಗುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಈ ಕಂದಾಯ ವಿಧಾಯಕ ಮಾಡುವುದನ್ನು ಜಿಲ್ಲಾಧಿಕಾರಿಗಳಿಗೆ ಬಿಟ್ಟು ಕೊಡಲಾಗಿದೆ. ಆದರೆ ಬೊಂಬಾಯಿ ಆಕ್ಟ್ ಮತ್ತು ಬೊಂಬಾಯಿ ಲ್ಯಾಂಡ್ ರೆವೆನ್ಯೂ ಕೋಡಿನ ಪ್ರಕಾರ ಅಲ್ಲಿ ಈ ಅಧಿಕಾರವನ್ನು Collector or Head of the survey department ಗೆ ಕೊಡಲಾಗಿದೆ. ಎಂದು ತಿಳಿಸಿದೆ. ಆ ಸರ್ವೆ ಇಲಾಖೆಯವರು ತರೀ ಕಂದಾಯವನ್ನು ನಿಗದಿ ಮಾಡತಕ್ಕ ಸಂದರ್ಭವಿದ್ದಾಗ ಅವರು – survey operation, permanency, equity, economy ಎಂದು ಹೀಗೆಲ್ಲ ಬೇಕಾದಷ್ಟು ಆಧಾರಗಳಿವೆ. ಅವುಗಳನ್ನು ನೋಡಿಕೊಂಡು ನಿಗದಿ ಮಾಡುತ್ತಾರೆ. ಹಾಗೊಂದು ವೇಳೆ ಈ ಇದ್ದರೂ ಅದರ ಸರ್ವಂಟಿ ಇರಬೇಕು. ನೀರು ಯಾವಾಗ್ಲೂ ಬರುತ್ತದೆ ಆಧಾರ ನಂಬಿಕೆಗಳಿರಬೇಕು. ಎಂಬ ಇತರ Conveniences ಗಳು ಇರಬೇಕು ಎಕನಾಮಿ ಎಂದರೆ ಎಲ್ಲಿ ಎಷ್ಟು ದುಡ್ಡನ್ನು ಖರ್ಚು ಮಾಡಿದ್ದಾರೋ ಅಲ್ಲಿ ಅಷ್ಟು ದುಡ್ಡನ್ನು ಕೊಡಿ ಎಂಬುದಲ್ಲ. ಎಕನಾಮಿ ಎಂದರೆ ಆ ತೆರಿಗೆಯ ಹೊರೆಯನ್ನು ಹೊರಲು ಜನರಿಗೆ ಶಕ್ತಿ ಇದೆಯೇ ಅಥವಾ ಅದು ಶಕ್ತಿಗೆ ಮೀರಿದ್ದೇ ಎಂಬುದನ್ನು ನೋಡಬೇಕು above all these things, there is an important thing called equity. ಆ ಈಕ್ವಟಿ ಯಂಥಾ ನ್ಯಾಯ – ಧರ್ಮ ಇದರಲ್ಲಿದೆಯೇ ಎಂಬುದನ್ನು ತಾವು ಪರಿಶೀಲನೆ ಮಾಡಿ ನೋಡಬೇಕಾಗಿತ್ತು. ಆದರೆ ತಾವೇನೋ ಒಂದು ಅಮೋಘವಾದ ಭಾವನೆಗೊಳಗಾಗಿ ಈ ರೀತಿ ಮಾಡಿದ್ದೀರಿ. ಆದರೆ ತಾವು ಮಾತೆತ್ತಿದರೆ ಆ ಇಂಡಿಯನ್ ಟ್ಯಾಗ್ಸೇಷನ್ ಸಮಿತಿಯವರ ವಿಚಾರ ತರುತ್ತೀರಿ. ಆ ಟ್ಯಾಗ್ಸೇಷನ್ ಸಮಿತಿಯವರೇನು ಹೇಳಿದ್ದಾರೆ? Regarding assessment, the indian Taxation enquiry Commission re-

port says that assessment in Bombay applies also the Mysore system ಎಂದು ಹೇಳಲಾಗಿದೆ. ಬೊಂಬಾಯಿನಲ್ಲಿ ಸರ್ವೆ ಸೆಟಲ್‌ಮೆಂಟ್ ಆಫೀಸರ್ ಮಾಡುವ ಅಖೈರು ತೀರ್ಮಾನಕ್ಕನುಸಾರವಾಗಿ ನಿಗದಿ ಮಾಡಲ್ಪಡುತ್ತದೆ. ಅದು ಆಯಾಯ ಸ್ಥಳದ ಅನುಭವ ಮತ್ತು ಮಾಹಿತಿಗಳಿಗನುಗುಣವಾಗಿ ನಿರ್ಧರಿಸಲ್ಪಡುತ್ತದೆ. ಆ ರೀತಿ ಈಗ ನಿಮ್ಮಲ್ಲಿ ಎಲ್ಲಿದೆ. Is your Taxation based on "that theory? ನೀವು ದಿವಸ ಆಯಾಯ ಸ್ಥಳ ಸನ್ನಿವೇಶಗಳನ್ನು ನೋಡಿ ಮಾಡಿಲ್ಲ. ಇದೇನು ಪ್ರೊಡೆಕ್ಟೀವೇ ಅಥವಾ ಪ್ರೋಟೆಕ್ಟಿವೇ ಎಂಬುದನ್ನು ನೋಡದೇ ತೆರಿಗೆ ಹಾಕುವುದರಿಂದ ತೆರಿಗೆ ತೆರುವವನ ಮನೆಗಳು ಹಾಳಾಗಿ ಹೋಗುತ್ತವೆ. ರೈತನ ಉದ್ಧಾರಕ್ಕೆಂದು ಇರುವ ಸರ್ಕಾರ 15 ಎಕರೆಗಳ ತನಕ ಈ ನೀರು ಸರದಿಯನ್ನು ಜಿಲ್ಲಾಧಿಕಾರಿಗಳ ಅಧಿಕಾರಕ್ಕೆ ಒಪ್ಪಿಸಿದ್ದರೆ ಇದು ಯಾವ ನ್ಯಾಯ?

ಶ್ರೀ ಎಚ್.ಕೆ. ವೀರಣ್ಣಗೌಡ:- ಕಂಪಲ್‌ಸರಿಯಾಗಿ ಕೊಡಲೇಬೇಕೆಂದು ಏನೂ ಹೇಳಿಲ್ಲ.

ಶ್ರೀ ಕೆ. ಕೆಂಚಪ್ಪ:- ಹೌದೌದು ಆ 8ನೆಯ ಹೆನ್ರಿ ಕಾಲದಲ್ಲಿ ಆತನಿಗೆ ಊಲ್‌ಸಿ ಎಂಬ ಒಬ್ಬ ಮಂತ್ರಿ ಇದ್ದನಂತೆ. ಆತನು ಯಾರಾದರೂ ಹರಕು ಬಟ್ಟೆಯವನು ಬಂದರೆ 'ನೀನು ನಿನ್ನ ಶರೀರಕ್ಕೂ ಸಹ ಸರಿಯಾಗಿ ಬಟ್ಟೆ ಹಾಕದೆ ದುಡ್ಡನ್ನು ಕೂಡಿಸಿಬಿಟ್ಟಿರಬೇಕು, ಆದ್ದರಿಂದ ನೀನು ಸಹ ಸರ್ಕಾರಕ್ಕೆ ಹೆಚ್ಚು ತೆರಿಗೆ ಕೊಡಬಹುದು "ಎಂದು ಅಥವಾ ಒಳ್ಳೆ ಚೆನ್ನಾಗಿ ಬಟ್ಟೆ ಹಾಕಿಕೊಂಡಿದ್ದವರು ಬಂದಾಗ" ನಿಮಗೇನು ಶ್ರೀಮಂತರು, ನಿಮ್ಮಲ್ಲಿ ಹೆಚ್ಚು ಹಣವಿದೆ ನೀವೇಕೆ ಸರ್ಕಾರಕ್ಕೆ ಹೆಚ್ಚು ತೆರಿಗೆಯನ್ನು ಕೊಡಬಾರದು" ಎಂದೂ ಕೇಳುತ್ತಿದ್ದನಂತೆ! ಈಗ ನಮ್ಮ ತೆರಿಗೆಯ ಸ್ವರೂಪವೂ ಹಾಗೆಯೇ ಇದೆ! ತಾವು ಈ ರೀತಿಯೆಲ್ಲಾ ಮಾಡಬಾರದು. ಸತ್ಯ-ಧರ್ಮ-ನ್ಯಾಯಗಳನ್ನು ಅನುಸರಿಸಿ ಕೆಲಸ ಮಾಡಬೇಕು, ತಾವು ಈ ಸರ್ವೆ ಮ್ಯಾನ್ಯೂಯಲ್‌ನಲ್ಲಿ ಹೇಳಿರುವ ಪ್ರಕಾರ Equity ecomony, conception, equitable conception ಇವುಗಳ ಪ್ರಕಾರ ಮಾಡಿ. ನಾವು ಅದಕ್ಕೆ ಬೇಡವೆಂದು ಹೇಳುವುದಿಲ್ಲ. ಆದರೆ ಹೀಗೆಲ್ಲ ಮನಸ್ಸು ಮಾಡಿ ದೇಶೋದ್ಧಾರಕ್ಕೆಂದು ಒಂದು ಮಾತನ್ನು ಹೇಳುವುದು ಸರಿಯಾದದ್ದಲ್ಲ.ನೀವು ಈ ದಿವಸ ನಿಮ್ಮ ಸರ್ಕಾರಕ್ಕೆ ಬರುವ ಉತ್ಪತ್ತಿಯನ್ನು ಜಾಸ್ತಿ ಮಾಡಿಕೊಳ್ಳಲು ನಿಮ್ಮಿಂದ ನೇಮಕವಾದ ನಿಮ್ಮಿಂದ ಅಡಿಯಾಳಾಗಿ ಕೆಲಸ ಮಾಡುವ ಆ ಜಿಲ್ಲಾಧಿಕಾರಿಗಳಿಗೆ ಈ ಕಂದಾಯ ವಿಧಿಸತಕ್ಕ ಹಕ್ಕನ್ನು ಕೊಟ್ಟಿದ್ದೀರಿ. ಇದು ಖಂಡಿತ ಸರಿಯಾದದ್ದಲ್ಲ. ಆ ಸರ್ವೆ ಇಲಾಖೆಯವರು ಕೂಡ ನಿಮ್ಮಿಂದಲೇ ಅಪಾಯಿಂಟ್ ಆಗಿದ್ದರೂ ಅವರಿಗೆ ಆ ರಿಜಿಸ್ಟರುಗಳಿರುತ್ತವೆ. ಆದುದರಿಂದ ಅವರು ಹಾಗೆ ಸಿಕ್ಕದಂತೆ ಮಾಡಲು ಅವಕಾಶವಿಲ್ಲ. ಆದ್ದರಿಂದ ಅವರು ನಿಮ್ಮ ಮಾತು ಕೇಳುವುದಿಲ್ಲ. ಅವರಿಗೆ ಅನೇಕ ಬುಕ್ಕುಗಳಿವೆ. ರೂಲ್ಸುಗಳಿವೆ ಅದರ ಪ್ರಕಾರ ಅವರು ಕೆಲಸ ಮಾಡಬೇಕಾಗಿರುತ್ತದೆ. ಜಿಲ್ಲಾಧಿಕಾರಿಗಳು ಕಂದಾಯ ನಿಗದಿ ಮಾಡಿದಂಥ ಒಂದು ನಿದರ್ಶನ ನಿಮಗೆ ಕೊಡುತ್ತೇನೆ. ಹಿಂದೆ ದಿವಾನ್ ಶೇಷಾದ್ರಿಯವರಿದ್ದಾಗ 1916ನೆಯ

ಸಾಲಿನಲ್ಲಿ ಒಂದು ಜಮೀನಿಗೆ ನೀರು ಸರದಿಯನ್ನು ವಿಧಾಯಕ ಮಾಡಿದರು. ಆ ವಾಣಿವಿಲಾಸ ಸಾಗರದ ಕೆಳಗೆ ಜಮೀನು 1928ರಲ್ಲಿ ಭಾಗ ಪಾಳುಬಿದ್ದಿದೆ. ಅದು ಅಲ್ಲಿ ಒಂದು ಪ್ರೊಟೆಕ್ಟೀವ್‌ವರ್ಕ್ ವಿನಾ ಪ್ರೊಡೆಕ್ಟೀವ್ ವರ್ಕ್ ಅಲ್ಲ. ಆದಾಗ್ಗೂ ಅವರು ಅದಕ್ಕೆ ಹಾಗೆ ಕಂದಾಯವನ್ನು ನಿಗದಿ ಮಾಡಿಬಿಟ್ಟಿದ್ದರು.

ಈ ದಿವಸ ಸಹ ತಾವು ಅದೇ ರೀತಿ ಈ ಕಾಂಟ್ರಿಬ್ಯೂಷನ್ ಮತ್ತು ನೀರು ಸರದಿ ತೆರಿಗೆಯನ್ನು ಜಾಸ್ತಿ ಮಾಡಿದರೆ ಹೆಚ್ಚು ಜಮೀನುಗಳಲ್ಲಿ ಬೆಳೆ ತೆಗೆಯಲು ಖಂಡಿತ ಸಾಧ್ಯವಾಗುವುದಿಲ್ಲ. ಮುಂದೆ ಜನರು ಸುಖವಾಗಿ ಜೀವನ ಮಾಡುವುದಕ್ಕೆ ಆಗುವುದಿಲ್ಲ. ಪ್ರೊಟೆಕ್ಟೀವ್ ವರ್ಕ್‌ಗಳಿಂದ ಜನರು ಬದುಕಬೇಕು. ಅನೇಕರಿಗೆ ತಮ್ಮ ಹಳ್ಳಿಯ ಅಭಿಮಾನದಿಂದ ಇನ್ನೂ ಅಲ್ಲೆ ಕಚ್ಚಿಕೊಂಡಿರುತ್ತಾರೆ. ಅವರಿಗೆ ಅಲ್ಲಿ ಬೇರೆ ಉದ್ಯೋಗವಿಲ್ಲ. ಅದನ್ನು ನೀವು ಸದುಪಯೋಗ ಪಡಿಸಿಕೊಂಡು 500 ರೂಪಾಯಿಗಳ ತೆರಿಗೆಯನ್ನು ಕೊಡಬೇಕೆಂದರೆ ಆತನೂ ಇಲ್ಲಿಯ ತನಕ ಜಮೀನೂದಾರನಾಗಿದ್ದವನು ನಾಳೆ ವ್ಯವಸಾಯದ ಕೂಲಿಗಾರನಾಗಬೇಕಾಗುವುದು. ಹೀಗೆಲ್ಲ ಇರುವುದರಿಂದ, ಈಗ ನೀವು ತಂದಿರುವ ಮಸೂದೆಯಲ್ಲಿ ಅಡಕವಾಗಿರತಕ್ಕ ತತ್ವಗಳಲ್ಲಿ ಸತ್ಯ – ಧರ್ಮ – ನ್ಯಾಯ ನೀತಿಗಳೊಂದೂ ಇಲ್ಲದಂತೆ ನೀರು ಕಂದಾಯ ಹಾಕಲಾಗಿದೆ. ಎಂಬುದಕ್ಕೆ ನೀವು ಏನು ಹೇಳುತ್ತೀರಿ? ಇದು ಎಲ್ಲಿದೆ? ಯಾವ ಪುಸ್ತಕದಲ್ಲಿದೆ? ಆ ನಿಮ್ಮ ಪುಸ್ತಕದಲ್ಲಿರಬಹುದು. ಸರ್ವೆ ಮ್ಯಾನ್ಯೂಯಲ್ ಆಕ್ಟಿನಲ್ಲಿದೆಯೇ? ಸರ್ವೆ ಮ್ಯಾನ್ಯೂಯಲ್‌ನಲ್ಲಿರುವಂತೆ ಮಾಡಿ ಅದಕ್ಕೆ ನಮ್ಮ ಅಭ್ಯಂತರವಿಲ್ಲ. ಸರ್ವೆ ಇಲಾಖೆಯವರು ಭೂಮಿಯನ್ನು ಕ್ಲಾಸಿಫೈ ಮಾಡಿ ಕಂದಾಯ ಹಾಕುತ್ತಾರೆ. ಆದರೆ ತಾವು ಆ ರೀತಿ ಮಾಡದೆ ಕೆರೆಗೆ 30 ಲಕ್ಷ ರೂಪಾಯಿಗಳು ಖರ್ಚಾಗಿರತಕ್ಕ ಕಡೆ ಎಕರೆಗೆ ಮೂರು ರೂಪಾಯಿಗಳ ರೇಟು ಏಕೆ ಇದೆ? ಅಲ್ಲಿಯೂ ಸಹ ತಾವು ಈ ದಿವಸ ಏಕೆ 18 ರೂಪಾಯಿಗಳ ರೇಟನ್ನೇ ಹಾಕಬಾರದು? ಹೀಗಾದರೆ ಇದರಲ್ಲಿ ಕನ್‌ಸಿಡರೇಷನ್ ಎಂಬುದು ಎಲ್ಲಿದೆ? ತಾವು ಈ ದಿವಸ ಹೀಗೆಲ್ಲ ಕಂದಾಯ – ವಾಟರ್ ತೆರಿಗೆ ಹಾಕುತ್ತಿದ್ದೀರಲ್ಲ. ಇದಕ್ಕೆ ಆಧಾರವೇನೆಂದು ಕೇಳಿದರೆ ನೀವು ಇದಕ್ಕೆ ಸಾಕ್ಷಿ ಕೊಡಬಲ್ಲಿರಾ? ಈ ದಿವಸ ಈ ನೀರು ಸರದಿ ವಿಧಿಸತಕ್ಕ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೂ ಮತ್ತು P.W.D. ಇಲಾಖೆಗೂ ವಹಿಸಿರುತ್ತೀರಿ ಇದು ಸರಿಯೇ? ಈ ಕಂದಾಯದ ವಿಚಾರವೆಲ್ಲ. ಲ್ಯಾಂಡ್ ರೆವಿನ್ಯೂಬಾಬಿಗೆ ಸಂಬಂಧ ಪಟ್ಟಿದೆ ಇದೆಲ್ಲಾ ಆ ಲ್ಯಾಂಡ್ ರೆವಿನ್ಯೂ ಅಧಿಕಾರಿಗಳಿಂದಲೇ ಆಗಬೇಕು.

ಭಾವಿಗಳ ಸಂಬಂಧದಲ್ಲಿ ನೀರಾವರಿ ಕಂದಾಯ ಹಾಕುತ್ತೀರಿ. Suppossing for argument's sake, if you accept that I have Spent money for digging wells, etc., how do you fix the levy?

ಅಧ್ಯಕ್ಷರು:– ತಾವು ಮಾತನಾಡುವಾಗ ಇಂಗ್ಲಿಷಿನಲ್ಲಿಯೇ ಮಾತನಾಡುತ್ತೀರಿ. ಆದರೆ ಯಾವ ಭಾಷೆಯಲ್ಲಿ ಭಾಷಣವನ್ನು ಆರಂಭಿಸುತ್ತೀರೋ ಅದೇ ಭಾಷೆಯಲ್ಲಿಯೇ ಭಾಷಣವನ್ನು ಮುಂದುವರೆಸಿದರೆ ಉತ್ತಮವಾಗಿರುತ್ತದೆ.

**ಕನ್ನಡಾಭಿಮಾನ** ಶ್ರೀ ಕೆ. ಕೆಂಚಪ್ಪ:- ಇಂಗ್ಲೀಷಿನಲ್ಲಿ ಮಾತನಾಡಬೇಕೆಂದಿದ್ದೆ. ಆದರೆ ನನಗೆ ಕನ್ನಡದ ಮೇಲಿನ ಅಭಿಮಾನ ಭಾದಿಸುತ್ತದೆ. ಆದ್ದರಿಂದ ಕನ್ನಡದಲ್ಲೇ ಮಾತನಾಡುತ್ತೇನೆ.

ಅಧ್ಯಕ್ಷರು:- ನಾನು ಕನ್ನಡದಲ್ಲೇ ಭಾಷಣ ಮಾಡಬೇಕೆಂದು ಹೇಳುತ್ತಿಲ್ಲ. ಆದಷ್ಟು ಮಟ್ಟಿಗೆ ಕನ್ನಡದಲ್ಲಿ ಮಾತನಾಡುವಾಗ ಇಂಗ್ಲೀಷನ್ನು ಉಪಯೋಗಿಸುವುದನ್ನು ಕಡಿಮೆ ಮಾಡಿದರೆ ಚೆನ್ನಾಗಿರುತ್ತದೆ. ಇಲ್ಲದೇ ಹೋದರೆ ತಮಗೆ ತಿಳಿದಿರುವಂತೆ Points of order ಗಳು ಬರುತ್ತದೆ ಅಂತಹ ಸಂದರ್ಭದಲ್ಲಿ ನನಗೆ ಕಷ್ಟವಾಗುತ್ತದೆ.

ಶ್ರೀ ಕೆ. ಕೆಂಚಪ್ಪ:- ಸಾಧ್ಯವಾದಷ್ಟು ಮಟ್ಟಿಗೆ ಇನ್ನು ಮುಂದೆ ಕನ್ನಡದಲ್ಲೇ ಹೇಳುತ್ತೇನೆ.

ಶ್ರೀ ಅಣ್ಣರಾವ್ ಗಣಮುಖಿ (ಅಫ್‌ಜಲ್‌ಪುರ):- ಇಂಗ್ಲೀಷಿನಲ್ಲೇ ಮಾತನಾಡುವವರಿಗೆ ಕನ್ನಡದ ಮೇಲೆ ಅಭಿಮಾನವಿಲ್ಲವೆಂದು ತಮ್ಮ ಅಭಿಪ್ರಾಯವೋ

**ಕನ್ನಡ ವೈಖರಿ** ಶ್ರೀ ಕೆ. ಕೆಂಚಪ್ಪ:- ಕನ್ನಡದಲ್ಲಿ ಮಾತನಾಡಬೇಕೆಂದು ನನ್ನ ಮನಸ್ಸಿಗೆ ಬಂದಿರುವುದರಿಮದ ಅದೇ ರೀತಿಯಾಗಿ ನಾನು. ಮಾತನಾಡುವ ಇಚ್ಛೆ ಇದೆ ಎಂದು ಹೇಳಿದೆ.

ಭಾವಿಗಳ ಮೇಲೆ ಹಾಕುವುದಾದರೆ ನಾನಾ ರೀತಿಯ ಭಾವಿಗಳಿರುತ್ತವೆ. ಅದಕ್ಕೆ ತಕ್ಕ ಹಾಗೆ ಬಾಗಾಯ್ತು ಕಂದಾಯ ಹಾಕಬೇಕು. ನೀರು ಕೊಡದಿದ್ದರೂ ಬಾಗಾಯ್ತು ಕಂದಾಯ ನೀರಾವರಿ ಕಂದಾಯ ಕೂಡ ಹಾಕಿ ಹಿಂಸೆ ಕೊಡುತ್ತೀರಿ. ನಿರಾವರಿ ಕಂದಾಯ ಹೆಚ್ಚಾಗುತ್ತದೆ. ಸರ್ವೆ ಸೆಟಲ್‌ಮೆಂಟ್ ಆಗಬೇಕು ಎಂದು ಕಾನೂನಿನಲ್ಲಿಯೇ ನಿಗದಿಯಾಗಿದೆ. ಆದುದರಿಂದ ಇದನ್ನು ಆ ದೃಷ್ಟಿಯಿಂದ ಆಲೋಚನೆ ಮಾಡಬೇಕಾಗಿದೆ. ನಮ್ಮ ಡಿಸ್ಟ್ರಿಕ್ಟಿನಲ್ಲಿ ಬಾಗಾಯ್ತು ಕಂದಾಯ ತುಂಬಾ ಜಾಸ್ತಿಯಾಗಿದೆ. ಅಲ್ಲೇ ಲಕ್ಕವಳ್ಳಿ ಪ್ರಾಜೆಕ್ಟಿರುವುದರಿಂದ ಅಲ್ಲಿ ನೀರು ಹೋಗಿದೆ. 1937ನೆಯ ಇಸವಿಯಲ್ಲಿ ನಾನು ರೆವೆನ್ಯೂ ಕಮೀಷನರಿಗೆ ಒಂದು ಕಾಗದ ಬರೆದು ನೀವು ನೀರನ್ನು ಕೊಡದೆ ಕಂದಾಯ ವಸೂಲು ಮಾಡುವುದು ತಪ್ಪಾಗುತ್ತದೆ. ಎಂದು ಹೇಳಿದ್ದಕ್ಕೆ ಅವರು ಸರ್ವೆ ಸೆಟಲ್‌ಮೆಂಟ್ ಆಗಿಲ್ಲ. ಅದನ್ನು ಮಾಡುವಾಗ ಆಲೋಚನೆ ಮಾಡುತ್ತೇವೆಂದು ಹೇಳಿದರು. ಇದುವರೆಗೂ ಅಲ್ಲಿ ಸೆಟಲ್‌ಮೆಂಟ್ ಆಗಿಲ್ಲ.

ಇನ್ನೊಂದು ಮುಖ್ಯ ವಿಚಾರ. ಮೂರನೆಯ ಕ್ಲಾಜಿನ ಪ್ರಕಾರ ಸರ್ಕಾರದವರು ಒಂದು ನೀರಾವರಿ ಯೋಜನೆಯನ್ನು ಮಾಡಿದರೆ ಬೆಟರ್‌ಮೆಂಟು ಲೆವಿ ಹಾಕಬಹುದು ಎನ್ನುವ ಭಾವನೆ ಬರುತ್ತದೆ. ಆದರೆ ಈ ಕ್ಲಾಜಿಗೆ ಸೇರಿದ ಏಕ್ಸಪ್ಲವೇಷನ್ನಿನ ಪ್ರಕಾರ ಮಳೆಯ ನೀರಿನಿಂದ ಭೂಮಿಯನ್ನು ವ್ಯವಸಾಯ ಮಾಡಿದರೂ ಕಾಂಟ್ರಿಬ್ಯೂಷನ್ ಕೊಡಬೇಕೆನ್ನುವ ಅರ್ಥ ಬರುತ್ತದೆ. ಇದು ಬೆಟರ್‌ಮೆಂಟು ಲೆವಿ ಅಲ್ಲ. ಏನೋ ಒಂದು ರೈತನ ಮೇಲೆ ಹಾಕುವ ಲೆವಿ ಎನ್ನುವ ಭಾವನೆ ಬರುತ್ತದೆ. ಈ ಸೆಕ್ಷನ್ನು ಮೂರರಲ್ಲಿ ಭೂಮಿಗೆ ನೀರು ವಿಚಾರವೇ ಇಲ್ಲ.

2 (c) (iv) ರಲ್ಲಿ ಹೀಗೆ ಹೇಳಿದೆ:

"all works for the protection of lands from floods or from erosion, which are owned or controlled by the Government, but does not include works for the removal of sewage."

"Irrigation work includes:-

(i) all canal, channals, tanks, wells, reservoirs, anicuts, band - haras, ponds, springs, ponds, kuntas, talapariges and madugus used for the supply or storage of water, and all works, embankments and structures, installations of a pumping set, supply and escape Channels connected therewith or auxiliary there to which are owned or controlled by the government."

ಇದಕ್ಕೆಲ್ಲ ತಾವು ಏನು ಖರ್ಚು ಮಾಡುತ್ತೀರಿ ಎಂಬುದು ಗೊತ್ತಾಗುವುದಿಲ್ಲ. ಖರ್ಚು ಮಾಡಿದ್ದಕ್ಕೆ ಶೇಕಡ 70 ರಷ್ಟು ಭಾಗದ ಜಮೀನಿಗೆ ಉಪಯೊಗವಾಗಬಹುದು. ಹಾಗೆ ಉಪಯೋಗವಾದ ಜಮಿನಿಗೆ ಕಾಂಟ್ರಿಬ್ಯೂಷನ್ ತೆಗೆದುಕೊಳ್ಳಿ. ಈಗ ತಾವು "ಗ್ರೋಮೋರ್‌ಫುಡ್" ಎಂದು ಎಲ್ಲಾ ಜಮೀನುಗಳಲ್ಲಿಯೂ ಉತ್ಪನ್ನವನ್ನು ಹೆಚ್ಚಾಗಿ ಮಾಡುವುದಕ್ಕಾಗಿ ದುಡ್ಡನ್ನು ಖರ್ಚು ಮಾಡಬೇಕೆಂದಿದ್ದೀರಿ. ಹಾಗೆ ಮಾಡೋಣ, ಆದರೆ ದುಡ್ಡು ಹೇಗೆ ಖರ್ಚು ಆಗುತ್ತದೆ.....

ಶ್ರೀ ಟಿ. ಮರಿಯಪ್ಪ:- ಅವರಿಗೆ ಸಾಲ ಕೊಡುತ್ತಿದ್ದೇವೆ. ಅವರು ಆ ದುಡ್ಡನ್ನು ವಾಪಾಸ್ಸು ಕೊಡುತ್ತಾರೆ.

ಶ್ರೀ ಕೆ. ಕೆಂಚಪ್ಪ:- ಹಾಗಿದ್ದರೆ ನೀವು ಕಾನೂನು ಮಾಡುವವರು ಸರಿಯಾಗಿ ವಿಶದೀಕರಿಸಿ, ಕಲಮಿನಲ್ಲಿ ಹೇಳಬಹುದಾಗಿತ್ತು. ಅದನ್ನು ತಾವು ಇಲ್ಲಿ ಮಾಡಿಲ್ಲ. ಆದ್ದರಿಂದ ವಿಚಾರಮಾಡಬೇಕಾಗಿದೆ. ಇಲ್ಲಿ ನೀವು ದುಡ್ಡು ಕೊಟ್ಟರೆ ವಾಪಾಸು ತೆಗೆದುಕೊಳ್ಳುತ್ತೀರಿ, ಆದ್ದರಿಂದ ಜನರಿಗ ಅನುಕೂಲವಾಗುವುದಿಲ್ಲ. ಈ ಸೆಕ್ಷನ್ನನ್ನು ನೋಡಿದರ ತುಂಬಾ

ವ್ಯಸನವಾಗುತ್ತದೆ. ವಿಶದೀಕರಿಸುವಾಗ ಸರಿಯಾಗಿ ಹೇಳಬೇಕು ಸ್ವಾಮಿ ಹಿಂದೆ ಮಿರ್ಜಾ ಇಸ್ಮಾಯಿಲ್‌ರವರು ದಿವಾನರಾಗಿದ್ದಾಗ ಆಗಿನ ಸಭೆಯಲ್ಲಿ ಒಂದು ಮಾತನ್ನು ಹೇಳಿದರು, "ಯಾವಾಗಲೂ ನಾವು ಉತ್ಪನ್ನವನ್ನೇ ನೋಡಬಾರದು. ಜನರ ಹಿತರಕ್ಷಣೆಯನ್ನು ನೋಡಬೇಕು" ಎಂದು. ಅಲ್ಲದೆ ಕಾವೇರಿ ನದಿಯ ದಂಡೆಯಲ್ಲಿ ಎಂದರೆ ಬೆಳಗೋಳದ ಹತ್ತಿರ ಎಡ ಮುರಿ ಬಲ ಮುರಿ ಎಂದು ಒಂದು ಸ್ಥಳವಿದೆ. ಅದನ್ನು ಟಿಪ್ಪುಸುಲ್ತಾನರು ಕಟ್ಟಿಸಿದ್ದು ಎಂದು ಹೇಳುತ್ತಾರೆ. ಅವರೇ ಕಟ್ಟಿಸಿದರೋ ಅಥವಾ ಮತ್ತಾರು ಕಟ್ಟಿದರೋ ಎನ್ನುವುದನ್ನು ಖಚಿತವಾಗಿ ಹೇಳಲಾರೆ. ಆದರೆ ಅಲ್ಲಿ ಟಿಪ್ಪುಸುಲ್ತಾನರ ಒಂದು ಬರವಣಿಗೆ ಇತ್ತು. ಅದರಲ್ಲಿ "ಕಂದಾಯ ವಸೂಲು ಮಾಡುವುದರಿಂದ ದೇಶದ ಸಂಘತ್ತು ಮತ್ತು ಸರಕಾರದ ಉತ್ಪತ್ತಿ ಹೆಚ್ಚುತ್ತದೆ. ಆ ಉತ್ಪತ್ತಿಯನ್ನು ಪ್ರಜೆಗಳ ಅನುಕೂಲಕ್ಕೊಸ್ಕರ ಉಪಯೋಗಿಸಬೇಕಾದದ್ದು ಅಗತ್ಯ" ಎಂದಿತ್ತು.

ಪದದ ಬಗೆಗಿನ ಸ್ವಾರಸ್ಯ ವಾದ ಶ್ರೀ ಹೆಚ್.ಕೆ. ವೀರಣ್ಣಗೌಡ:- ತಾವು ಮರೆತು ಬಿಟ್ಟಿದ್ದೀರಿ.

ಶ್ರೀ ಕೆ. ಕೆಂಚಪ್ಪ:- ಮರೆತು ಬಿಟ್ಟರೆ Correct ಮಾಡುವುದಕ್ಕೆ ತಾವಿದ್ದೀರಿ. ತಪ್ಪಾಗಿದ್ದರೆ Correct ಮಾಡಿಕೊಳ್ಳಿರಿ. 1937ನೆಯ ಇಸವಿಯ ಅಕ್ಟೋಬರ್ ತಿಂಗಳಿನಲ್ಲಿ ಸರ್ ಮಿರ್ಜಾ ಇಸ್ಮೇಲರು ಕರಿಯಾಲ ಪ್ರೋಜೆಕ್ಟಿನ ವಿಚಾರದಲ್ಲಿ ಕೆಲವು ಹೆಚ್ಚಿನ ದುಡ್ಡಿನ ಅವಶ್ಯಕತೆ ಉಂಟಾದಾಗ ಹೇಳಿದುದನ್ನು ಇಲ್ಲಿ ಹೇಳಬೇಕಾಗಿದೆ.

ಶ್ರೀ ಟಿ. ಮರಿಯಪ್ಪ:- ಕರಿಯಾಲ ಪ್ರೋಜೆಕ್ಟು ಯಾವಾಗ ಸ್ಯಾಂಕ್ಷನ್ ಆಯಿತು?

ಶ್ರೀ ಕೆ. ಕೆಂಚಪ್ಪ:- ಅದನ್ನು ಸ್ಯಾಂಕ್ಷನ್ ಮಾಡಲಿಲ್ಲ. ಅದನ್ನು ಮಾಡಬೇಕೆಂದು ಸಲಹೆ ಮಾಡಿದ್ದಾರೆ. 1937ನೆಯ ಇಸವಿಯಲ್ಲಿ ಶಾಸನ ಸಭೆಯಲ್ಲಿ ಕೊನೆಯ ಭಾಷಣದಲ್ಲಿ ಹೇಳಿದ್ದಾರೆ.

ಶ್ರೀ ಟಿ. ಮರಿಯಪ್ಪ:- ಬ್ಯಾಕ್ ಗ್ರೌಂಡ್ ನನಗೆ ಗೊತ್ತು.

ಶ್ರೀ ಕೆ. ಕೆಂಚಪ್ಪ:- ಆ ಮಾತು ಬೇರೆ. ಸ್ಯಾಂಕ್ಷನ್ ಮಾಡುವ ವಿಚಾರ ಅದರಲ್ಲಿ ಇದೆ. ಆ ಭಾಷಣದಲ್ಲಿ ಹೀಗೆ ಹೇಳಿದ್ದಾರೆ.

"The construction of a tank across karethorehalla, in the Sira and Hiriyur taluks, will be sanctioned, and the work included in this year's programme."

ಆ ಮೇಲೆ, ಚಾರ್ಜು ಎಂದರೆ ಏನು ಸ್ವಾಮಿ? ಇದನ್ನು ಮೊದಲಿನಿಂದ ಅರ್ಥಮಾಡಿಕೊಳ್ಳಬೇಕಾಗಿದೆ. ಸರ್ವೆಮ್ಯಾನ್ಯುಯಲ್ಲಿನಲ್ಲಿ ನೀರು ಕಂದಾಯ ಹಾಕುವ ಮೊದಲು ಏನೇನು ನಿಯಮಗಳನ್ನು ಅನುಸರಿಸಬೇಕೆಂದು ಹೇಳಿದ್ದಾರೋ ಅವು ಯಾವುದನ್ನು ಅನುಸರಿಸದೆ ಇರುವುದರಿಂದ ನಾನು ಹೆಚ್ಚಾಗಿ ಹೇಳಲಾರೆ. ಈ ಬಿಲ್ಲು ಈಗ Select Committee ಗೆ ಹೋಗುತ್ತದೆ. ಅದರಲ್ಲಿ ಇವುಗಳೆಲ್ಲ ಚರ್ಚೆಗೆ ಬರುತ್ತವೆ. ಆ ನಿಯಮಗಳೆಲ್ಲವನ್ನು ನೋಡಿ ಅವುಗಳನ್ನು ಅನುಸರಿಸಲು ಯಾವ ರೀತಿ ಕ್ರಮ ತೆಗೆದುಕೊಳ್ಳಬೇಕೆಂಬುದನ್ನು ಆಲೋಚನೆ ಮಾಡಿ ಈ ಬಿಲ್ಲಿನಲ್ಲಿ ತಪ್ಪಿಲ್ಲದಂತೆ ಸಾಧ್ಯವಾದಷ್ಟು ಚೆನ್ನಾಗಿ ಮಾಡಬೇಕು.

ಸಾಧ್ಯವಾದಷ್ಟು ಸರ್ಕಾರಕ್ಕೆ ಜನರಿಂದ ದುಡ್ಡು ಬರಲಿ ಎಂಬ ಮನೋಭಾವನೆ ಇರಬಾರದು. ಆ ಭಾವನೆಗೋಸ್ಕರ ಇನ್ ಕಮ್‌ಟ್ಯಾಕ್ಸ್ ಇತರ ಟ್ಯಾಕ್ಸಗಳು ಇವೆ. ಇನ್ನೊಂದು ವಿಚಾರ ತಮಗೆ ಹೇಳುತ್ತೇನೆ. ಈ ಟ್ಯಾಕ್ಸ್ ರೈತನ ಮೇಲೆತಾನೆ ಬೀಳುವುದು? ಹೀಗೆ ರೈತನ ಮೇಲೆ ಟ್ಯಾಕ್ಸು ಹಾಕುವಾಗ ಯಾವ ಯಾವ ಈ ಟ್ಯಾಕ್ಸ್ ರೈತನ ಮೇಲೆ ಈಗಾಗಲೇ ಬೀಳುತ್ತೆ. ಎಂಬುದನ್ನು ಸ್ವಲ್ಪ ಆಲೋಚನೆ ಮಾಡಬೇಕು. ನಮ್ಮ ರೈತಾಪಿ ಜನಕ್ಕೆ ತೆರಿಗೆ ಕೊಡುವ ಶಕ್ತಿ ಇದೆಯೇ ಅವರಿಗೆ ತೆರಿಗೆಗೆ ತಕ್ಕಂತೆ ಹೆಚ್ಚಿಗೆ ಉತ್ಪತ್ತಿ ಇದೆಯೇ., ನಿಜವಾಗಿಯೂ ಅವರು ಯಾವ ಸ್ಥಿತಿಯಲ್ಲಿದ್ದಾರೆ ಎಂಬುದನ್ನು ನೋಡಬೇಕು. ಧರ್ಮದೃಷ್ಠಿ ಮತ್ತು ಅರ್ಥಿಕ ದೃಷ್ಟಿಯಿಂದ ಆಲೋಚನೆ ಮಾಡಿ ಈ ಬಿಲ್ಲನ್ನು ತಂದಿದ್ದಾರೆಯೇ ಎಂದು ಆಲೋಚನೆ ಮಾಡಬೇಕು. ಈಗಾಗಲೇ ಅಗ್ರಿಕಲ್‌ಚರಲ್ ಇನ್‌ಕಮ್‌ಟ್ಯಾಕ್ಸ್ ಎಂದರೆ ವ್ಯವಸಾಯ ಉತ್ಪನ್ನದ ಮೇಲೆ ಟ್ಯಾಕ್ಸ್ ಹಾಕುತ್ತಿದ್ದಾರೆ. ಖರೀದಿ ಮಾಡಿದ ಮಾಲಿನ ಮೇಲೂ ಸಹ ಟ್ಯಾಕ್ಸ್ ಹಾಕುತ್ತಿದ್ದಾರೆ. ಇತರ ಸೆಸ್ಸುಗಳನ್ನು ವಿಪರೀವಾಗಿ ಹಾಕುತ್ತಿದ್ದಾರೆ. ಒಂದು ರೂಪಾಯಿಗೆ ಒಟ್ಟಿಗೆ ಸುಮಾರು ಏಳೆಂಟಾಣೆ ಸೆಸ್ಸು ಆಗುತ್ತದೆ. ಲೋಕಲ್ ಸೆಸ್ಸು, ಇರಿಗೇಷನ್ ಸೆಸ್ಸು, ಎಜುಕೇಷನ್ ಸೆಸ್ಸು ಇವೆಲ್ಲ ಆ ರೈತನ ಮೇಲೆ ಬೀಳುತ್ತೆ. ಇಷ್ಟೆಲ್ಲಾ ಟ್ಯಾಕ್ಸು ಕೊಡತಕ್ಕ ಮನುಷ್ಯನ ಮೇಲೆ ಇಷ್ಟು ಕಠಿಣತರವಾದ ಮನೋಭಾವನೆ ಏಕೆ ಬಂತು? ಆತನು ಇಲ್ಲದಿದ್ದರೆ ದೇಶದ ಪ್ರಗತಿಯಾಗದು. ವ್ಯವಸಾಯ ಕ್ರಾಂತಿಕಾರಕ ರೀತಿಯಲ್ಲಿ ಅಭಿವೃದ್ದಿಯಾಗಬೇಕು, ಅಗ್ರೇರಿಯನ್ ರೆವಲ್ಯೂಷನ್ ಆಗಬೇಕು. ಎನ್ನತಕ್ಕ ಭಾವನೆಯನ್ನು ನಾವು ಇಟ್ಟುಕೊಂಡಿರುವಾಗ ಈ ರೀತಿ ಟ್ಯಾಕ್ಸು ಹಾಕುವುದು ಸರಿಯಲ್ಲ ಎನ್ನುವ ಮನಭಾವನೆಯನ್ನು ಜನ ಇಟ್ಟುಕೊಂಡಿದ್ದಾರೆ. ಇಂಥ ವ್ಯವಸಾಯಗಾರರ ಮೇಲೆ ಅನೇಕ ಟ್ಯಾಕ್ಸುಗಳನ್ನು ಹಾಕಬಾರದು ಆದ್ದರಿಂದ ರೈತರ ಮೇಲೆ ಖಂಡಿತಾ ಹೆಚ್ಚುಟ್ಯಾಕ್ಸು ಹಾಕಬಾರದು ಎಂದು ನಾನು ವಾದಿಸುತ್ತಿದೇನೆ. ಇಲ್ಲಿ ಈ ರೀತಿಯಾಗಿ ಹೇಳಿದ್ದಾರೆ.

"during the transition period no tax, rent or land revenue demand should be made in resect of any piece of land which is so small or the gross out-turn of which is so light that the hole of which if left to the cultyvator for his own use hould not suffie to give him a decent human existene according to pre determined standard."

ಶ್ರೀ ಟಿ. ಮರಿಯಪ್ಪ:- ಅದು ಲ್ಯಾಂಡ್ ರೆವಿನ್ಯೂಗೆ ಸಂಬಂಧ ಪಟ್ಟಿದ್ದು, ಸರ್ಕಾರದ ಹಣ ಖರ್ಚು ಮಾಡಿ ನೀನು ಕೊಡುತ್ತಾರೆ. ಇದು ಅದಕ್ಕೆ ಸಂಬಂಧಪಟ್ಟದ್ದು.

ಶ್ರೀ ಕೆಂಚಪ್ಪ:- ಲ್ಯಾಂಡ್ ರೆವಿನ್ಯೂ ಎಂದರೆ ಅದರಲ್ಲಿ ವಾಟರ್ ರೇಟ್ wet rate, ಮುಂತಾದವು ಬರುವುದಿಲ್ಲ. ; ಖುಷ್ಕಿ ಜಮೀನು ಕಂದಾಯಕ್ಕೆ ಲ್ಯಾಂಡ್ ರೆವಿನ್ಯೂ ಎಂದು ಹೇಳುತ್ತಾರೆ. ಖುಷ್ಕಿ ಕಂದಾಯ ಬೇರೆ ತರೀ ಕಂದಾಯ ಬೇರೆ. ಇದನ್ನೇಲ್ಲ. ಆಲೋಚನೆ ಮಾಡಿದ್ದಾರೆಯೇ? ನಾನು ಹೇಳುವುದು ಇಷ್ಟೆ. ತಮ್ಮ ದೃಷ್ಟಿ ಮತ್ತು ದೆಶೆ ಸರಿಯಾಗಿಲ್ಲ. ಇದನ್ನು ತಾವು ಮಾರ್ಪಾಡು ಮಾಡಿಕೊಳ್ಳಬೇಕು. ಇದನ್ನೆಲ್ಲ ದೇಶದ ಹಿತ ದೃಷ್ಟಿಯಿಂದ ಮಾಡುತ್ತೀರೆಂದು ತಿಳಿದುಕೊಳ್ಳಬೇಕು. ದೇಶದಲ್ಲಿರತಕ್ಕ ವ್ಯವಸಾಯ ಕ್ರಮಕ್ರಾಂತಿಕಾರಕ ರೀತಿಯಲ್ಲಿ ಅಭಿವೃದ್ಧಿ ಹೊಂದಬೇಕು ಎನ್ನುವ ದೃಷ್ಟಿಯಿಂದ ನಾವು ಆಲೋಚನೆ ಮಾಡಬೇಕಾಗಿದೆ. ನಾನು ಹೇಳುವುದಿಷ್ಟೆ ತಮ್ಮ ದೃಷ್ಟಿಬದಲಾವಣೆಯಾಗಬೇಕು. ಪ್ರತಿಯೊಂದು ವಿಚಾರವನ್ನು ಸಹ ಇಂಡಿಯನ್ ಟ್ಯಾಕ್ಸೇಷನ್ ಸಮಿತಿವರು ಹೇಳಿದ್ದಾರೆ. ಅದರಲ್ಲಿ ಬೇಕಾದಷ್ಟು ಜನ ಸ್ಟೇಟ್‌ಮೆಂಟ್ ಕೊಟ್ಟಿದ್ದಾರೆ. ಅದನ್ನು ಈ ಮಸೂದೆಯಲ್ಲಿ ಅಳವಡಿಸಿ ಅದನ್ನು ಸರಿಯಾದ ರೀತಿಯಿಂದ ಮಾರ್ಪಾಡು ಮಾಡುವುದಕ್ಕೆ ಅವಕಾಶವಿದೆ ಎಂದು ನಾನು ಕೇಳಿಕೊಂಡದ್ದೇನೆ.

ಶ್ರೀ ಕೆ. ಪುಟ್ಟಸ್ವಾಮಿ (ಮೈಸೂರು):- ಅಧ್ಯಕ್ಷರೇ ವಿರೋಧ ಪಕ್ಷದ ನಾಯಕರ ಭಾಷಣವನ್ನು ಬಹಳ ಏಕಾಗ್ರತೆಯಿಂದ ಕೆಳಿದೆ. ಅದನ್ನು ಕೇಳಿದ ಮೇಲೆ ವಿರೋಧ ಪಕ್ಷದ ನಾಯಕರಿಗೆ ಸಾಮಾನ್ಯವಾದಂಥ ತಿಳಿವಳಿಕೆ ಮತ್ತು ಲೋಕಾನುಭವ ಎಲ್ಲಿ ಮಾಯವಾಗಿದೆಯೋ ಎನ್ನುವ ಸಂಶಯ ನನಗೆ ಬಂತು.

* * * * *

## ವಾಣಿ ವಿಲಾಸ ಅಚ್ಚುಕಟ್ಟು : ಹೆಚ್ಚುವರಿ ಕಂದಾಯ

ಶ್ರೀ ಕೆ. ಕೆಂಚಪ್ಪ:- ಮಾನ್ಯ ಅಧ್ಯಕ್ಷರೇ, ಮೊನ್ನೆಯ ದಿವಸ ಪ್ರಶ್ನೆಗಳ 5ನೆ ಕಟ್ಟಿನ 3ನೇ ಪುಟದಲ್ಲಿರುವ 210ನೇ ಪ್ರಶ್ನೆಗೆ ಸಂಬಂಧಪಟ್ಟ ವಿಚಾರವಾಗಿ ಕೆಲವು ವಿಚಾರಗಳನ್ನು ನಾನು ಹೇಳಬೇಕಾಗಿದೆ. 1928ನೇ ಇಸವಿಯಿಂದ ಇದುವರೆಗೆ ವಾಣಿ ವಿಲಾಸ ಸಾಗರ ಅಚ್ಚುಕಟ್ಟಿನ ಭೂಮಿಗಳ ಮೇಲೆ ಸರಕಾರದ ಕಾನೂನು ವಿರುದ್ಧವಾಗಿ ಹೆಚ್ಚಿಗೆ ನೀರಿನ ಕಂದಾಯವನ್ನು ವಸೂಲು ಮಾಡುತ್ತಿದ್ದಾರೆ. ಸರಕಾರಕ್ಕೆ ದುಡ್ಡು ಬಂದರೆ ಆಯಿತು ಎಂದು ಅಕ್ರಮವಾಗಿ ಕಂದಾಯ ವಸೂಲು ಮಾಡುತ್ತಿದ್ದಾರೆ. ಉತ್ತರದ (ಸಿ) ದಲ್ಲಿ ಹೇಳಿದ ಹಾಗೆ 1955-56ನೇ ಸಾಲಿನ ಆಖ್ಯೆರಿನವರೆಗೆ, ವಾಣಿ ವಿಲಾಸ ಸಾಗರದ ನೀರನ್ನು ಉಪಯೋಗಿಸಿಕೊಂಡು ಬತ್ತವನ್ನು ಮತ್ತು ಕಬ್ಬನ್ನು ಬೆಳೆದ ಜಮೀನುಗಳ ಸಂಬಂಧದಲ್ಲಿ ಪ್ರತಿ ಎಕರೆಗೆ 5 ರೂ. 8 ಆ ಮತ್ತು ಇತರ ಬೆಳೆಗಳನ್ನು ಬೆಲೆದ ಜಮೀನುಗಳ ಸಂಬಂಧದಲ್ಲಿ ಪ್ರತಿ ಎಕರೆಗೆ 4 ರೂ 8 ಆ ನೀರು ಸರದಿಯನ್ನು ಗೊತ್ತು ಮಾಡಲಾಗಿದೆ. 1955-56ನೇ ಸಲಿನ ತರುವಾಯ ಎಲ್ಲಾ ಜಮೀನುಗಳ ಸಂಬಂಧದಲ್ಲೂ ಅವುಗಳಲ್ಲಿ ಯಾವ ಬೆಳೆಯನ್ನೇ ಬೆಳೆದರೂ ಪ್ರತಿ ಎಕರೆಗೆ 5 ರು. 8 ಆ ನೀರು ಸರದಿಯನ್ನು ವಿಧಿಸಲಾಗಿದೆ. ಎಂದು ಹೇಳಿದೆ. ಈ ಸಂಬಂಧದಲ್ಲಿ ಕೆಲವು ಪ್ರಶ್ನೆಗಳು ಉದ್ಭವಿಸುತ್ತವೆ. 1955-56ನೇ ಸಾಲಿನ ಹಿಂದೆ ಯಾವ ರೀತಿಯಾಗಿ ಕಂದಾಯ ವಸೂಲು ಮಾಡಲಾಗಿದೆ. ಎಂಬುದಕ್ಕೆ ಕಾನೂನು ಏನು ಇದೆ ಎಂಬುದನ್ನು ಹೇಳದೇ ಹೋದರೆ ಅರ್ಥವಾಗುವುದಿಲ್ಲ. 1928ನೇ ಇಸವಿಯಲ್ಲಿ ಒಂದು ಸರಕಾರದ ಆರ್ಡರ್ ಹೊರಟಿದೆ. ಆ ಕಾನೂನು ಪ್ರಕಾರ ಮೊದಲಿನ ಆರು ವರ್ಷ ಎರಡೂವರೆ ರೂಪಾಯಿ ಕಂದಾಯ ವಸೂಲು ಮಾಡಬೇಕೆಂದಿದೆ. ಆದರೆ, 1938ನೇ ಇಸವಿಯಿಂದ ಕಾನೂನನ್ನು ಬದಿಗಿಟ್ಟು ಮೊದಲಿನ ಆರು ವರ್ಷ ಎರಡೂವರೆ ರೂಪಾಯಿ ಕಂದಾಯ ವಸೂಲು ಮಾಡಬೇಕೆಂದಿದೆ. ಆದರೆ, 1938ನೇ ಇಸವಿಯಿಂದ ಕಾನೂನನ್ನು ಬದಿಗಿಟ್ಟು ಮೊದಲಿನ ಆರುವರ್ಷ ಎರಡೂವರೆ ರೂಪಾಯಿಗೆ ಬದಲು ಐದೂವರೆ $5^1/_2$ ರೂಪಾಯಿ ದರದಂತೆ ಬತ್ತ, ಕಬ್ಬು ಬೆಳೆಯುವ ಭೂಮಿಯ ಮೇಲೆ ನೀರು ಕಂದಾಯ ವಸೂಲು ಮಾಡುತ್ತಾ ಬಂದಿದೆ. 1938 ರಿಂದ 1958ನೇ ಮಾರ್ಚಿ 26ನೇ ತಾರೀಖಿನವರೆಗೆ ಅಂದರೆ ಇಂದಿನವರೆಗೆ ಅಕ್ರಮವಾಗಿ ಕಂದಾಯ ವಸೂಲು ಮಾಡಿದ್ದಾರೆ. ಮೊದಲಿನ ಎಂಟು ವರ್ಷ ಅಥವಾ ಆರು ವರ್ಷ ಎಗ್‌ಜೆಂಷನ್ ಇರಬೇಕಾಗಿತ್ತು. ಆ ಆರ್ಡರದ ತಾರೀಕು ಮತ್ತು ನಂಬರು ಆರ್.522-26 ಎಲ್.ಆರ್.13-27-15,13/14ನೇ ಜುಲ್ಯೆ 1928 ಎಂದು ಇದೆ. ಅಕ್ರಮವಾಗಿ ಕಂದಾಯ ವಸೂಲು ಮಾಡಿದ್ದಲ್ಲದೆ ಅದಕ್ಕೆ ಎರಡರಷ್ಟು ಸೆಸ್ ಅನಧಿಕೃತವಾಗಿ ವಸೂಲು ಮಾಡಲಾಗಿದೆ. ರೈತರ ಪ್ರಾಣ ಉಳಿಯುವ ಸ್ಥಿತಿ ಇಲ್ಲ. ಬೇಕಾದಷ್ಟು ಅರ್ಜಿಗಳನ್ನು ಕಳಿಸಿದ್ದಾರೆ. ಹೀಗೆ ಆದರೆ ರೈತರು ಜೀವನ ಹೇಗೆ ನಡೆಸಬೇಕು? 1936ನೇ ಇಸವಿಯ

ಕಾನೂನು ಹೊರಡಿಸುವುದಕ್ಕೆ ಮುಂಚೆ ಇರತಕ್ಕ ಇನ್ನೊಂದು ವಿಚಾರ ಹೇಳುತ್ತೇನೆ. ಭತ್ತ, ಕಬ್ಬು ಇಂಥಾ ಬೆಳೆಗಳನ್ನು ಬಿಟ್ಟು ಬೇರೆ ಬೆಳೆಗಳಿಗೆ ಅಂದರೆ ಖುಷ್ಕೀ ಬೆಳೆಗಳಿಗೆ ನೀರು ಬೆಳೆಗಳಿಗೆ ನೀರು ಉಪಯೋಗಿಸಿರಬಹುದು. ರಾಗಿ ಕೂಡ ಬೆಳೆಯುತ್ತದೆ. ಇಂಥ ಸಂದರ್ಭದಲ್ಲಿ ಒಂದು ಎಕರೆಗೆ ಮೂರುವರೆ ರೂಪಾಯಿ ಕಂದಾಯ ವಸೂಲು ಮಾಡಬೇಕು ಎಂದು ಇದೆ.

ಇದುವರೆಗೆ ಬದಲಾವಣೆಯಾಗಿಲ್ಲ. ಜಿ.ಒ. ನಂ. ಆರ್. 322–26–ಎಲ್.ಆರ್.13–27–15, ದಿನಾಂಕ:14ನೇ ಜುಲೈ 1928, ಪ್ರಕಾರ ಮೂರುವರೆ ರೂಪಾಯಿ ಎಕರೆಗೆ ವಸೂಲು ಮಾಡಬೇಕೆಂದಿದೆ. ಅದು ಇದುವರೆಗೂ ಬದಲಾವಣೆಯಾಗಿಲ್ಲ. ಭತ್ತ, ಕಬ್ಬುಗಳ ವಿಚಾರವಲ್ಲ. ಇದು ತೋಟದ ವಿಚಾರ. ಇನ್ನು ಖುಷ್ಕಿ ಬೆಳೆ, ನೀರು ತೆಗೆದುಕೊಂಡು ಬೆಳೆಯುವುದಕ್ಕೆ ಮೂರೂವರೆ ರೂಪಾಯಿಗಳನ್ನು ವಸೂಲು ಮಾಡಬೇಕೆಂದಿದೆ. ಆದರೆ ಇದುವರೆಗೆ ಆ ರೀತಿ ವಸೂಲು ಮಾಡಿಲ್ಲ. ಅದರ ಬದಲು ಯಥಾಪ್ರಕಾರ 1930 ರಿಂದ ಇದುವರೆಗೆ ನಾಲ್ಕೂವರೆಯಿಂದ ಐದು ರೂಪಾಯಿವರೆಗೆ ವಸೂಲು ಮಾಡುತ್ತಿದ್ದಾರೆ. Demand is wrong ಆದ್ದರಿಂದ ದಯವಿಟ್ಟು ಇದನ್ನು ಆಲೋಚನೆ ಮಾಡಬೇಕಾಗಿದೆ.

ಇನ್ನು ಭತ್ತ ಮತ್ತು ಕಬ್ಬಿನ ಬೆಳೆಗೆ ಬಂದರೆ 1936ನೆಯ ಇಸವಿಯಲ್ಲಿ ಒಂದು ಸರ್ಕಾರಿ ಆಜ್ಞೆ ಹೊರಟಿದೆ. ಆಗ ಮಾಡಿರುವ ಕಾನೂನು ವಿಚಾರ ಹೇಳುತ್ತಿದ್ದೇನೆ. 1935ರಲ್ಲಿ ಒಂದು ಆರ್ಡರು ಹೊರಡಿಸಿದರು. ಅದರ ಪ್ರಕಾರ ಜೇಸಿಗೆ ಕಾಲದಲ್ಲಿ ಅಂದರೆ ನವೆಂಬರ್ ಒಂದನೆಯ ತಾರೀಖಿನ ದಿವಸ ಪ್ರತಿವರ್ಷ ಲೇಕ್‌ಲೆವಲ್ 120 ಅಡಿಗಳಿಗಿಂತ ಮೇಲಿದ್ದರೆ ಕನ್‌ಟಿನ್ಯೂಯಸ್ ವಾಟರ್ ಸಪ್ಲೈ ಕೊಟ್ಟು ಐದೂವರೆ ರೂಪಾಯಿ ವಸೂಲು ಮಾಡುತ್ತಿದ್ದರು. ಇನ್‌ಟರ್‌ಮಿಟೆಂಟ್ ಸಪ್ಲೈ ಅಂದರೆ ಐದು ದಿವಸ ನೀರು ಕೊಡುವುದು ಎಂಟು ದಿವಸ ನಿಲ್ಲಿಸುವುದು ಹೀಗೆ ಮಾಡಿದ ನಾಲ್ಕೂವರೆ ರೂಪಾಯಿ ವಸೂಲು ಮಾಡುತ್ತಿದ್ದರು. ಇದು ಭತ್ತ ಬೆಳೆಯುವುದಕ್ಕೆ ಅನ್ವಯಿಸುತ್ತದೆ. ಜಿ.ಒ. ನಂ. ಪಿ. ಡಬ್ಲ್ಯೂ. 2012–20/57 ದಿನಾಂಕ:7.2.1936 ಪ್ರಕಾರ ಈ ರೀತಿಯಿದೆ. ಇವತ್ತಿಗೂ ಈ ಆರ್ಡರನ್ನು ಬದಲಾವಣೆ ಮಾಡಿಲ್ಲ. ಭತ್ತ ಮತ್ತು ಕಬ್ಬಿಗೆ ಹೆಚ್ಚು, ಅಲ್ಲಿ ಯಾವ ನಮೂನೆ ಬೆಳೆ ಬೆಳೆಯುತ್ತಾರೋ ಅದಕ್ಕೆ ತಕ್ಕ ನೀರನ್ನೊದಗಿಸುವುದಕ್ಕೆ ಸಾಧ್ಯವಿಲ್ಲದೆ ಇಂಥ ಬೆಳೆ ಬೆಳೆಯಬೇಕೆಂದು ಗೊತ್ತು ಮಾಡಿದ್ದಾರೆ. 25 ಸಾವಿರ ಎಕರೆಗಳಿಗೆ ನೀರನ್ನೊದಗಿಸಬೇಕಾಗಿತ್ತು. ಅದು ಸಾಧ್ಯವಿಲ್ಲದೆ ಹತ್ತು ಸಾವಿರ ಎಕರೆಗಳಿಗೆ ಕೊಡಬೇಕೆಂದೆ ಗೊತ್ತು ಮಾಡಿದ್ದರು. ಆಮೇಲೆ ಹಾಗೆ ಮಾಡುವುದಕ್ಕೂ ಸಾಧ್ಯವಿಲ್ಲದೆ ಬೆಳೆ ರಿಸ್ಟ್ರಿಕ್ಟ್ ಮಾಡಿದರು. ಇದನ್ನು ಪ್ರೊಟೆಕ್ಟಿವ್ ಪ್ರಾಜೆಕ್ಟ್ ಎಂದು ಕರೆದು 1940 ರಿಂದೀಚೆಗೆ ಇದು ರೆಮ್ಯೂನರೇಟಿವ್ ಆಗಬೇಕೆಂದು ಒಂದು ಯೋಜನೆ ಮಾಡಿದ್ದಾರೆ. ಮೇಲೆ ಬೇಕಾದಷ್ಟು ಕೆರೆ ಕಟ್ಟೆಗಳಿದ್ದವು. ಅಲ್ಲಿಂದ ಬರುತ್ತಿದ್ದ ನೀರು ಕಡಿಮೆ ಮಾಡಿದ್ದಾರೆ; ಮದಗದ ಕೆರೆಯನ್ನು ಮೂರು ಅಡಿ ಎತ್ತರಿಸಿದ್ದಾರೆ. ಹೀಗೆ ಮಾಡಿ ರೆಮ್ಯೂನರೇಟಿವ್ ಆಗಬೇಕೆಂದು ಹೇಳುತ್ತಾ

ಕಂದಾಯ ಈ ರೀತಿ ವಸೂಲು ಮಾಡುತ್ತಿದ್ದಾರೆ. ಅದರಿಂದ ಮುಂದೆ ಹೋದರೆ 1940 ನೆಯ ಇಸವಿಯಲ್ಲಿ ಒಂದು ಆರ್ಡರ್ ಮಾಡಿ ಭತ್ತ ಮತ್ತು ಕಬ್ಬು ಬೆಳೆಯುವುದಕ್ಕೆ ಐದೂವರೆ ರೂಪಾಯಿ ಎಂದು ಮಾಡಿ ಬಾಕಿಯಾದ್ದಕ್ಕೆ ನಾಲ್ಕೂವರೆ ರೂಪಾಯಿ ವಿಧಿಸಿದರು.

ಹಿಂದಿನ ಕಾನೂನು ನೋಡಿದರೆ ಭತ್ತ ಮತ್ತು ಕಬ್ಬಿಗೆ ಇರಲಿಲ್ಲ. 1940 ನೆ ಇಸವಿಯಲ್ಲಿ ಆದ ಒಂದು ಆಜ್ಞೆಯ ಪ್ರಕಾರ ಭತ್ತ ಮತ್ತು ಕಬ್ಬಿಗೆ ನೀರು ಕಂದಾಯವನ್ನೂ ಬದಲಾಯಿಸಿದರು. ಇದು ಐದು ವರ್ಷಕ್ಕೆ ಆಗಬೇಕಾಗಿತ್ತು. ಆದರೆ 1947 ಇಸವಿಯವರೆಗೂ ಯಾವ ಬಗೆಯ ಆರ್ಡರನ್ನು ಮಾಡಿಲ್ಲ. ಆದುದರಿಂದ ನಾಲ್ಕುವರೆ ರೂಪಾಯಿಗೆ ಬದಲು ಐದು ರೂಪಾಯಿ ಮಾಡುವುದಕ್ಕೆ ಕಾನೂನು ಇರಲಿಲ್ಲ. ಭತ್ತ ಮತ್ತು ಕಬ್ಬಿಗೆ ಐದುವರೆ ರುಪಾಯಿ ಹೂಡಿದರು 1947ನೇ ಇಸವಿಯಲ್ಲಿ ಒಂದು ಕಾನೂನು ಮಾಡಿ ಅದನ್ನು retrospective effect ಆಗಿಕೊಟ್ಟರು retrospective effect ಮಾಡುವುದಕ್ಕೆ ಸರಕಾರ ಜನರಿಗೆ ಅಧಿಕಾರವಿದೆಯೇ? 1947ರಲ್ಲಿ ಮಾಡಿದಕಾನೂನು ಐದು ವರ್ಷಗಳವರೆಗೆ ಎಂದರೆ 1952 ರ ವರೆಗೆ ಇರುತ್ತೆ ಎಂದು ಲೆಕ್ಕ ಮಾಡಿದೆವು. ಆದರೆ 1947ರಲ್ಲಿ ಅದೇ ಆಜ್ಞೆ 1945 ರಿಂದ retrospective effect ಆಗಿ ಜಾರಿಗೆ ಬಂದರೆ 1950ಕ್ಕೆ ಮುಗಿದಿದೆ. ಅಲ್ಲಿಂದ ಇದುವರೆಗೂ ಐದೂವರೆ ರೂಪಾಯಿಗಳಂತೆ ಕಂದಾಯವನ್ನು ವಸುಲ್ ಮಡಿದ್ದಾರೆ. ಆ ರೀತಿ ಮಾಡಲು ಅಧಿಕಾರವಿಲ್ಲ. ಆದರೂ ಸಹ ಭತ್ತ ಕಬ್ಬು ಮತ್ತು ಇತರೆ ಎಲ್ಲಾ ಬೆಳೆಗಳಿಗೂ ಸಹ ಐದೂವರೆ ರೂಪಾಯಿಗಳಂತೆ ವಸೂಲ್ ಮಾಡಿದ್ದಾರೆ. ಕಾನೂನು ಪ್ರಕಾರ ಸರ್ಕಾರ ನಡೆಸಬೇಕು. It is a rule of Law; it is a rule of them and fancy ಕಾನೂನು ಪ್ರಕಾರ ನಾನು ಹೇಳುತ್ತಿದ್ದೇನೆ. ಆದುದರಿಂದ it is not the imagination or the order of the Government that rules this is the rule of law. ಕಾನೂನು ಪ್ರಕಾರ ನೆಡೆಯಬೇಕು. ಆದುದರಿಂದ ಇದುವರೆಗೂ ಹೆಚ್ಚಿಗೆ ವಸೂಲ್ ಮಾಡಿರತಕ್ಕದ್ದು ಅಕ್ರಮವಾಗಿದೆ. 1947ರಲ್ಲಿ ಆದ ಆಜ್ಞೆ 1945 ರಿಂದ retrospective effect ಉಳ್ಳದ್ದು ಎಂದರೆ 1950ಕ್ಕೆ ಇಲ್ಲದಿದ್ದರೆ 1952ಕ್ಕೆ ಮುಗಿಯಬೇಕು. ಈ ದೃಷ್ಟಿಯಿಂದ ಐದೂವರೆ ರೂಪಾಯಿಗಳಂತೆ ವಸುಲ್ ಮಾಡಿರುವುದರಲ್ಲಿ ಭತ್ತ, ಮತ್ತು ತರೀ ಬೆಳೆಗೆ ಎರಡೂವರೆ ರುಪಾಯಿಗಳಂತೆಯೂ ಮತ್ತು ಇತರೆ ಖುಷ್ಕಿ ಬೆಳೆಗೆ ನೀರನ್ನು ಬಿಟ್ಟುಕೊಂಡರೆ ಅದಕ್ಕೆ ಐದೂವರೆ ರೂಪಾಯಿಗಳಂತೆಯೂ ಹೆಚ್ಚಿಗೆ ವಸೂಲ್ ಮಾಡಿದ್ದಾರೆ. ಇದನ್ನೆಲ್ಲಾ ದಯವಿಟ್ಟು ವಿಚಾರಮಾಡಿ ವಾಪಾಸು ಕೊಡಬೇಕು. ಸರ್ಕಾರವನ್ನು ಅಸೆಂಬ್ಲಿ ಸದಸ್ಯರು control ಮಾಡುವವರಾಗಿದ್ದಾರೆ. ಆದುದರಿಂದ ತಾವೆಲ್ಲರು ಆಲೋಚನೆ ಮಾಡಿ ಈಗ ಪ್ರಜೆಗಳಿಗಿರತಕ್ಕ ಹಕ್ಕು ಅಥವಾ ಸರ್ಕಾರದ [illegible]ಕಾದ ನಂಬಿಕೆ ಎನ್ನತಕ್ಕ ದೊಡ್ಡ ಆಸ್ತಿಗೆ ಧಕ್ಕೆ ಬಂದಿದೆ. ಈ ದೃಷ್ಟಿಯಿಂದ ಈ ವಿಷಯವನ್ನು ತಾವು ಆಲೋಚನೆ ಮಾಡಬೇಕೆಂದು ತಮ್ಮಲ್ಲಿ ನಾನು ಅರಿಕೆ ಮಾಡಿಕೊಳ್ಳುತ್ತೇನೆ.

*  *  *  *  *

ಶ್ರೀ ಕೆ. ಕೆಂಚಪ್ಪ:- ಸ್ವಾಮಿ, ನಾನು ಈ ತಿದ್ದುಪಡಿಯನ್ನು ತರುವುದರ ಉದ್ದೇಶವಿಷ್ಟೆ. 10ನೆಯ ಕ್ಲಾಜಿನಲ್ಲಿ ನೀರಾವರಿ ಕಂದಾಯವನ್ನು ಹೇಗೆ ನಿಗದಿ ಮಾಡಬೇಕೆಂದು ಹೇಳಿದ್ದಾರೆ. (a) ನಲ್ಲಿ "Whenever water is made available by the government for the use of any benefited land in respect of which better contribution is levied" ಎಂದರೆ ಯಾವುದಾದರೂ ಜಮೀನಿಗೆ ಕಾಂಟ್ರಿಬ್ಯೂಷನ್ ಮೊಬಲಗನ್ನೂ ಹಾಕಿ ವಸೂಲು ಮಾಡಿದ್ದರೆ, ಅಂದರೆ ಕಾನೂನಿನ ಪ್ರಕಾರ ತಾನು ನೀರು ತೆಗೆದುಕೊಳ್ಳುತ್ತೇನೆಂದು ಒಪ್ಪಿಕೊಂಡು ಆ ಮೂಲಕ ಸರ್ಕಾರದವರು ಕೇಳಿರತಕ್ಕ ಕಾಂಟ್ರಿಬ್ಯೂಷನ್ ಮೊಬಲಗನ್ನು ಕೊಟ್ಟಿದ್ದರೆ, ನೀರನ್ನೂ ಕೊಡತಕ್ಕ ಉದ್ದೇಶದಿಂದ ಹಾಕಬಹುದು ಎಂದು ಹೇಳಿದೆ. ಆಮೇಲೆ (b) Clause ನಲ್ಲಿ "Whenever water is supplied are used for purposes of irrigation from any work belonging to or constructed by or on behalf of the government" ಎಂದರೆ ಯಾವುದಾದರೂ ಸರ್ಕಾರದವರು ಕಟ್ಟಿರತಕ್ಕ ಕೆರೆ ಅಥವಾ ನೀರಾವರಿ ಯೊಜನೆಗಳಿಂದ ಯಾವುದಾದರೂ ಜಂಇನಿಗೆನೀರನ್ನೂ ಒದಗಿಸಿ ಕೊಟ್ಟರೆ ಅಂಥ ಸಂದರ್ಭದಲ್ಲಿಯೂ ಕಂದಾಯವನ್ನು ತೆಗೆದುಕೊಳ್ಳಬೇಕೆಂದು ಹೇಳಿದೆ. ಜಮೀನುದಾರನಿಗೆ ಇಷ್ಟವಿರಲಿ ಇಲ್ಲದಿರಲಿ, ಅವನು ಒಂದು ವೇಳೆ ನೀರು ಬೇಕಿಲ್ಲವೆಂದು ಹೇಳಿದರೂ ಸಹ ಸರ್ಕಾರದವರು ನೀರನ್ನ ಒದಗಿಸುತ್ತಾರೆ. ನೀರು ಆಯುತ್ತದೆ ಎಂದು ಹೇಳಿ ನೀರಾವರಿ ಕಂದಾಯವನ್ನು ಕೊಡಬೇಕೆಂದು ಕೇಳುವ ಅರ್ಥ ಅಡಗಿದೆ. "Whenever water is used" ಎಂದರೆ ನೀರನ್ನು ಆಕಸ್ಮಾತ್ತಾಗಿ ಒಮ್ಮೆ ಉಪಯೋಗಿಸಿದ್ದರೂ ಸಾಕು, ಅಂಥ ಸಂದರ್ಭದಲ್ಲೂ ಕೊಡಬೇಕೆಂಬುದು ಸಾಧುವಲ್ಲ. ಒಂದು ವೇಳೆ ಆಕಸ್ಮಾತ್ತಾಗಿ ಉಪಯೋಗಿಸಿದ್ದರೆ ಅದು unauthorised cultivation ಆಗುತ್ತದೆ. ನೀರನ್ನು ಹಾಗೆ ಉಪಯೋಗಿಸಿದರೂ ಕಂದಾಯವನ್ನು ಕೊಡಬೇಕೆಂದು ಹೇಳುವುದಿಲ್ಲ. ನೀರನ್ನು ಅನುಮತಿಯಿಲ್ಲದೆ ಉಪಯೋಗಿಸಿದ್ದರೆ, ಅದಕ್ಕೆ ಕಂದಾಯ ವಸೂಲು ಮಾಡುವುದಿಲ್ಲ. ಹಾಕಬೇಕು ಸಂಬಂಧಪಟ್ಟ ಸ್ಥಳೀಯ ಅಧಿಕಾರಿಗಳು T.T. ಕೇಸ್‌ಗಳನ್ನ ಹಾಕುತ್ತಾರೆ.

ಆಮೇಲೆ (c) ಭಾಗವನ್ನು ನೋಡುವುದಾದರೆ, ಅಲ್ಲಿ "Whenever waterfrom any such work, by direct flow, or percolation or by indirect flow, percolation or drainage from or through adjoining land irrigates and land under cultivation or flows into a reservoir and thereafter,, by direct flow, or percolation or by direct flow, or drainage from or through adjoining land irrigates any land under cultivation and in the opinion of the collector such irrigation, is beneficial and sufficicient for the requirements of

crop in such land,-" ಇಂಥ ಸಂದರ್ಭದಲ್ಲಿಯೂ ಹಾಕುವುದಾಗಿಯೂ ಹೇಳಿದೆ. ಅಂದರೆ ಒಂದು ಜಮೀನಿನ ಸುತ್ತಲೂ ನೀರಾವರಿ ಜಮೀನು ಅವರಿಸಿಕೊಂಡು, ನೀರು ತನ್ನಷ್ಟಕ್ಕೆ ತಾನು ಆ ಜಮೀನಿಗೆ ಬರುತ್ತಿದ್ದರೂ ಆ ನೀರು ಅವನಿಗೆ ಇಷ್ಟವಿರಲಿ ಇಲ್ಲದಿರಲಿ ಆ ನೀರಿನ ಜಾಗನ್ನು ಕಷ್ಟಪಟ್ಟು ಹಿಡಿಸಿ ಬೆಳೆ ಬೆಳೆಯುತ್ತಿದ್ದರೂ ಆತನು ಕಂದಾಯ ಕೊಡಬೇಕೆಂಬುದು ಯಾವ ನೀತಿ ಈ ದೃಷ್ಟಿಯಿಂದ (b) ಮತ್ತು (c) ಗಳನ್ನು ತೆಗೆದುಬಿಟ್ಟರೆ ನಿರು ಬೇಕಿದ್ದರೆ ಕಾಂಟ್ರಿಬ್ಯೂಷನ್ ಕೊಟ್ಟು ತೆಗೆದುಕೊಳ್ಳುತ್ತಾನೆ ಇಲ್ಲದಿದ್ದರೆ ಇಲ್ಲ. ಬಾಕಿ ವಿಧದಲ್ಲೇನದರೂ ಉಪಯೋಗಿಸಿದ್ದರೆ ಮೂಲಕ ತೆಗೆದುಕೊಳ್ಳಬಹುದು. ಈ ದರಷ್ಟಿಯಿಂದ ಮತ್ತು ಗಳಿರುವುದು ಇಲ್ಲ. ಬಾಕಿ ವಿಧದಲ್ಲೇನಾದರೂ ಉಪಯೋಗಿಸಿದ್ದರೆ ಮೂಲಕ ತೆಗೆದುಕೊಳ್ಳಬಹುದು. ಈ ದೃಷ್ಟಿಯಿಂದ (b) ಮತ್ತು (c) ಗಳಿರುವುದು ಸರಿಯಿಲ್ಲ. ಅವುಗಳನ್ನು ಕೈ ಬಿಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

**ಕ್ಲಾಜ್‌ಗಳಲ್ಲಿ ಬಳಸಿರುವ ಪದಗಳ ಬಗ್ಗೆ ಎಚ್ಚರಿಕೆ ಶ್ರೀ ಕೆಂಚಪ್ಪ:-** 10ನೆಯ ಕ್ಲಾಜಿನ ಎರಡನೆಯ ಈ ಉಪಕರಣವನ್ನು ಓದಬೇಕಾಗುತ್ತದೆ. ಇಲ್ಲದೇ ಹೋದರೆ ಅದು ಅರ್ಥವಾಗುವುದಿಲ್ಲ.

"that for the aviodence of doubt, it is hereby declared that water rate available under this Act is not a tax on land but is a charge for the water supplied or used for the irrigation of lands"

If we read the clause with amendment, it reads thus:

"for the aviodence of doubt, it is hereby declared that water rate avaliable under this Act is not a tax land nor is a charge but assessment permanently fixed on lands benified by the use of the water of the works of government taken voluntarily by the holder of the land."

**ನೆರೆ ರಾಜ್ಯದಲ್ಲಿ 4ರೂ ಇಲ್ಲಿ 14** ಅದರ ಉದ್ದೇಶ ಇಷ್ಟೇ. ಮೊದಲೇ ಹೇಳಿದ ರೀತಿಯಲ್ಲಿ ಒಬ್ಬ ಮನುಷ್ಯ ನೀರು ತೆಗೆದುಕೊಳ್ಳಬೇಕೆಂದು ಇಷ್ಟ ಪಡದೇ ಇದ್ದರೂ ಸಹ ನೀರು ಕಂದಾಯ ನಿಗದಿ ಮಾಡುವುದು ಅಷ್ಟುನ್ಯಾಯವಲ್ಲ. ಇದುವರೆಗೂ ಆ ರೀತಿ ಮಾಡಲಿಲ್ಲ. ಈಗ ಆ ರೀತಿಮಾಡುವುದಕ್ಕೆ ಹೊಗುವುದು ಸರಿಯಲ್ಲ. ಈ ಪದದ ವಿಷಯದಲ್ಲಿ ಒಂದು ತಾಪತ್ರಯ ಆಗಿದೆ ಅದು ಏನೆಂದರೆ ನೀರಿನ ಕಂದಾಯ ಎಂದು ಇದೆ. ಅದು ಟ್ಯಾಕ್ಸ್ ಅಲ್ಲ. ಅದು ಚಾರ್ಜ್ ನೀರನ್ನು ಕೊಡುವುದಕ್ಕೆ ಪ್ರತಿಫಲ ಎನ್ನುವ ಪದವನ್ನು ಮತ್ತು ಬಾಗಾಯಿತು ಅಸೆಸ್‌ಮೆಂಟ್ ಎಂದು ಇರುತ್ತದೆ. ಏನಾದರೂ ಒಂದು ಹೊಟೆಲ್ ಇಟ್ಟರೆ, ಬಸ್ ಇಟ್ಟರೆ ಅದಕ್ಕೆ ಚಾರ್ಜ್ ಎಂದು ಹೇಳುತ್ತಾರೆ. ಆ ಭಾವನೆ ಇವರಲ್ಲಿರುವುದು ಬಹಳ ತಪ್ಪು. ಇಡೀ ಮೈಸೂರು ಸಂಸ್ಥಾನದಲ್ಲಿ 150 ವರ್ಷಗಳಿಂದಲೂ ಇದನ್ನೂ ಅಸೆಸ್‌ಮೆಂಟ್ ಎನ್ನುತ್ತಾರೆಯೇ ಹೊರತು ಟ್ಯಾಕ್ಸ್ ಎಂದು ಮಾಡಿಲ್ಲ. ಅಸೆಸ್ ಎಂದು ಹೇಳಿದರೆ ಕಂದಾಯಗಳನ್ನು ನಿಯಾಮಾವಳಿಗಳನ್ನನುಸರಿಸಿ ಹಾಕಬೇಕು ಎಂದು ಅರ್ಥ. ಮಾನ್ಯ ಮಂತ್ರಿಗಳು ಅಣೆಕ ನಿಯಾಮವಳಿಗಲನ್ನು ಮಾಡಿ ಸರ್ವೆ ಡಿಪಾರ್ಟಮೆಂಟಿನಿಂದ ಅವನ್ನು ತೆರೆಸಿಕೊಂಡು ಆಮೇಲೆ ಕಲೆಕ್ಟರುಗಲಿಂದ ಚಾರ್ಜನ್ನು ನಿಗದಿ, ಮಾಡುತ್ತೇವೆಂದು ಹೇಳಿದ್ದಾರೆ. ಆ ರೀತಿ ನಿಗದಿ ಮಾಡಿದ್ದಾರೆಯೇ ಎಂದು ಸರ್ವೇ ಇಲಾಖೆಗೆ ಹೋಗಿ ಅಳತೆ ಮಾಡಿನೋಡಿದರೆ, ಅದನ್ನು ಸರಿಯಾಗಿ ಮಾಡುತ್ತಾ ಇಲ್ಲ. 1948ನೆಯ ಇಸವಿಯಿಂದೀಚೆಗೆ ಹೆಚ್ಚಿಗೆ ಉತ್ಪತ್ತಿ ಮಾಡುವ ಮನೋಭಾವನೆ ಎದ್ದು ಕಾಣುತ್ತದೆ. ಇದು ತಪ್ಪು ; ಇದು ಒಳ್ಳೆಯದಲ್ಲ. ಜನರಿಗೆ ಹಿತಕರವಲ್ಲ. ಇದು ಅನೇಕ ಜನರಿಗೆ ಮಿಸ್ ಲಿಡ್ ಮಡುತ್ತದೆ. ಕೆಟ್ಟದಾರಿ ಹಿಡಿಸುತ್ತದೆ. ಹೊಟೆಲಿನಲ್ಲಿ ಸಣ್ಣ ವಡೆಗೆ ಸಣ್ಣ ಚಾರ್ಜ, ದೊಡ್ಡ ವಡೆಗೆ ದೊಡ್ಡ ಚಾರ್ಜಮಾಡುವ ರಿತಿಯಲ್ಲಿ ಈ ತೆರಿಗೆಯನ್ನು ಹಾಕಿದ್ದಾರೆ. ಅದು ಒಳ್ಳೆಯದಲ್ಲ ಎಂದು ನಾನು ಹೇಳುತ್ತೇನೆ.

ಆದುದರಿಂದ ಇದು ಸರಿಯಾದದ್ದಲ್ಲವೆಂದು ನಾನು ಹೇಳುತ್ತೆವೆ. ಅಸೆಸ್‌ಮೆಂಟ ನ್ನು ಹಾಕಬೇಕಾಗಿದ್ದರೆ ಸರ್ವೆ ಇಲಾಖೆಯವರಿಂದ ಅಳತೆ ಮಾಡಿಸಿ ನಂತರ ಇದನ್ನು ವಿಧಿಸಬೇಕಾದದ್ದು ಅಗತ್ಯ. ಆದ್ದರಿಮದ ಈ ತಿದ್ದುಪಡಿಯನ್ನು ಸರ್ಕಾರದವರೂ ಒಪ್ಪಿಕೊಳ್ಳಬೇಕೆಂದು ಹೇಳುತ್ತೇನೆ.

* * * * *

# ಕೃಷಿ ನೀರಾವರಿ

ಶ್ರೀ ಕೆ. ಕೆಂಚಪ್ಪ (ಹಿರಿಯೂರು):- ಸ್ವಾಮಿ ಜಮೀನು ಕಂದಾಯದ ಮೇಲ್ತೆರಿಗೆ ಎಂದು ಕರೆದುಕೊಂಡಿರುವ ಈ ಮಸೂದೆಯನ್ನು ವಿರೋಧ ಮಾಡುವುದಕ್ಕೆ ನಿಂತಿದ್ದೇವೆ. ಮುಖ್ಯವಾಗಿ ಈ ಮಸೂದೆಯಲ್ಲಿ Surcharge ಎನ್ನುವುದನ್ನು ಜಮೀನು ಕಂದಾಯದ ಮೇಲೆ ಹೇರಿದ್ದಾರೆ. ಜಮೀನು ಕಂದಾಯವೆನ್ನುವುದನ್ನು ಇಂಗ್ಲೀಷ್ ಪದವನ್ನು ಉಪಯೋಗಿಸುವುದಾದರೆ, assessment ಎಂದು ಕರೆಯಬಹುದು ಇದು tax levy ಅಥವಾ duty ಎಂಬುದರಲ್ಲಿ ಯಾವುದು, ಏನು ಎಂಬುದನ್ನು ಹೇಳುವುದಕ್ಕಾಗುವುದಿಲ್ಲ. ಕಂದಾಯ ಬಹುಕಾಲದಿಂದ ಸಮಾಜದಲ್ಲಿ ಜಾರಿಯಲ್ಲಿರುತ್ತದೆ. Tax ಎನ್ನತಕ್ಕ ರೂಪವಾಗಿಯೇ ಅಥವಾ assessment ಎನ್ನತಕ್ಕ ರೂಪವಾಗಿಯೋ ಎನ್ನುವುದನ್ನೂ ಯಾವ ಕಾನೂನಿನಲ್ಲಿಯೂ ಮೊದಲಿನ ಲಾಗಾಯ್ತು ನಿಗದಿ ಮಾಡಿಲ್ಲ. ಈಗ ನಮ್ಮ ಹಿಂದೂಸ್ಥಾನದ ಶಾಸನದ ಪ್ರಕಾರ ಯಾವುದನ್ನು ಟ್ಯಾಕ್ಸ್ ಅಥವಾ ಕರ ಎಂದು ಜನರ ಮೇಲೆ ಹಾಕಬೇಕಾದರೂ ಸಹ ಅದರ ದರವನ್ನೂ ಕಾನೂನು ರೀತ್ಯಾ ನಿಗದಿ ಮಾಡದೇ ಹೋದರೆ ಅದು ಸರಿಹೋಗುವುದಿಲ್ಲ. ಅದನ್ನು ಅವಲಂಬಿಸುವುದು ಕಾನೂನು ಬದ್ಧವಾಗುವುದಿಲ್ಲವೆನ್ನುವ article ಇದೆ. ನಮ್ಮ ಹಿಂದೂಸ್ಥಾನದ ರಾಜ್ಯಾಂಗದ 246ನೇ ಆರ್ಟಿಕಲ್ ಮತ್ತೊಂದು ವಿಚಾರವನ್ನೂ ಒಳಗೊಂಡಿದೆ. ಅದೇನೆಂದರೆ ಯಾವುದಾದರೂ ಒಂದು ಸಂಸ್ಥಾನ, ಅಥವಾ ರಾಜ್ಯ ಶಾಸನ ಸಭೆ ಏನಾದರೂ ಒಂದು ಕರವನ್ನು ಅಥವಾ ತೆರಿಗೆಯನ್ನೂ ನಿಗದಿ ಮಾಡಬೇಕಾದರೆ, ಅದರ ಮೊತ್ತವನ್ನು ನಿಗದಿ ಮಾಡಬೇಕಾದರೆ, ಅದು ಏಳನೆಯ ಷೆಡ್ಯೂಲಿನ ಎರಡನೆಯ ಪಟ್ಟಿಯಲ್ಲಿ ಯಾವುದಾದರೂ ಒಂದು ಭಾಗದಲ್ಲಿ ಬರಬೇಕು. ಇದನ್ನೂ ನಾನು ತುಂಬಾ ಆಲೋಚನೆ ಮಾಡಿನೋಡಿದೆ. ಈ ಪಟ್ಟಿಯಲ್ಲಿ ಅಂಥಾದ್ದು ಯಾವುದೂ ಇಲ್ಲ. ಆದುದರಿಂದಲೇ ನಮ್ಮ ಸನ್ಮಾನ್ಯ ರೆವಿನ್ಯೂ ಮಂತ್ರಿಗಳನ್ನು ನಾನು ಕೇಳಿದೆ. ಇದು Land revenue ಎಂದು ಹೇಳುತ್ತೀರಲ್ಲ. ಇದನ್ನು Land revenue ಅಲ್ಲವೆಂದು explanation ನಲ್ಲಿ ಏಕೆ ಕರೆದಿದ್ದೀರಿ. ನಿಮ್ಮ ಈ ಟ್ಯಾಕ್ಸ್ ಏನಿದೆ ಅದು Land revenue ಅಲ್ಲವೆಂದರೆ ಮತ್ತೆ ಏನು ಎನ್ನುವ ವಿವರಗಳನ್ನು ಅವರಿಂದ ಪಡೆಯಬೇಕು ಎಂದು ಪ್ರಯತ್ನ ಪಟ್ಟೆ....

ಕಡಿದಾಳ್ ಮಂಜಪ್ಪ:- ನೀವು ಹೇಳಿದ್ದು ಅರ್ಥವಾಗಲಿಲ್ಲ. ಈಗಲಾದರೂ ಹೇಳುತ್ತೀರಾ?

ಶ್ರೀ ಕೆ. ಕೆಂಚಪ್ಪ:- ಮೂರನೆಯ ಕ್ಲಾಜಿನಲ್ಲಿ ಎನ್ನುವುದರಲ್ಲಿ ಒಂದನೆಯ ಉಪಕಲಮಿನಲ್ಲಿ ಹೇಳಿರುವುದನ್ನು ಪ್ರಸ್ತಾಪಿಸಿದ್ದೇನೆ ಅದರಲ್ಲಿ ಈ ರೀತಿ ಇದೆ.

"Land revenue remitted shall not be deemed to the land revenue payable for the purposes of this sub-section."

ಕಡಿದಾಳ್ ಮಂಜಪ್ಪ:- ಲ್ಯಾಂಡ್ ರೆವಿನ್ಯೂರಿಮಿಷನ್ನನ್ನು ಡಿಸ್ಟ್ರೆಸ್ಸು ಕಂಡೀಷನ್ನು ಅಥವಾ ಇನ್ನು ಯಾವುದಾದರೂ ಕಾರಣಗಳಿಂದ ಲ್ಯಾಂಡ್ ರೆವಿನ್ಯೂರಿಮಿಷನ್ನು ಆಗಿದ್ದರೆ ಅದಕ್ಕೆ ಸರ್ ಚಾರ್ಜನ್ನು ಹಾಕುವುದಿಲ್ಲ. ಒಂದು ಸಾರಿ ರಿಮಿಷನ್ನು ಮಾಡಿದ್ದರೂ ಅದರ ಮೇಲೂ ಸರ್ ಚಾರ್ಜ ಹಾಕುವುದಿಲ್ಲ. ಅದಕ್ಕಾಗಿ Land revenue remitted shall not be deemed to the land revenue payable for the purposes of this sub-section ಎಂದಿದೆ.

ಶ್ರೀ ಕೆ. ಕೆಂಚಪ್ಪ:- ಈ ಒಂದು ನಮೂನೆಯ ಡೆಫಿನಿಷನ್ನನ್ನು ಮಾಡತಕ್ಕದ್ದು ತರ್ಕ ಶಾಸ್ತ್ರದಲ್ಲಿನ ಯಾವ ಕಲಮಿನಲ್ಲಿದೆಯೋ ನನಗೇನೋ ಗೊತ್ತಾಗುವುದಿಲ್ಲ. ನಾನು ತಿಳಿದುಕೊಂಡಿರುವುದು "ಬಿಳೀದು" ಎಂದು ಇದ್ದರೆ ಇದಕ್ಕೆ ಡೆಫಿನಿಷನ್ನನ್ನು ಮಾಡುವುದಕ್ಕೆ ಬರುವುದಿಲ್ಲ. ಇಂತಹ ಒಂದು ವಿಚಾರ ಇದೆ ಇಲ್ಲಿ. ಕತ್ತೆ ಎಂದರೆ ಏನು ಎಂದರೆ, ಕುದುರೆ ಅಲ್ಲ ಎನ್ನುವುದು ಗೊತ್ತು. ಹಾಗಿದ್ದರೆ ಕತ್ತೆಯನ್ನು ಕುದುರೆ ಎಂದು ಹೇಳುತ್ತಾ ಹೋಗುವುದಕ್ಕೆ ಇಲ್ಲಿದೆ. ಇಲ್ಲಿ ಒಂದು ವಿಚಾರ ತಮಗೆ ಹೇಳುತ್ತೇನೆ. Surcharge Definition ನ್ನು ಡಿಫೈನ್ ಮಾಡುವಾಗ ಮುಖ್ಯವಾಗಿ ಇದು ತೆರಿಗೆಯೋ ಸೆಸ್ಸೇ, ಅಸೆಸ್‌ಮೆಂಟ್ ಎನ್ನುವುದೇ ಅಥವಾ ಇನ್ನೇನಾದರೂ ಅರ್ಥ ಇದೆಯೇ ಇದಕ್ಕೆ. ಅನೇಕ ಕಾನೂನುಗಳಲ್ಲಿ ಬೇಕಾದಷ್ಟು ಅಭಿಪ್ರಾಯಗಳಿದ್ದರೂ ಕೆಲವಾರು ಅಭಿಪ್ರಾಯಗಳನ್ನು ನಿಗದಿ ಮಾಡುತ್ತಾರೆ. ಈ ರೀತಿಯಾಗಿ ನಿಗದಿ ಮಾಡಬೇಕಾದರೆ ಯಾವುದಾದರೂ ಶಾಸನದ ಕಲಮನ್ನು ಅನುಸರಿಸಿ ಹೇಳಬೇಕಾಗುತ್ತದೆ. ತಾವು ಇಲ್ಲಿ ಯಾವುದಕ್ಕೆ ಅನ್ವಯಿಸುತ್ತಿದ್ದೀರೋ ನನಗೆ ಹೇಳುವುದಕ್ಕೆ ಸಾಧ್ಯವಾಗಿಲ್ಲ. ತಾವು ಡಿಫೈನ್ ಮಾಡುವಾಗ ಎರಡನೇ ಕ್ಲಾಜಿನಲ್ಲಿ (4)ನೇ ಸಬ್ ಕ್ಲಾಜಿನಲ್ಲಿ 'Surcharge' Means the Surcharge and additional surcharge on Land revenue levied under Section 3. ಎಂದಿದೆ.

ನಾನು ಹೇಳುವುದು "ದ್ವೈತಿಮಶಾತರ ಗಣಾದಿವಾಃ" ಎನ್ನುವಂತೆ ವಿಘ್ನೇಶ್ವರನನ್ನು ಮಾಡುತ್ತೇನೆಂದು ಹೇಳುತ್ತಾ ಹೋಗುವುದು ಎಷ್ಟು ಸಮಂಜಸವಾದುದು. ಆ ಈಶ್ವರನಿಗೇ ಗೊತ್ತು. (ನಗು) ಇಲ್ಲಿ ಡೈಫೈನು ಮಾಡಿರತಕ್ಕ ವಿಧದಿಂದ ಟ್ಯಾಕ್ಸು ಆದರೆ ನೀವು ಈ ರೀತಿ ಪ್ರಕಾರ ಟ್ಯಾಕ್ಸು ಅಲ್ಲದೇ ಹೋದರೆ ಇನ್ನು ಏನು ಎನ್ನುವುದನ್ನು ಆಲೋಚನೆ ಮಾಡಬೇಕಾಗಿ ಬರುತ್ತದೆ. ಹಿಂದೂಸ್ಥಾನದ ಲ್ಯಾಂಡ್ ರೆವಿನ್ಯೂ ಎಂದರೆ ಜಮೀನು ಕಂದಾಯವನ್ನು ನಮೂದು ಮಾಡುವಾಗ ಟ್ಯಾಕ್ಸು ಎಂದು ಇರುವುದರಿಂದ, ಈ ರೀತಿಯಾಗಿ ಬದಲಾವಣೆಯಾಗಿ ಯಾವ ದಿವಸದಿಂದ ನಮ್ಮ ಹಿಂದೂಸ್ಥಾನದಲ್ಲಿರುವ ಒಂದು ನಮೂನೆ ಇದು. ಅಸೆಸ್ಸುಮೆಂಟು, ಸರ್ವೆ ಸೆಟಲ್‌ಮೆಂಟು ಮಾಡಿಲ್ಲ. ಇದಕ್ಕೆ ಬೇಕಾಗುವ ಅನೇಕ ನಿಬಂಧನೆಗಳನ್ನು ಮಾಡಿಲ್ಲ. ಈ ಪ್ರಕಾರ ಮಾಡುವುದರಿಂದ ಎಷ್ಟೋ ಆಕ್ಷೇಪಣೆಗಳು ಬರಲವಕಾಶವಾಗುತ್ತದೆ. ಇದನ್ನು ಸಮನ್ವಯ ಮಾಡಬೇಕೆಂದು ಸರಕಾರಿ ಆರ್ಡರುಗಳನ್ನು ಮಾಡುತ್ತಾ ಬಂದಿದ್ದಾರೆ. ಇದಕ್ಕೆ ಹಿಂದೂಸ್ಥಾನದ ರಾಜ್ಯಾಂಗ ಶಾಸನದ 227ನೇ ಆರ್ಟಿಕಲ್ಲಿನ ಪ್ರಕಾರ ಎಂದರೆ, ಆ ಸಂಸ್ಥಾನದ ಯಾವುದಾದರೂ ಕಾನೂನು

ಜಾರಿಯಾಗುವುದಕ್ಕೆ ಮುಂಚೆ ಅದು ಜಾರಿಯಲ್ಲಿದ್ದರೆ, ಅದು ಶಾಸನವಾಗಿ ಉಳಿಯುತ್ತದೆಯೇ? ಇಲ್ಲ ಎಂದು ನಾನು ಭಾವನೆ ಮಾಡಿಕೊಳ್ಳುತ್ತೇನೆ. 227ನೇ ಆರ್ಟಿಕಲ್ಲಿನ ಪ್ರಕಾರ ಶಾಸನ ಇತ್ತೋ ಇಲ್ಲವೋ ಎನ್ನುವುಕ್ಕೆ ಇದರಲ್ಲಿ ನಿಗದಿಯಾಗಿ ಒಂದು ಮಿತಿಯನ್ನು ಹಿಂದೆ ಮಾಡಿರಲಿಲ್ಲ. ಆಗಿಂದಾಗ್ಗೆ ಸರಕಾರದವರು ನಿಗದಿ ಮಾಡಿರುತ್ತಾರೆ. ಈಗ ಇದಕ್ಕೇನು ಹೇಳುತ್ತಾರೆ. 227ನೇ ಆರ್ಟಿಕಲ್ಲಿನ ಪ್ರಕಾರ ಯಾವ ರೀತಿಯಾಗಿ ಕಂಟ್ರೋಲ್ ಮಾಡುತ್ತಾರೆ? ಇದು ಅನ್ಯಾಯದ ತೆರಿಗೆ ಎನ್ನುವುದನ್ನು ತಾವು ಆಲೋಚನೆ ಮಾಡಬೇಕಾಗುತ್ತದೆ. ಈ ಶಾಸನ ಎನ್ನುವುದು ಸರ್ ಚಾರ್ಜ ಎಂದು ಮಾತ್ರವಿದೆ. ಬಡವರ ಮೇಲೆ ಬೀಳುವುದಿಲ್ಲ. ಬಲ್ಲಿದರ ಮೇಲೆ ಬೀಳುತ್ತದೆ. ಇದರ ಮೇಲೆ ಇಷ್ಟೊಂದು ವ್ಯಾಖ್ಯಾನ ಮಾಡುವುದು ಸರಿಯೇ ಎಂದು ತಾವು ಆಲೋಚನೆ ಮಾಡುವುದಾದರೆ, ಮೈಸೂರು ಸಂಸ್ಥಾನದ ಎರಡು ಕೋಟಿ ಜನರಲ್ಲಿ ಶೇಕಡ ತೊಂಬತ್ತರಷ್ಟು ಜನರ ಮೇಲೆ ಇದು ಬಿದ್ದೇಬೀಳುತ್ತದೆ. ಇದರಲ್ಲಿ ತಾವು ಹೇಳುವ ರೀತಿಯಾಗಿ ಇಪ್ಪತ್ತು ರೂಪಾಯಿಗಳಿಗೆ ಮೇಲ್ಪಟ್ಟು ಕಂದಾಯ ಕೊಡತಕ್ಕ ಜನರೇ ಬಹಳ ಹೆಚ್ಚು ಇದಕ್ಕಿಂತ ಕಡಿಮೆ ಕಂದಾಯ ಕೊಡುವವರು ಬಹಳ ಕಡಿಮೆ. ಇದರೊಳಗೆ ನೀರಾವರಿಗೂ ಟ್ಯಾಕ್ಸನ್ನು ಸೇರಿಸಿದ್ದೀರಿ. ಈ ರೀತಿಯಾಗಿರುವ ಡೆಫಿನಿಷನ್ನಿನ ಅರ್ಥವೇನು ಎನ್ನುವುದು ಗೊತ್ತಾಗುವುದಿಲ್ಲ. ಇದರಲ್ಲಿ ಹೀಗಿದೆ.

(2) "Land revenue" means all sums and payments received or claimable as land revenue or as jodi. jodi, quit went katubadi or other amount of like nature, by whatever name called by or on behalf of government from any person on account of land held by or vested in him includes water cess water ratio or irrigation cess payable to the government for supplied or used for the irrigation of land where such cess or rate does not exceed fifteen rupees per acre, but" does not include any other cess or surchage payable on land revenue. ಹದಿನೈದು ರೂಪಾಯಿಗಿಂತ ಹೆಚ್ಚಿನ ಕಂದಾಯ ಆಗದೇ ಹೋದರೆ ಆಗ ಅದಕ್ಕು ಅನ್ವಯಿಸುತ್ತದೆ. ಸೆಸ್ಸು ಎನ್ನತಕ್ಕದ್ದು 15 ರೂಪಾಯಿಗಳಿಗಿಂತ ಹೆಚ್ಚು ಆಗುವುದಿಲ್ಲ. ಇರಿಗೇಷನ್ ಸೆಸ್ಸು ಹದಿನೈದು ರೂಪಾಯಿಗಿಂತ ಹೆಚ್ಚು ಮಾಡುತ್ತಾ ಹೊದರೆ, ಅದಕ್ಕಿಂತ ಕಡಿಮೆ ಇರುವವರು ಎಲ್ಲಿಗೆ ಹೋಗುತ್ತಾರೆ? ಈಗ ವಾಟರ್ ರೇಟು ಹದಿನೈದು ರೂಪಾಯಿಗಿಂತ ಹೆಚ್ಚಿಗೆ ಎಲ್ಲಿದೆಯೋ ನನಗೆ ಗೊತ್ತಿಲ್ಲ. ಅದುದರಿಂದ ಇದರ ಅರ್ಥವೇನು? ಯಾರಿಗಾದರು ಮೂರು ಎಕರೆ ಇದ್ದರೆ, ಒಂದು ಎಕರೆ ಕಂದಾಯ ಎಂದು ಲೆಕ್ಕಹಾಕಿಕೊಂಡು ಮುರು ರೂಪಾಯಿ ಚಾರ್ಜು, $5^1/_2$ ಅಥವಾ ಆರು ವಾಟರು ರೇಟು, ಹೀಗೆಲ್ಲ ಹಾಕಿದರೆ ಇಪ್ಪತ್ತು ರೂಪಾಯಿಗಳಿಗೆ ಮೇಲ್ಪಟ್ಟು ಹೋಗುತ್ತದೆ. ಎಂದು ಈ ರೀತಿಯಾದ ಶಾಸನಮಾಡಿಕೊಂಡು ಹೋದರೆ ಸಾಕು. ಅದಕ್ಕೆ ನಾನು ಹೇಳುವುದು. ರೈತನ ಮೇಲೆ ಇಂತಹ ಹೆಚ್ಚಿನ

ಹೊರೆಗಳನ್ನು ಹಾಕುತ್ತಾ ಹೋದರೆ ಅವನಿಗೆ ಕಡಿಮೆ ಮಾಡಿದ್ದೇನು? ಇದು ಹೇಗಿದೆ ಎಂದರೆ. "It is more imaginary than real" ಇದರ ಮೇಲೂ ತಾವು ತಮ್ಮ ಅಧೀನದಲ್ಲಿರುವ ಅಧಿಕಾರಿಗಳ ಕಡೆಯಿಂದ ಮಾಡಿರತಕ್ಕ ಸರಕಾರಿ ಆರ್ಡರುಗಳು ಹೀಗಿದ್ದರೆ, ಎಂದು ತಿದ್ದುಪಡಿಯನ್ನು ಮಾಡುತ್ತಾ ತಮಗೆ ಏನು ಬೇಕಾದರೂ ಮಾಡಿಬಿಡಬಹುದು. ನಿದರ್ಶನವಾಗಿ ಹೇಳುವುದಾದರೆ, ನಮ್ಮ ಹಿರಿಯೂರು ಬಳಿ ಇರುವ ವಾಣಿ ವಿಲಾಸ ಸಾಗರದಿಂದ 1958ರಲ್ಲಿ ಜನಕ್ಕೆ ಯಾವ ರೀತಿಯಾಗಿ ಅಚ್ಚುಕಟ್ಟು ಮಾಡಿದರು ಎಂದರೆ.....

ಕಡಿದಾಳ್ ಮಂಜಪ್ಪ:- ಐದು ರೂಪಾಯಿಗಿಂತ ಹೆಚ್ಚಾಗಿ ಯಾವ ಕಡೆಯಲ್ಲಿಯೂ ಕಡಿಮೆ ವಾಟರು ರೇಟು ವಾಣಿವಿಲಾಸ ಸಾಗರದ ಕೆಳಗಿರುವ ಜಮೀನುಗಳಿಗಿದೆಯಲ್ಲಾ (ನಗು)

ಶ್ರೀ ಕೆ. ಕೆಂಚಪ್ಪ:- Where reasons fail, abuses begin, ಎಂದು ಹೇಳಬೇಕಾಗುತ್ತದೆ. ನಾನು ಹೇಳುವುದು ಮೈಸೂರು ಸಂಸ್ಥಾನದಲ್ಲಿ ಇಲ್ಲ. ಐದುವರೆ ರುಪಾಯಿ ಹಾಕಿದ್ದೀರಿ. ಐದುವರೆ ರೂಪಾಯಿಗಿಂತ ಮೇಲ್ಪಟ್ಟು ವಾಣಿ ವಿಲಾಸ ಸಾಗರದಲ್ಲಿ ಹಾಕಿದ್ದಾರೆ. ಅದಕ್ಕಾಗಿ ಹೇಳುತ್ತಿರುವುದು ಒಂದು ವರ್ಷದಲ್ಲಿ ಎಷ್ಟು ಸಾರಿ ಹಾಕುತ್ತಿದ್ದೀರಿ? ಎಂದು ಲ್ಯಾಂಡ್ ರೆವಿನ್ಯೂ ಕೋಡಿನಂತೆ ಇರುವ ಲ್ಯಾಂಡ್ ರೆವಿನ್ಯೂನಲ್ಲಿನ ಪ್ರಕಾರ ಕಂದಾಯ ಹಾಕಬೇಕು. ಕಂದಾಯವನ್ನು ಸಕಾಲದಲ್ಲಿ ನಿಗದಿಮಾಡಬೇಕು. ಮೊದಲ ಸಾರಿ ಡೆಪ್ಯೂಟಿ ಕಮಿಷನರು ಹೋಗಿ ಅದರ ಮೇಲೆ ಸ್ವಲ್ಪ ದಿವಸಗಳೊಳಗಾಗಿ ಎಂದರೆ ತರಿ ಕಂದಾಯವನ್ನು ಮಾಡಬೇಕೆಂದು ಲ್ಯಾಂಡ್ ರೆವೆನ್ಯೂರೂಲ್ಸ್‌ನಲ್ಲಿ, 32ನೇ ರೂಲಿನಲ್ಲಿದೆ. ಅದರಲ್ಲಿ ಹೀಗಿದೆ.

1916ನೇ ಇಸವಿಯಲ್ಲಿ ವಾಣಿವಿಲಾಸ ಸಾಗರದಲ್ಲಿನೀರು ಕೊಟ್ಟಿದ್ದು 1958ನೇ ಇಸವಿಯಲ್ಲಿ ಸೆಪ್ಟೆಂಬರ್ ಇದನ್ನು ಹೆಚ್ಚಿಸಿದ್ದು ಅಲ್ಲದೆ 1960ನೇ ಇಸವಿ ಫೆಬ್ರವರಿ ತಿಂಗಳಿನೊಳಗೆ ನಾಲ್ಕೂ ಸಾರಿ ವ್ಯತ್ಯಾಸ ಮಾಡಿದ್ದಾರೆ. ಇದು ತಮ್ಮ ಲ್ಯಾಂಡ್ ರೆವುನ್ಯೂ ನಿದರ್ಶನ ದೃಷ್ಟಿಯಿಂದಲೋ ಅಥವಾ ಯಾವುದಾದರೂ ಒಂದು ತತ್ವದಿಂದಲೊ ಎಂದು ನಾನು ಪ್ರಶ್ನೆಕೇಳಬೇಕಾಗಿದೆ. ಒಟ್ಟಿನಲ್ಲಿ ಜಮೀನಿನ ಕಂದಾಯವನ್ನು ಪದೆ ಪದೇ ಬದಲಾವಣೆ ಮಾಡಬೇಡಿ. ರೈತವಾರಿ ಸಿಸ್ಟಂನಲ್ಲಿರತಕ್ಕ ವ್ಯವಸಯ ವರಮಾನದಲ್ಲಿ ಈ ರೀತಿ ಬದಲಾವಣೆ ಮಾಡುವುದರಿಂದ ರೈತ ನಿಜವಾಗಿ ತನ್ನ ಜಮೀನಿನಲ್ಲಿ ನಂಬಿಕೆ ಇಲ್ಲದೆ ತನ್ನ ಜಮೀನನ್ನು ಅಭಿವೃದ್ಧಿಗೆ ತರುವುದಿಲ್ಲ. ಅದರಿಂದ ವ್ಯವಸಾಯ ಅಭಿವೃದ್ಧಿಯಾಗುವುದಿಲ್ಲ. ಇದಕ್ಕೋಸ್ಕರ ಸ್ಟೇಟ್‌ಮೆಂಟ್ ಕೊಡಬೇಕು ಎಂಬುದು ಕೆಲವರ ದೃಷ್ಟಿಯಿಂದ ಸರಿಯಾಗಿರಬಹುದು. ಅವರುಗಳಿಗೆ ಖಾಯಂ ಸೌಕರ್ಯವನ್ನು ಒದಗಿಸಬೇಕು ಜಮೀನುಗಳ ಮೇಲೆ ಸರ್ವೆ ಮಾಡತಕ್ಕ ಕಾರ್ಯದ ಬಗ್ಗೆ ನಾನಾ ನಮೂನೆಯಾಗಿರತಕ್ಕ ಕಾನೂನುಗಳನ್ನು ಅನುಸರಿಸಿ ಹೆಚ್ಚಿಗೆ ಮಾಡಬೇಕು. ಇಲ್ಲದೆ ಹೋದರೆ ಜಮೀನುಗಳ ಮೇಲೆ ಅವರಿಗಿರತಕ್ಕ ಖಾಯಂ

ಅಧಿಕಾರ ಹೋಗುತ್ತದೆ. ಇವರಿಗೆ ಜಮೀನು ಉಳಿಯುವುದಿಲ್ಲ. ವ್ಯವಸಾಯವನ್ನು ಅವನು ಅಭಿವೃದ್ಧಿ ಮಾಡುವುದಿಲ್ಲ. ವ್ಯವಸಾಯವೇ ಹಾಳಾಗುತ್ತದೆ. ಅ ಆ – ಇ ಈ ಮೊದಲ್ಗೆಂಡು ರೈತವಾರಿ ಸಿಸ್ಟಂನಲ್ಲಿ ಉಪೇಕ್ಷೆ ಮಾಡಿದಂತಾಗುತ್ತದೆ. 1958ನೇ ಸೆಪ್ಟೆಂಬರ್ ಐದುವರೆ ರೂಪಾಯಿ ನೀರಾವರಿ ಕಂದಾಯ ಇದ್ದುದು. 1960ನೇ ಇಸವಿಯಲ್ಲಿ 25 ರೂಪಾಯಿಗಳ ನೀರಾವರಿ ಕಂದಾಯ ಬಾಗಾಯಿತು ಜಮೀನಿಗೆ ಹಾಕಿದ್ದೇವೆ. ಎಮದು ಹೇಳುತ್ತಿದ್ದೀರಿ ಆದ್ದರಿಂದ ಈಗ ನಿಮ್ಮ ಸರ್ ಚಾರ್ಜ ಇದರಿಂದ ಹೋಗುತ್ತದೊ ಏನೋ ಗೊತ್ತಿಲ್ಲ. ಈ ಮಟ್ಟದಲ್ಲಿ ನಾವು ಆಲೋಚನೆ ಮಾಡುತ್ತಿದ್ದೇವೆ. ಮುಖ್ಯವಾಗಿ ನಾನು ಇದನ್ನು ಏತಕ್ಕೆ ಹೇಳುತ್ತಿದ್ದೇನೆಂದರೆ ಈ ರೀತಿ ಒಂದು ಸರ್ ಚಾರ್ಜ್ ಎಂಬ ಪದವನ್ನು ಇದರಲ್ಲಿ ಹಾಕುವಾಗ ಇದು ಎಷ್ಟರಮಟ್ಟಿಗೆ ಜನರ ಹಿತವನ್ನು ರಕ್ಷಣೆ ಮಾಡುತ್ತದೆಂಬುದನ್ನು ಏನಾದರೂ ಆಲೋಚನೆ ಮಾಡಿದ್ದೀರಾ? ಎಷ್ಟರಮಟ್ಟಿಗೆ ಅವರಿಗೆ ತಿಂಗಳಿಗೆ ಸರಾಸರಿ ಉತ್ಪತ್ತಿ ಇದೆ, ವರ್ಷಕ್ಕೆ ಸರಾಸರಿ ಉತ್ಪತ್ತಿ ಎಷ್ಟು ಅದೇ ರೀತಿ ಖರ್ಚು ಎಷ್ಟಿದೆ ಎಂಬುದನ್ನು ನೋಡಬೇಕು. ಮತ್ತು ಅಂಥಾದ್ದನ್ನು ಅದನ್ನು ಯಾವರೀತಿ ನಿಭಾಯಿಸಬೇಕು ಎಂಬುದನ್ನು ತಾವು ಆಲೋಚನೆ ಮಾಡಬೇಕು. ನಿಜವಾಗಿ ಅವರಿಗೆ ಈಗಿನ ತೆರಿಗೆಗಳನ್ನು ಕೊಡುವುದಕ್ಕೆ ಶಕ್ತಿ ಇದೆಯೇ ಇಲ್ಲವೇ ಎಂಬುದನ್ನು ತಾವು ಆಲೋಚನೆ ಮಾಡಬೇಕು. ಈ ದೃಷ್ಟಿಯಿಂದ ನಾನು ಹೇಳುವುದೇನೆಂದರೆ ಆ ಮಟ್ಟದಲ್ಲಿ ಈ ರೀತಿಯಾದಂತೆ ಅಡ್ಡಿ ಆತಂಕಗಳು ಇರುವಾಗ ಈ ಸೆಸ್ಸನ್ನು ಬೇರೆ ಹಾಕಿದರೆ ರೈತಾಪಿ ಜನರು ಅಭಿವೃದ್ಧಿಯಾಗುವುದಿಲ್ಲ. ರೈತನಿಂದ ಬರತಕ್ಕ ಕಾಳು ಕಡ್ಡಿ ಕಡಿಮೆ ಬಂದು ಅವರಿಂದ ದೇಶಕ್ಕೆ ಕಲ್ಯಾಣವನ್ನುಂಟುಮಾಡುವುದಕ್ಕೆ ಬದಲು ದೇಶವನ್ನು ಹಾಳುಮಾಡುವುದಕ್ಕೆ ನೀವೇ ಕಾರಣರಾಗುತ್ತೀರಿ. ಎಂದು ಹೇಳಿದರೆ ಅದೇನು ತಪ್ಪಾಗಲಿಕ್ಕಿಲ್ಲ. ಇದರಿಂದ ಇತ್ತೀಚೆಗೆ ಬೆಳೆಯುವ ದಿನಸಿಗಳನ್ನೆ ಕಡಿಮೆ ಮಾಡುತ್ತಿದ್ದಾರೆ. ಅನೇಕ ಆಹಾರ ಪದಾರ್ಥಗಳ ಬೆಳವಣಿಗೆಯೇ ಹಾಳಾಗಿ ಹೋಗುತ್ತದೆ. ಇದು ಖಡಾಖಂಡಿತ. ಇದರಲ್ಲೇನು ಬದಲಾವಣೆಯಿಲ್ಲ. ಇಂಥಾದ್ದನ್ನು ಸರ್ಕಾರದವರು ತೀವ್ರಾಲೋಚನೆಯಿಂದ ಮಾಡಬೇಕು ಸರ್‌ಚಾರ್ಜ್ ಎಂಬ ಪದ ಬಹಳ ಅನ್ಯಾಯದ ಪದ. ಮೇಲ್ತೆರಿಗೆ ಎಂದೂ ಎಲ್ಲೂ ಇಲ್ಲ. ಈ ರೀತಿಯಾದ ತೆರಿಗೆ ಹಾಕುವುದು ಖಂಡಿತ ಸರಿಯಲ್ಲ. ಈಗಾಗಲೆ ಬೇಕಾದಷ್ಟು ತೆರಿಗೆಯನ್ನು ಅವನ ಮೇಲೆ ಹಾಕಿದ್ದೀರಿ. ಅದರ ಜೊತೆಗೆ ಇದು ಬೇರೆ ತೆರಿಗೆ. ಇತರ ಪ್ರಾಂತಗಳ ಕಾನೂನನ್ನು ಚೆನ್ನಾಗಿ ಪರಿಶೀಲನೆ ಮಾಡಿನೋಡಿ ಅದರ ಪ್ರಕಾರ ಹೇಳುವುದಾದರೆ ಯಾರಿಗೆ ಶಕ್ತಿ ಇದೆಯೋ ಅಂಥವರಿಂದ ಈ ತೆರಿಗೆಯನ್ನು ಇನ್‌ಕಮ್‌ಟ್ಯಾಕ್ಸ್ ರೂಪದಲ್ಲಿ ಪ್ರತ್ಯಕ್ಷ ತೆರಿಗೆಯ ಹಾಗೆ ವಸೂಲು ಮಾಡಿ. ಅದರಿಂದ ತುಂಬಾ ವರಮಾನೋತ್ಪತ್ತಿಯಾಗುತ್ತದೆ. ಆದರೆ ಆ ಪ್ರತ್ಯಕ್ಷ ತೆರಿಗೆಯನ್ನು ಕೈಲಾಗದ ಜನರ ಮೇಲೆ ಹಾಕುವುದು ಸರಿಯಲ್ಲ. ಅದು ಬಹು ಹೀನಕರ ಕೃತ್ಯವಾಗುತ್ತದೆ. ಅಂಥವರ ಮೇಲೆ ಈ ರೀತಿಯಾದ ತೆರಿಗೆಯನ್ನು ವಿಧಿಸುವುದರಿಂದ ದೇಶದ ಪ್ರಗತಿ ಏನೂ ಆಗುವುದಿಲ್ಲ. ಇನ್ನೂ ಹಾನಿಯೇ ಹೆಚ್ಚಾಗುತ್ತದೆಂದು ಖಂಡಿತವಾಗಿ ನಾನು ಹೇಳುತ್ತೇನೆ. ನಮ್ಮ ಮೈಸೂರು ಸಂಸ್ಥಾನದಲ್ಲಿರತಕ್ಕ ವರ್ತಕ ಮಂಡಲಿಯವರು ಮತ್ತು ಕೈಗಾರಿಕೋದ್ಯಮಗಳಲ್ಲಿ ನಿರತರಾಗಿರತಕ್ಕವರು ಅದರಲ್ಲೂ ಸ್ವಲ್ಪ ಅಧಿಕಾರ

ವರ್ಗದಲ್ಲಿರತಕ್ಕವರೂ ಸರ್ಕಾರಿ ನೌಕರಿಯಲ್ಲಿರತಕ್ಕವರು ಮಂತ್ರಿಗಳಾಗಿ ವರಮಾನ ಪಡೆಯತಕ್ಕವರು, ಹೆಂಡ ಸರಾಯಿಗಳನ್ನು ಮಾರಿ ಅದರಲ್ಲಿ ಹೆಚ್ಚು ವರಮಾನ ಪಡೆಯುವವರು – ಇಂಥವರಿಗೆ ಹೆಚ್ಚು ವರಮಾನ ಬರುವುದರಿಂದ ಅಂತಹವರ ಮೇಲೆಲ್ಲ ಇಂತಹ ತೆರಿಗೆಗಳನ್ನು ಹಾಕಬೇಕೆ ವಿನಹ ರೈತಾಪಿ ಜನರಿಗೆ ಸಾಕಷ್ಟು ವರಮಾನವಿದೆಯೆಂದು ಹೇಳಿ ಅವರ ಮೇಲೆ ಈ ಸರ್ ಚಾರ್ಜ ತೆರಿಗೆ ಬೇರೆ ಹಾಕುವುದು ನ್ಯಾಯವಲ್ಲ. ಇನ್ನೂ ಕೆಲವರ ನಿದರ್ಶನಗಳನ್ನು ಬಿಟ್ಟಿದ್ದಾರೆ. ಕಾಫಿಪ್ಲಾಂಟರ್ಸ್, ಕಾರ್ಡಮಮ್ ಪ್ಲಾಂಟರ್ಸ್, ತೆಂಗಿನ ತೋಟ, ಅಡಿಕೆ ತೋಟ, ಅಡಿಕೆ ತೋಟಮಾಡುವವರು – ಇಂಥವರಿಗೆ ಹೆಚ್ಚು ವರಮಾನ ಇರಬಹುದೇ ಹೊರತು ಸರ್ವೆ ಸಾಧಾರಣವಾಗಿ ಮೊದಲಿನಿಂದಲೂ ಒಂದೇ ರೀತಿಯಲ್ಲಿ ಯಥಾಪ್ರಕಾರ ಜಮೀನು ಮಾಡುವ ರೈತನಿಗೆ, ತನಗೆ ಬೇಕಾದಷ್ಟು ದುಡ್ಡು ಬಾರದೆ ಬಹಳ ನಿಕೃಷ್ಟ ದೆಶೆಯಿಂದ ಇರುವವರ ಮೇಲೆ ಈ ತೆರಿಗೆ ಹಾಕುತ್ತೀರಿ ಇದು ಸರಿಯಲ್ಲ. ದೊಡ್ಡ ದೊಡ್ಡ ಜಮೀನ್‌ದಾರರ ಮಕ್ಕಳೇನೋ ಕೆಲವರು ಪ್ರೈಮರಿ ಸ್ಕೂಲ್ ಟೀಚರ್‌ಗಿ 60 – 70 – 80 ರೂಪಾಯಿಗಳ ಸಂಬಳ ಪಡೆಯುತ್ತಿರುತ್ತಾರೆ. ಇದನ್ನು ನೋಡಿ ಈಗ ಹೆಚ್ಚಾಗಿ ಜಮೀನು ಪಡೆಯುವವರು ಸಹ ಜೋಳ, ರಾಗಿ ಬೆಳೆಯುವುದನ್ನು ಬಿಟ್ಟು ತಮ್ಮ ಮಕ್ಕಳನ್ನು ಸಹ ಸರ್ಕಾರಿ ಕೆಲಸಗಳಿಗೆ ಕಲಿಸುವುದಕ್ಕೆ ಹತ್ತಿದ್ದಾರೆ. ಅಂದಮೇಲೆ ಸಣ್ಣ ರೈತರು ಯಾವ ರೀತಿ ಬಾಳಬೇಕು? ಅವರಿಗೆ ಅಷ್ಟಾಗಿ ಉತ್ಪತ್ತಿ ಇಲ್ಲ. ತೆರಿಗೆಗಳು ಜಾಸ್ತಿ. ಮಕ್ಕಳು ವಿದ್ಯವಂತರಾಗುವುದಕ್ಕೂ ಕಷ್ಟ. ಅವರ ಸ್ಥಿತಿ ಎಷ್ಟು ಕಠಿಣವಾಗಿದೆ ಎಂಬುದನ್ನು ವರ್ಣಿಸುವುದಕ್ಕಾಗುವುದಿಲ್ಲ. ಇದರಿಂದ ಬಡ ರೈತನಾದವನು ಸಾಲ ಮಾಡುತ್ತಾನೆ. ಯಾವರಿತಿಯಾದರು ತೆರಿಗೆಗಳನ್ನು ಕಟ್ಟುತ್ತಾನೆ ಅವನು ಜೀವನ ಮಾಡಬೇಕಾಗುತ್ತದೆ. ಅವನ ಕಷ್ಟವಂತೂ ಹೇಳತೀರದು ; ಬಹಳ ಜಾಸ್ತಿ ತೆರಿಗೆಗಳಂತೂ ನಾನಾ ವಿಧವಾಗಿವೆ, ಅಗ್ರಿಕಲ್‌ಚರಲ್ ಇನ್‌ಕಮ್‌ಟ್ಯಾಕ್ಸ್, ಲೋಕಲ್ ಸೆಸ್, ಆರೋಗ್ಯ ಸೆಸ್, ಎಜುಕೇಷನ್ ಸೆಸ್, ಮುನಿಸಿಪಲ್ ಟ್ಯಾಕ್ಸ್, – ಇತರೆ ಇನ್ ಡೈರೆಕ್ಟ ಟ್ಯಾಕ್ಸೇಷನ್ನುಗಳು – ಹೀಗೆ ನೂರೆಂಟು ವಿಧವಾದ ತೆರಿಗೆಗಳನ್ನು ಅವನ ಮೇಲೆ ವಿಧಿಸಲು ಹೊರಟಿದ್ದೀರಿ. ಇದು ಅಲ್ಲದೇ ರೆಗ್ಯೂಲೆಟೆಡ್ ಮಾರ್ಕೆಟಿನಲ್ಲಿಯೂ ಅವನ ಮೇಲೆ ಟ್ಯಾಕ್ಸ್, ಅಂದಮೇಲೆ ಈಗಿರತಕ್ಕ ರೈತನಿಗೆ ಬೀಳುವಷ್ಟು ತೆರಿಗೆಯ ಹೊರೆ ಯಾರ ಮೇಲೂ ಬೀಳುವುದಿಲ್ಲವೆಂದು ಹೇಳಿದರೆ ಅದೇನೂ ತಪ್ಪಾಗುವುದಿಲ್ಲ. ಅಗ್ರಿಕಲ್‌ಚರಲ್ ಪ್ರೋಡ್ಯೂಸಸ್ ಮೇಲೆಲ್ಲಾ ತೆರಿಗೆಗಳನ್ನು ಹಾಕುತ್ತಿದ್ದೀರಿ ಪ್ರತಿಯೊಂದು ಬೆಳೆಯು ಅವನಿಂದಲೇ ದೇಶಕ್ಕೆ ಬರಬೇಕು. ಪ್ರತಿಯೊಂದು ಮಸೂದೆಯೂ ಅವನ ಪರವಾಗಿಯೇ ದೇಶದಲ್ಲಿ ಕಾನೂನು ಆಗಿ ಜಾರಿಗೆ ಬರಬೇಕು. ಈ ರೀತಿಯಾಗಿರುವವನ ಮೇಲೆ ತನ್ನ ವ್ಯವಸಯೋತ್ಪನ್ನದ ಬಗ್ಗೆ ವಿಶೇಷವಾಗಿ ತೆರಿಗೆಯ ಹೊರೆಯನ್ನು ಹೊರಿಸುವುದು ಖಂಡಿತವಾಗಿ ಅನ್ಯಾಯವೆಮದು ನಾನು ಹೇಳುತ್ತೇನೆ. ಮಳೆ ಬೆಳೆ ಹೆಚ್ಚಾಗಿದೆಯೆಂದು ಬಹಳ ವರ್ಷಗಳಿಂದ ನಾನಾ ಪದಾರ್ಥಗಳ ಮೇಲೆ ತೆರಿಗೆಯನ್ನು ಹಾಕಿಲ್ಲವೆಂದು ಯೊಚಿಸಿ ಈಗ ಎಲ್ಲ ಪದಾರ್ಥಗಳ ಮೇಲೂ ಇನ್‌ಡೈರೆಕ್ಟಾಗಿ ಆದರೂ ತೆರಿಗೆ ವಿಧಿಸಬೇಕೆಂದು ಸರ್ಕಾರದವರು ಹೊರಟಿರುವುದನ್ನು ನೋಡಿದರೆ ಅದೇನು ಅಷ್ಟಾಗಿ ಸಮಂಜಸವಾಗಿ ಕಾಣುವುದಿಲ್ಲ.

ಶ್ರೀ ಮರಿಯಪ್ಪ:- ರಿ ಸೆಟಲ್‌ಮೆಂಟ್ ಮಾಡಿದರೆ ಅವನು ತೆರಿಗೆಯನ್ನ ಕೊಡಬೇಕೋ ಬೇಡವೋ?

ಶ್ರೀ ಕೆ. ಕೆಂಚಪ್ಪ:- ರಿ ಸೆಟಲ್‌ಮೆಂಟ್ ಮಾಡುವುದನ್ನು ಬೇಡ ಎಂದು ನಾನು ಹೇಳುವುದಿಲ್ಲ. ರಿ ಸೆಟಲ್‌ಮೆಂಟ್‌ನಿಂದ ಹೆಚ್ಚು ಆದಾಯ ಬರುತ್ತದೆಂದು ಸರ್ ಚಾರ್ಜ ಹಾಕಲಿಕ್ಕೆ ಹೊಗಬೇಡಿ. ಅಧಿಕಾರದಲ್ಲಿದ್ದೇವೆ ಎಂದು ಏನು ಬೇಕಾದರೂ ಮಾಡಬಹುದು ಎಂಬ ನಿಮ್ಮ ನಿಲುವನ್ನು ಬಿಡಿ. ಈ ಅಧಿಕಾರ ಮುಂದೆ ಹೋಗಬಹುದು. ಅಧಿಕಾರ ಶಾಶ್ವತವಲ್ಲ. ಇಂತಹ ಅಧಿಕಾರದ ಮದ ಇರಬಾರದು. ಮನುಷ್ಯ ಅಧಿಕಾರದಲ್ಲಿರುವವರೆಗು ಒಂದು ರೀತಿಯ ಅಧಿಕಾರದ ಮದ ಇದ್ದೇ ಇರುತ್ತದೆ. ಅದು ಮಂತ್ರಿಗಳಲ್ಲಿಯೇ ಆಗಲೀ ಅಥವಾ ಅಧಿಕಾರಿಗಳಲ್ಲಿಯೇ ಆಗಲಿ ಇರಬಾರದು. ರಿ ಸೆಟಲ್‌ಮೆಂಟ್ ಏನೇನು ಮಾಡಿದ್ದೀರಿ ಎಂಬುದನ್ನು ಸಹ ನಾನು ಹೇಳಬಲ್ಲೆ. ಸ್ವಲ್ಪ ಅಧಿಕಾರದ ಮದವನ್ನು ಬಿಟ್ಟು ಸನ್ಮಾರ್ಗದಲ್ಲಿ ನೆಡೆಯಿರಿ ಎಂದು ನಾನು ಹೇಳುತ್ತೇನೆ.

ಶ್ರೀ ಕಡಿದಾಳ್ ಮಂಜಪ್ಪ:- ಎಲ್ಲಿ ಮದ ಬಂದಿದೆ?

ಶ್ರೀ ಕೆ. ಕೆಂಚಪ್ಪ:- ಮದ ಎಲ್ಲಿ ಬಂದಿದೆ ಎಂದರೆ ತಮ್ಮ ಅಧಿಕಾರದಲ್ಲಿ ಮದ. ಈಗ ಹೆಂಡಕುಡಿದವರೆಗೂ ತಲೆಯಲ್ಲಿ ಒಂದು ರೀತಿಯ ಮದವಿರುತ್ತದೆ. ಅಷ್ಟ ಮದಗಳಲ್ಲಿ ಅದು ಒಂದು ಮದವೆಂದು ಮಹನೀಯರೇ ಪುರಾತನ ಕಾಲದಲ್ಲಿಯೇ ಹೇಳಿದ್ದಾರೆ. ಇನ್ನು ಸೆಟಲ್‌ಮೆಂಟ್ ಕ್ಲಾಸಿಫಿಕೇಷನ್ನಿನಲ್ಲಿ ಹೇಳಿರುವುದನ್ನು ನೊಡಿದರೆ ಬಹಳ ಆಶ್ಚರ್ಯವಾಗುತ್ತದೆ. ರೂಪಾಯಿಗೆ 20ನೆಯೇ ಪೈಸೆ ಎಂದು ಹಾಕಿದ್ದೀರಿ. ಅದನ್ನು ಈಗ ಸೇರಿಸಬೇಡಿ. ಅದರ ಮೇಲೆ ಮತ್ತೆ 15ನೆಯ ಪೈಸೆ ಚಾರ್ಜ್ ಎಮದು ಹೇಳಿ ಈಗ ಒಟ್ಟು ಒಂದು ರುಪಾಯಿಗೆ 35ನೆಯ ಪೈಸೆ ತೆರಿಗೆ ಕೊಡಬೇಕೆಂದರೆ ಬಡ ರೈತ ಹೇಗೆ ಕೊಡಬೆಕು? ಕಾನೂನಿನಲ್ಲಿ ಆ ರೀತಿ ಹೇಳಿದ್ದೀರಿ. ಲ್ಯಾಂಡ್ ರೆವಿನ್ಯೂ ಕೋಡ್‌ನಲ್ಲಿ ಜಮೀನು ಕಂದಾಯವನ್ನು ತೆರಿಗೆ ರೂಪದಲ್ಲಿ ತೆಗೆದು ಕೊಳ್ಳಬಾರದು ಎಂದು ಹೇಳಿದೆ. ಆದ್ದರಿಂದ ಅದನ್ನು ಹೆಚ್ಚು ಮಾಡುವ ಉದ್ದೇಶವನ್ನು ತಾವು ತೆಗೆಯಬೆಕು ಜಮೀನಿಂದ ಬರತಕ್ಕ ಪ್ರತಿಯೊಂದು ಮಾಲಿಗೂ ಅನೇಕ ಪದಾರ್ಥಕ್ಕೂ ದೃಷ್ಟಿಗಳಿಂದ ತೆರಿಗೆಗಳನ್ನು ಹೆಚ್ಚು ಮಾಡುತ್ತಾ ಹೋದರೆ ಬಡರೈತನಾದವನಿಗೆ ಮೊಗಮ್ಮಾಗಿ ಶೇಕಡ 25 ಕ್ಕಿಂತ ಹೆಚ್ಚಾಗಿಯೇ ತನ್ನ ಉತ್ಪತ್ತಿಯಲ್ಲಿ ತೆರಿಗೆಗಾಗಿ ಹೊಗುತ್ತದೆಂದು ನಾನು ಭಾವಿಸುತ್ತೇನೆ.

**Mr. Deputy Speaker:-** The house will now rise and meet again tomorrow at 1 p.m.

The House adjourned at thirty minutes past Twelve of the Clock to meet again at one of the Clock on Monday, the 24th April 1961.

* * * * *

ಕೆ. ಕೆಂಚಪ್ಪ.- ಈ ಮಸೂದೆಯ ಎರಡನೆಯ ಕ್ಲಾಜಿನ ಒಂದನೇ ಸಬ್ ಕ್ಲಾಜಿನಲ್ಲಿ "ಸಿ" ಎನ್ನ ತಕ್ಕ ಒಂದು ಉಪಕ್ಲಾಜನ್ನು ಒಂದು ಉಪ ಕ್ಲಾಜನ್ನು ತೆಗೆದುಹಾಕಬೇಕು ಎನ್ನುವ ಅಭಿಪ್ರಾಯವನ್ನು ನಾನು ಹೊಂದಿದ್ದೇನೆ. ಏತಕ್ಕೆಂದರೆ drainage work ಎನ್ನುವುದು ನೀರನ್ನು ಒದಗಿಸುವುದಕ್ಕಲ್ಲ. ಜಮೀನಿಗೆ ನೀರನ್ನು ಒದಗಿಸುವುದಕ್ಕಲ್ಲ. ಜಮೀನಿಗೆ ನೀರನ್ನು ಒದಗಿಸಿದರೆ ನೀರಿನ ಕಂದಾಯ ವಸೂಲು ಮಾಡುತ್ತಾರೆ. ನೀರನ್ನು ಒದಗಿಸುವುದರ ಮೂಲಕ ಜಮೀನಿನ ಬೆಲೆ ಹೆಚ್ಚಾಗುತ್ತದೆ. ಜಮೀನಿನ ಬೆಲೆ ಹೆಚ್ಚಾಗತಕ್ಕ ಒಂದು ಭಾಗದಲ್ಲಿ ಸರ್ಕಾರದವರು ಸ್ವಲ್ಪ ಭಾಗವನ್ನು ತಾವು ತೆಗೆದುಕೊಳ್ಳಬೇಕು. ಅದಕ್ಕಾಗಿ ಬೆಟರ್‌ಮೆಂಟ್ ಲೆವಿ ಹಾಕಬೇಕೆಂದು ಉದ್ದೇಶಿಸಿದ್ದಾರೆ. ಈ ಕ್ಲಾಜು ಅದಕ್ಕೆ ವಿರೋಧವಾಗಿದೆ. ಡ್ರೈನೇಜ್ ನೀರು ಒದಗಿಸುವುದರ ಆಬಾದು ಮಾಡುವುದಕ್ಕೆ ಸಂಬಂಧ ಪಡುವುದಿಲ್ಲ. ಆದ್ದರಿಂದ ಇದನ್ನು ತೆಗೆಯಬೇಕು ಎಂದು ಉದ್ದೇಶ ಪಟ್ಟಿದ್ದೇನೆ. ಏತಕ್ಕೆಂದರೆ ಇಲ್ಲಿ "drainage work" includes (i) Channals, whether natural or artificial for the discharge of waste or surplus water : and all works connected with and artifiliary to such channel" ಎಂದು ಹೇಳಿದ ಸೆಕ್ಷನ್ 3ರಲ್ಲಿ "Levy of betternment contribution" ಎಂದು ಹೇಳಿದೆ ಯಾವಯಾವ ಸಂದರ್ಭದಲ್ಲಿ ಕಾಂಟ್ರಿಬ್ಯೂಷನನ್ನು ನೀವು ವಸೂಲು ಮಾಡಬಹುದು ಎನ್ನುವ ಅಭಿಪ್ರಾಯ ಕೊಟ್ಟಿದ್ದೀರಿ. ಹಾಗೆ ಕೊಡುವಾಗ "The Government shall be entitled to levy a betterment contribution in accordance with the provisions of this Act, from the land-holder or holder any land which in its opinion. is benefited by the construction, restoration, expansion or alteration of any work" ಎಂದು ಹೇಳಿದ್ದೀರಿ. ಯಾವುದಾದರೂ ಒಂದು ರೆಸ್ಟೋರೇಷನ್ ಮಾಡುವಾಗ ದುರಸ್ತು ಮಾಡುವುದು ಅಥವಾ ಬದಲಾವಣೆ ಮಾಡುವುದರ ಮೂಲಕ ಯಾವುದಾದರೂ ಒಂದು ಜಮೀನಿಗೆ ಉಪಯೋಗವಾಗಿದ್ದರೆ, ಕಾಂಟ್ರಿಬ್ಯೂಷನ್ ಮೊಬಲಗನ್ನು ಪಡೆಯಬೇಕೆನ್ನುವ ಭಾವನೆಯನ್ನು ಇಟ್ಟಿದ್ದೀರಿ. ವರ್ಕ್ ಎನ್ನುವ ಪದಕ್ಕೆ ಎರಡನೆಯ ಸೆಕ್ಷನ್ನಿನಲ್ಲಿ ಒಂದು ಡೆಫಿನಿಷನ್ ಹೇಳಿದ್ದೀರಿ. ಅದು ಎರಡನೆಯ ಪುಟದಲ್ಲಿ (ಐ) ಎಂಬಲ್ಲಿ ಈ ರೀತಿ ತಿಳಿಸಿದೆ. : "work means an irrigation or drainage work whether completed or not" ಒಂದೇ ಪದವನ್ನು ಎರಡು ಸಲ ಬೇರೆ ಬೇರೆ ವಿಶದೀಕರಿಸುವುದು ಕಾನೂನಿಗೆ ವಿರೋಧವಾದುದು. ಇಲ್ಲಿ ಯಾವ ಪದವನ್ನು ಉಪಯೋಗಿಸಿದಿರೋ ಆ ಪದದ ಭಾವನೆ ಸರಿಯಾದ ರೀತಿಯಲ್ಲಿರುವ ಹಾಗೆ ಕೊಡಬೇಕು. ಅದಕ್ಕೆ ಬೇರೆ ಇನ್ನೆರಡು ಪದಗಳನ್ನು ಉಪಯೋಗಿಸಿ ಕೊಡುವ ವಾದ ಸರಿಯಾದುದಲ್ಲ. ಈ ರೀತಿಯಾಗಿ ಎಲ್ಲಿಯೂ ಮಾಡುವುದಿಲ್ಲ. ಕಾನೂನು ರಚನೆಯ ದೃಷ್ಟಿಯಿಂದ ಇದನ್ನು ಹೇಳುತ್ತಿದ್ದೇನೆ.

"work" means irrigation work or drainage work. ಆಗಬಹುದು. ಮತ್ತೆ ಎರಡನೆಯ ಕ್ಲಾಜಿನಲ್ಲಿ (c) ಅಲ್ಲಿ drainage work ಎಂದರೆ ಏನು, drainage work ನಲ್ಲಿ Channals, whether natural or artificial ಎಂದು ಇದೆ ; natural channals ಇದ್ದರೆ ಅದಕ್ಕೂ ಕಾಂಟ್ರಿಬ್ಯೂಷನ್ artificial channals ಹೀಗೆ ಖರ್ಚು ಮಾಡಿದ್ದೇವೆಂದು ಹೇಳುವ ಪದದ ಭಾವನೆಯನ್ನು ಎಲ್ಲಿ ಇಟ್ಟಿದ್ದೀರಿ?

ಶ್ರೀ ಎಚ್.ಕೆ. ವೀರಣ್ಣ ಗೌಡ (ಮರಾಮತ್ ಇಲಾಖೆಯ ಮಂತ್ರಿಗಳು):- ನ್ಯಾಚುರಲ್ ಎನ್ನುವುದಕ್ಕೆ ತಮ್ಮ ಅಬ್ಜಕ್ಷನ್ ಏನು?

ಶ್ರೀ ಕೆ. ಕೆಂಚಪ್ಪ:- ಈಗ ಇಲ್ಲಿ 'construction, restoration, expansion or alteration of any work' ಈ ಕೆಲಸಗಳ ದೆಸೆಯಿಂದ ಒಂದು ಜಮೀನಿಗೆ ಉಪಯೊಗವಾದರೆ, ಆ ಜಮೀನಿಗೆ ಆದ ಉಪಯೋಗದಿಮದ, ಜಮೀನಿನ ಬೆಲೆ ಹೆಚ್ಚಾಗುವ ದೃಷ್ಟಿಯಿಂದ ಕಾಂಟ್ರಿಬ್ಯೂಷನ್ ಮೊಬಲಗನ್ನು ತೆಗೆದುಕೊಳ್ಳುತ್ತಿರಿ. ಒಂದು ಚಾನಲ್ ನ್ಯಾಚುರಲ್ ಅಥವಾ ಆರ್ಟಿಫಿಷಿಯಲ್ ಆಗಿರುತ್ತದೆ. ಆರ್ಟಿಫಿಷಿಯಲ್ ಎಮದರೆ ಮಾಡಿದ್ದು. ನ್ಯಾಚುರಲ್ ಎಂದರೆ ಸ್ವಾಭಾವಿಕವಾಗಿ ಆದದ್ದು ಕನ್‌ಸ್ಟ್ರಕ್ಷನ್ ಅಲ್ಲ. ಅದಕ್ಕೂ ಕಾಂಟ್ರಿಬ್ಯೂಷನ್ ಮೊಬಲಗನ್ನು ತೆಗೆದುಕೊಳ್ಳುವುದಕ್ಕೆ ಹೋಗಿದ್ದೀರಿ. "ಸಿ" ಸೆಕ್ಷನ್ನಿನಲ್ಲಿ ಒಂದು ಸರಿಯಾಗಿಲ್ಲ. ಚಾನಲ್ ಆರ್ಟಿಫಿಷಿಯಲ್ ಆಗಿದ್ದರೆ ಸರಿ. ಯಾವುದಾದರೂ ಒಂದು ಜಮೀನಿಗೆ ನೀರನ್ನು ಹಾಯಿಸಿ ಅದರ ಮೂಲಕ ಬೆಳೆ ತೆಗೆಯುವ ಉದ್ದೆಶವಿರಬೇಕು. ಡ್ರೈನೇಜ್ ಎಂದರೆ ನೀರನ್ನು ಓಡಿಸುವ ಕೆಲಸ ಎಂದು ಹಚ್ಚಿಕೊಂಡರೆ ಏನು ಪ್ರಯೋಜನ?

**ವ್ಯಾಕರಣದ ಬಗ್ಗೆ ಶ್ರೀ ಎಚ್.ಕೆ. ವೀರಣ್ಣಗೌಡ:-** ಕುಳಿತುಕೊಳ್ಳಿ.

ಶ್ರೀ ಕೆ. ಕೆಂಚಪ್ಪ:- ಕುಳಿತುಕೊಳ್ಳಿ ಎಂದರೆ ಆರ್ಡರೋ ಏನೋ ಗೊತ್ತಾಗಲಿಲ್ಲ. ಮಂತ್ರಿಗಳಿಂದ ಆ ಮಾತು ಬಂದರೆ ಬಹಳ ಜಿಜ್ಞಾಸೆಗೆ ಕಾರಣವಾಗುತ್ತದೆ.

**Sri H.K. Veeranna Gowda:-** I am sory. I never said that sir. I only said that if he yields, I will answer.

**Sri K. Kenchappa:-** It is an order by no stretch of imagination, we can construe it in any other manner with the knowledge of grammar we have.

**Mr. Speaker:-** It may also amount to a request let us not quarrel about words Sri Kenchappa. Please proceed.

ಶ್ರೀ ಕೆ. ಕೆಂಚಪ್ಪ:- ನಮಗೆ ವ್ಯಾಕರಣದ ಭಾವನೆ ಕಡಿಮೆಯಾಗಿದೆಯೋ ಏನೋ ಗೊತ್ತಿಲ್ಲ. ಈಗ ಇಲ್ಲಿ Channals, whether natural or artificial for the fischarge of waste or surplus water : and all works conected with and artifilary to such channels" ಎಂದು ಹೇಳಿದ್ದಾರೆ. ಇದಕ್ಕೆ ಅನುಗುಣವಾಗಿ ಕಾಂಟ್ರಿಬ್ಯುಷನ್ ಮೊಬಲಗನ್ನು ಕೊಡಬೇಕು. waste water ಎಂದರೆ ಅನಾವಶ್ಯಕವಾದ ನೀರನ್ನು ಓಡಿಸುವುದಕ್ಕೆ ಮಾಡತಕ್ಕ ಕೆಲಸ ಕಾರ್ಯಗಳಿಗೆ surplus water, ಎಂದರೆ ಹೆಚ್ಚಿಗೆ ನೀರು ಓಡಿಸುವುದಕ್ಕೆ ಮಾಡತಕ್ಕ ಕೆಲಸ ಕಾರ್ಯಗಳಿಗ ಡ್ರೈನೇಜ್ ಚಾನಲ್ ಹೀಗೆ ನೀರಿಗೆ ಸಂಬಂಧಪಟ್ಟಂತೆ ಏನು ಕೆಲಸಮಾಡಿರೂ ಸಹ ನೀರಾವರಿ ಕಂದಾಯವನ್ನು ವಸೂಲು ಮಾಡುವ ಭಾವನೆ ಬರುತ್ತದೆ. ಅದನ್ನು ಏನಾದರೂ ಸರ್ಕಾರದ ಖರ್ಚಿನಿಂದ ಹಾಕಿದರೆ ಮತ್ತೆ ಕಾಂಟ್ರಿಬ್ಯೂಷನ್ ಕೊಡಬೇಕು. ಅದು ನೀರಾವರಿಗೆ ಸಂಬಂಧಪಟ್ಟುದಲ್ಲ. ಕಾಂಟ್ರಿಬ್ಯೂಷನ್‌ಗೆ ಎಂದು ಮಾತ್ರ ವಸೂಲು ಮಾಡಬೇಕು. ಹಿಂದೆ ಕಂದಾಯ ಕಳೆದು ದುಡ್ಡು ಕೊಡುತ್ತಿದ್ದರು, ಹೀಗೆಲ್ಲಾ ಇತ್ತು. ಕಂದಾಯ ಜಮಿನಿಗೆ 100 ರುಪಾಯಿಗಳನ್ನು ಕೊಟ್ಟರೆ ಕಾಂಟ್ರಿಬ್ಯೂಷನ್ ಮೊಬಲಗು 90 ರೂಪಾಯಿಗಳನ್ನು ಕೊಡಿ ಎಂದು ಹೇಳಬೇಕಾಗಿದೆ.

ಇದಾದ ಮೇಲೆ 'dams, weirs, embankments, sluices and groynes' ಇತ್ಯಾದಿಗಳನ್ನು ಹೇಳಿದ್ದಾರೆ. ಇವುಗಳನ್ನು ನಿರ್ಮಿಸಿರತಕ್ಕದ್ದು ಜಮೀನುಗಳಿಗೆ ನಿರನ್ನೊದಗಿಸುವುದಕ್ಕಾಗಿ ಅಲ್ಲ ಉದಹರಣೆಗೆ. ಎರೇ ಭೂಮಿಗಳಲ್ಲಿ ಬದು ಹಾಕದೆ ಹೋದರೆ ಆ ಜಮೀನುಗಳಲ್ಲಿ ನಿರು ನಿಲ್ಲುವುದಿಲ್ಲ. ಅಂಥ ಸಂದರ್ಭಗಳಿದ್ದರೆ ಸರ್ಕಾರ ಅದಕ್ಕೂ ತೆರಿಗೆ ಕೊಡಬೇಕೆಂದರೆ ಅದು ನ್ಯಾಯವಲ್ಲ. ಹಾಗೆ ಎರೇ ಭೂಮಿಗಳಲ್ಲಿ ನೀರು ನಿಲ್ಲಲು ಬದು ಹಾಕಿದ್ದರೆ ಅದಕ್ಕೂ ದುಡ್ಡು ವಸೂಲ್ಮಾಡಲು ಈ ಡೆಫನಿಷನ್‌ನಿಂದ ಅವಕಾಶವಾಗಬಹುದು. ಆಮೇಲೆ "All works for the protection of lands... does not include works for the removal of sewage water" ಎಂದು ಹೇಳಿದ್ದಾರೆ. ಮುನಿಸಿಪಾಲಿಟಿಯವರು ಊರಿನಿಂದಾಚೆಗೆ ಓಡಿಸಲು ಬಿಟ್ಟಿರತಕ್ಕ ನಿರೊಂದು ವಿನಾ ಬಾಕಿ ಎಲ್ಲವು ಇದರಲ್ಲಿ ಸೇರಿಹೊಗುತ್ತದೆ. ಇಂಥ ಸಂದರ್ಭಗಳು ಇದರಲ್ಲಿರುವುದರಿಂದಲೇ ಆ (10)ನೇ ಕ್ಲಾಜಿನಲ್ಲಿ for the avoidance of doubt it is hereby declared' ಎಂದು ಹೇಳಿದ್ದಾರೆ. ಈ ಕ್ಲಾಜಿನಲ್ಲಿ Charge ಎಂಬ ಪದವನ್ನು ಉಪಯೋಗಿಸಿದ್ದಾರೆ. Charge ಎಂದರೆ ಕುತ್ತಿಗೆಯಿಂದ ಹಿಡಿದು ಮೂಗಿನವರೆಗೂ ಉಸಿರಾಡಲು ಅವಕಾಶವಿಲ್ಲದಂತೆ ಹಾಕತಕ್ಕ ಕಂದಾಯಕ್ಕೆ Charge ಎಂದು ಹೇಳಲಾಗಿದೆ. ಎಂದು ನಾನಾಗಲೇ ಹಿಂದೆಯೇ ತಿಳಿಸಿದ್ದೇನೆ. ಆದ್ದರಿಂದ 'Irrigation work' includes all canals, channels, tanks, wells, ponds, springs, talaparíges.....

ಇದರಲ್ಲಿ ಹೀಗೆ ಎಲ್ಲವನ್ನೂ ಸೇರಿಸಿರುವುದು ಸರಿಯಾದದ್ದಲ್ಲ. ಪದಗಳನ್ನೆಲ್ಲ ತೆಗೆದು ಹಾಕಬೇಕೆಂಬ ಉದ್ದೇಶದಿಂದಲೇ ಈ ತಿದ್ದುಪಡಿಯನ್ನು ನಾನು ತಂದಿದ್ದೇನೆ. ಆದುದರಿಂದ ಎರಡನೆಯ ಕ್ಲಾಜಿನಲ್ಲಿರತಕ್ಕ item (c) of sub-clause (1) and in item (e) (i) of sub-clause I shall be deleted. ಆಗ ಇದರರ್ಥ ಸರಿಹೋಗುತ್ತದೆಂದು ಹೆಳುತ್ತೇನೆ.

* * * * *

# ಸಾರ್ವಜನಿಕ ಆರೋಗ್ಯ

ಮಾನ್ಯ ಅಧ್ಯಕ್ಷರೇ, ಇಂದಿನ ದಿವಸ ಸಭೆಯ ಮುಂದೆ ಚರ್ಚೆಗೆ ಇರುವ ಮೆಡಿಕಲ್ ಸರ್ವಿಸ್‌ಗೋಸ್ಕರ ಮೀಸಲಾಗಿಟ್ಟಿರತಕ್ಕಂಥ 2,44,86,900 ರೂಪಾಯಿಗಳ ಬೇಡಿಕೆ ಹೆಲ್ತ್ ಗೋಸ್ಕರ 1,33,73,900 ರೂಪಾಯಿಗಳ ಬೇಡಿಕೆ ಮತ್ತು ಕ್ಯಾಪಿಟಲ್ ಔಟ್ಲೇ ಆನ್ ಇಂಪ್ರೂವ್‌ಮೆಂಟ್ ಆಫ್ ಪಬ್ಲಿಕ್ ಹೆಲ್ತ್ ಗೋಸ್ಕರ 7,41,000 ರೂಪಾಯಿಗಳ ಬೇಡಿಕೆ ಇವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ಕೊಡುವೆನು. ಮೆಡಿಕಲ್ ಸರ್ವಿಸಸ್ ವಿಚಾರ ಸ್ವಲ್ಪದರಲ್ಲಿಯೇ ಹೇಳಿ ಮುಗಿಸಿ ಬಿಡಬೇಕೆಂದಿದ್ದೇನೆ. ಒಂದು ಮುಖ್ಯ ಅಂಶವನ್ನು ಮೊದಲು ಹೇಳುತ್ತೇನೆ. ಮೆಡಿಕಲ್ ಎಸ್ಟಾಬ್ಲಿಷ್‌ಮೆಂಟಿನ ಸಲುವಾಗಿ 36,95,500 ರೂಪಾಯಿಗಳನ್ನು ಮೀಸಲಾಗಿ ಇಟ್ಟಿದೆ. ನನ್ನ ಅಭಿಪ್ರಾಯದಲ್ಲಿ ಈಗ ಇರುವ ಆಸ್ಪತ್ರೆಗಳ ಎಸ್ಟಾಬ್ಲಿಷ್‌ಮೆಂಟಿಗೋಸ್ಕರ ಈ ಮೊಬಲಗು ಬಹಳ ಕಡಿಮೆಯಾಗುತ್ತದೆ. ಇದನ್ನು ಇನ್ನೂ ಹೆಚ್ಚಾಗಿ ಇಡಬೇಕಾಗಿತ್ತು. ನಮ್ಮ ದೇಶದಲ್ಲಿ ಆಸ್ಪತ್ರೆಗಳಲ್ಲಿ ಎಷ್ಟು ಸೌಕರ್ಯ ಇರಬೇಕಾಗಿದೆಯೋ ಅಷ್ಟು ಇರುವುದಿಲ್ಲ. ಅದಲ್ಲದೆ 1947ನೇ ಇಸವಿಯಿಂದ ಈಚೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಾಪನೆಯಗಿರತಕ್ಕಂಥ ಆಸ್ಪತ್ರೆಗಳ ವಿಚಾರದಲ್ಲಿ ತುಂಬಾ ಉಪೇಕ್ಷೆ ನಡೆದಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಇರತಕ್ಕಂಥ ಆಸ್ಪತ್ರೆಗಳ ಸೌಕರ್ಯ ಬಹಳ ಕಡಿಮೆಯಾಗಿದೆ. ಲೋಕಲ್ ಫಂಡ್ ಡಿಸ್ಪೆನ್ಸರಿ ಮತ್ತು ಜಿಲ್ಲಾ ಬೋರ್ಡು ಸ್ಥಾಪನೆಮಾಡಿರತಕ್ಕಂತ ಆಸ್ಪತ್ರೆಗಳ ವಿಚಾರದಲ್ಲಿ ತುಂಬಾ ಉಪೇಕ್ಷೆ ನಡೆದಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಇರತಕ್ಕಂಥ ಆಸ್ಪತ್ರೆಗಳ ಸೌಕರ್ಯ ಬಹಳ ಕಡಿಮೆಯಾಗಿದೆ. ಲೋಕಲ್ ಫಂಡ್ ಡಿಸ್ಪೆನ್ಸರಿ ಮತ್ತು ಜಿಲ್ಲಾ ಬೋರ್ಡು ಸ್ಥಾಪನೆ ಮಾಡಿರತಕ್ಕಂಥ ಆಸ್ಪತ್ರೆಗಳ ವಿಚಾರದಲ್ಲಿ ತುಂಬಾ ಉಪೇಕ್ಷೆ ನಡೆದಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಆಸ್ಪತ್ರೆಗಳ ಸೌಕರ್ಯ ಹೆಚ್ಚಾಗಬೇಕು. ನಾನು ಕೇಳಿದ ಪ್ರಶ್ನೆಗೆ ಉತ್ತ್ರ ಕೊಡುತ್ತಾ ಸರಕಾರದವರು ಈ ಅಸೆಂಬ್ಲಿಯಲ್ಲಿ ಕೆಲವಾರು ಅಂಶಗಳನ್ನು ತಿಳಿಸಿದ್ದಾರೆ. 1947ರಿಂದ ಕೊಟ್ಟಿರುವ ಆಸ್ಪತ್ರೆಗಳನ್ನು ನೋಡಿದರೆ, ಒಂದು ವರ್ಷಕ್ಕೆ ಐದು ಅಥವ ಆರು ಹೀಗೆ ಸಂಸ್ಥಾನಕ್ಕೆ ವರ್ಷ ವರ್ಷ ಕೊಡುತ್ತಾ ಬಂದರೆ ಆಸ್ಪತ್ರೆಯ ವಿಚಾರದಲ್ಲಿ ಪ್ರಗತಿ ನಡೆದಂತೆ ಆಗುವುದಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಆಸ್ಪತ್ರೆಯ ಸೌಕರ್ಯ ಹೆಚ್ಚಾಗುತ್ತಿಲ್ಲ, ಆಸ್ಪತ್ರೆಗಳ ವಿಚಾರದಲ್ಲಿ ಎಸ್ಟಾಬ್ಲಿಷ್‌ಮೆಂಟ್ ಮೂಲ ಭೂತವಾದ ಪ್ರಶ್ನೆಯಾಗಿದೆ. ಯಾವುದೇ ಆಸ್ಪತ್ರೆಯಲ್ಲಿ ನೋಡಲಿ ಸಾಕಾದಷ್ಟು ಡಾಕ್ಟರುಗಳು ಕಾಣುವುದಿಲ್ಲ ಬೆಂಗಳೂರು ನಗರದಲ್ಲಿ ಇರತಕ್ಕಂಥ ವಾಣಿವಿಲಾಸ ಆಸ್ಪತ್ರೆಗೆ ಎಷ್ಟರಮಟ್ಟಿಗೆ ಈ ವ್ಯವಸ್ಥೆಯನ್ನು ಮಾಡಿದ್ದೀರಿ ಎಂಬುದನ್ನು ನೋಡಿದರೆ, ಒಬ್ಬರೇ ಒಬ್ಬರು ತಜ್ಞರು ಹೆಣ್ಣು ಮಕ್ಕಳಿಗಾಗಿ ಇದ್ದಾರೆ . ಈ ಆಸ್ಪತ್ರೆಯಲ್ಲಿ 800-900 ಬೆಡ್ಸ್ ಇವೆ. ಆದರೂ ಸಹ ತಜ್ಞರ ಕೈಯಲ್ಲಿ ಚಿಕಿತ್ಸೆ ಪಡೆಯತಕ್ಕಂಥ ಅವಕಾಶ ಇಲ್ಲದೇ ಇರುವುದರಿಂದ ತುಂಬಾ ಅನಾನುಕೂಲವಾಗಿದೆ.

ಆಸ್ಪತ್ರೆಗಳಲ್ಲಿ ಪಡೆಯತಕ್ಕಂಥ ಅನುಕೂಲವು ಇಲ್ಲದೇ ಇರುವುದರಿಂದ ತುಂಬಾ ಅನಾನುಕೂಲವಾಗಿದೆ. ಆಸ್ಪತ್ರೆಗಳಲ್ಲಿ ಪಡೆಯತಕ್ಕಂಥ ಅನುಕೂಲವು ಇಲ್ಲದೇ ಇರುವುದರ ಮೂಲಕ ಮನಸ್ಸಿಲ್ಲದೆ ಮನೆಯಲ್ಲಿ ಚಿಕಿತ್ಸೆ ಮಾಡಿಕೊಳ್ಳ ಬೇಕಾದಂಥ ಕಾಲ ಬಂದಿದೆ. ಈಗ ಇರತಕ್ಕಂಥ ಒಬ್ಬರು ಹೆಣ್ಣು ಮಕ್ಕಳ ತಜ್ಞರು ವಯಸ್ಸು ಆದವರು ಮತ್ತು ರಿಟೈರ್ ಆಗಲಿಕ್ಕೆ ಬಂದಂತೆ ಕಾಣುತ್ತದೆ. ಅವರಿಗೆ ಇಷ್ಟು ಹೆಚ್ಚಾದ ಕೆಲಸವನ್ನು ಒಬ್ಬರಿಗೇ ಮಾಡುವುದಕ್ಕೆ ಶಕ್ತಿ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಈ ಸನ್ನಿವೇಶ ಬೆಂಗಳೂರು ನಗರದಲ್ಲಿಯೇ ಈ ರೀತಿಯಾಗಿ ಇಟ್ಟುಕೊಂಡಿದ್ದಾರೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಇದು ಇನ್ನೂ ಯಾವ ರೀತಿಯಲ್ಲಿ ಇರಬಹುದು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಒಬ್ಬರೇ ಇದ್ದಾರೆ. ಬಡವರಿಗೆ ಯೋಗ್ಯ ಚಿಕಿತ್ಸೆ ದೊರೆಯದೇ ಇರುವದರಿಂದ ತುಂಬಾ ಅನ್ಯಾಯವಾಗಿದೆ. ಡಿಸ್ಟ್ರಿಕ್ಟ್ ಆಸ್ಪತ್ರೆಗಳಲ್ಲಿ ತಜ್ಞರೇ ಇಲ್ಲ ತಜ್ಞರಾದ ಡಾಕ್ಟರರ ಚಿಕಿತ್ಸೆಯ ಅವಕಾಶ ದೊರಕುವ ಸಂದರ್ಭ ಒಂದೇ ಒಂದು ಡಿಸ್ಟ್ರಿಕ್ಟ್ ಆಸ್ಪತ್ರೆಯಲ್ಲಿ ಇಟ್ಟಿದ್ದಾರೆ. ಬೇರೆ ಯಾವ ಡಿಸ್ಟ್ರಿಕ್ಟು ಆಸ್ಪತ್ರೆಯಲ್ಲಿ ಒಬ್ಬ ಸ್ಪೇಷಲಿಸ್ಟ್ ಡಾಕ್ಟರನ್ನು ಇಟ್ಟಿಲ್ಲ. ಈ ದೃಷ್ಟಿಯಿಂದ ನೋಡಿದರೆ ತಜ್ಞರನ್ನು ತಯಾರುಮಾಡತಕ್ಕಂತ ತರಬೇತು ಕೊಡತಕ್ಕ ವಿಷಯದಲ್ಲಿ ಸರಕಾರದವರು ಬಹಳ ಉಪೇಕ್ಷೆ ಮಾಡಿದ್ದಾರೆ. ಇದು ಸರಿಯಾದ ವ್ಯವಸ್ಥೆ ಅಲ್ಲ ಎಂಬುದನ್ನು ತಮ್ಮ ಗಮನಕ್ಕೆ ತರಲು ಇಚ್ಚಿಸುತ್ತೇನೆ. ನನ್ನ ಮಟ್ಟಿಗೆ ಹೇಳುವದಾದರೆ ನಮ್ಮಲ್ಲಿಯ ಡಾಕ್ಟರನ್ನು ಪರದೇಶಕ್ಕೆ ಕಳಿಸಿ ತಜ್ಞರನ್ನಾಗಿ ಮಾಡುವುದಕ್ಕೆ ಪರದೇಶಗಳಿಗೆ ಡಾಕ್ಟರರನ್ನು ಕಳಿಸುವಾಗ ಉಪೇಕ್ಷೆ ಮಾಡದೆ ಜಾಗ್ರತೆಯಾಗಿ ಕಳಿಸಬೇಕು. ಮೆಡಿಕಲ್ ಡಿಪಾರ್ಟಮೆಂಟು ಅತ್ಯಗತ್ಯವಾದದ್ದು. ದೇಶದ ಪ್ರಗತಿ, ಜನರ ಆರೋಗ್ಯ ಸರಿಯಾಗಿ ಇರಬೇಕಾದರೆ ಮೆಡಿಕಲ್ ಡಿಪಾರ್ಟಮೆಂಟಿನ ಕೆಲಸ ಕಾರ್ಯಗಳು ಯೋಗ್ಯವಾದ ರೀತಿಯಲ್ಲಿ ನಡೆಯಬೇಕು. ಮೈಸೂರು ಸಂಸ್ಥಾನದಲ್ಲಿ ಸ್ಪೆಷಲಿಸ್ಟ್ ಡಾಕ್ಟರರು ಇರಬೇಕಾದ ವಿಚಾರದ ಬಗ್ಗೆ ಆಲೋಚನೆ ಮಾಡಬೇಕಾಗಿದೆ. ಈಗ ವಿಶಾಲವಾದ ರಾಜ್ಯವಾಗಿದೆ. ದೊಡ್ಡದಾದ ರಾಜ್ಯವಾದ ಮೇಲೆ ಎರಡು ಕೋಟಿ ಜನ ಸಂಖ್ಯೆಗೆ ಔಷದೋಪಚಾರವನ್ನು ಒದಗಿಸುವ ಕಾಲದಲ್ಲಿ ಯೋಗ್ಯವಾದ ವ್ಯವಸ್ಥೆಯನ್ನು ಮಾಡಬೇಕು. ಇದಕ್ಕೆ ವಿಪರೀತವಾಗಿ ದುಡ್ಡು ಬೇಕಾಗುತ್ತದೆ ಎಂಬುದು ನಿಜ. ದುಡ್ಡಿನ ವ್ಯವಸ್ಥೆ ಮಾಡುವುದಕ್ಕೆ ಸರಕಾರಕ್ಕೆ ಏನು ಕಷ್ಟ ಬಂದಿದೆ? ಎಷ್ಟೋ ಬೇರೆ ಕೆಲಸಗಳಿಗಾಗಿ, ಪ್ರಾಜೆಕ್ಟುಗಳಿಗಾಗಿ ಬೇಕಾದಷ್ಟು ಹಣವನ್ನು ಖರ್ಚು ಮಾಡುವುದಕ್ಕೋಸ್ಕರ ಬಜೆಟ್‌ನಲ್ಲಿ ಹಣ ಹಾಕಲಾಗಿದೆ. ಇಂಥ ಕಾಲದಲ್ಲಿ ಅತ್ಯಂತ ಉಪಯುಕ್ತವಾದಂಥ ಈ ವಿಷಯದ ಸಲುವಾಗಿ ಹೆಚ್ಚಾಗಿ ಹಣ ಖರ್ಚುಮಾಡಿ ಸ್ಪೆಷಲಿಸ್ಟ್ ಮಾಡುವದಕ್ಕೆ ಸೌಕರ್ಯವನ್ನು ಮೈಸೂರು ಸಂಸ್ಥಾನದಲ್ಲಿಯೇ ವ್ಯವಸ್ಥೆ ಮಾಡಿದರೆ ಬಹಳ ಒಳ್ಳೆಯದಾಗುತ್ತದೆಂದು ನನ್ನ ಮನಸ್ಸಿಗೆ ಅನ್ನಿಸುತ್ತದೆ.

ಈಗ ಆಸ್ಪತ್ರೆಗಳಿಗೆ ಕೊಡತಕ್ಕಂಥ ಗ್ರ್ಯಾಂಟು ಬಹಳ ಕಡಿಮೆಯಾಗಿದೆ ಎಂದು ವಿಷಾದದಿಂದ ನಾನು ಹೇಳುತ್ತೇನೆ ಈ ಗ್ರ್ಯಾಂಟಿನ ವಿಷಯವಾದರೂ ಯಥಾ ಪ್ರಕಾರವಾಗಿ

ಶಾಲೆಗಳಿಗೆ ಕೊಡತಕ್ಕಂಥ ಗ್ರ್ಯಾಂಟುಗಳ ಬಗ್ಗೆ ಯಾವ ರೀತಿಯಾಗಿ ಇದೆ ಎಂಬುದನ್ನು ನಾನು ಹೇಳಿದ್ದೇನೆಯೋ ಅದೇ ಪ್ರಕಾರವಾಗಿ ಹಾಗೇಯೇ ಇದೆ. 1915ರಲ್ಲಿ ಸಾಮಾನುಗಳ ಬೆಲೆ ಕಡಿಮೆಯಾಗಿ ಇತ್ತು. ಆಗ ಯಾವ ಗ್ರ್ಯಾಂಟು ಕೊಡುತ್ತಿದ್ದರೋ ಅದನ್ನೇ ಈಗಲೂ ಸಹ ಕೊಡುತ್ತಿದ್ದಾರೆ. ಕೊಡತಕ್ಕ ಹಣದಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಿಲ್ಲ. ಷ್ಟೇ ಹಣದಲ್ಲಿ ನಡೆಸಿಕೊಂಡು ಬರಬೇಕಾಗಿದೇ. ಆದರೆ ಸಾಮಾನುಗಳ ಬೆಲೆಗಳು ವಿಪರೀತವಾಗಿ ಹೆಚ್ಚಾಗಿ ಬಿಟ್ಟಿವೆ. ಇದರಿಂದ ಆಸ್ಪತ್ರೆಗಳಲ್ಲಿ ಸಾಕಷ್ಟು ಔಷಧೋಪಚಾರದ ವ್ಯವಸ್ಥೆ ಆಗಿಲ್ಲ, ಆಸ್ಪತ್ರೆಗಳಲ್ಲಿ ರೋಗಿಗಳನ್ನು ಕೆಳಗೆ ಮಲಗಿಸುತ್ತಾರೆ. ಯಾಕೆಂದರೆ ಸಾಕಷ್ಟು ಮಂಚಗಳು ಇರುವುದಿಲ್ಲ. ಹಿಂದೆ ನಮ್ಮ ಸಂಸ್ಥಾನವು ಮೆಡಿಕಲ್ ಡಿಪಾರ್ಟಮೆಂಟಿನ ವಿಚಾರದಲ್ಲಿ ಬೇರೆ ದೇಶಗಳಿಗೆ ಹೋಲಿಸಿ ನೋಡಿದರೆ ಪ್ರಗತಿದಾಯಕವಾಗಿತ್ತು ಸ್ವಾತಂತ್ರ್ಯ ಬಂದಮೇಲೆ ಪ್ರಗತಿಯು ಹಿಂದೆ ಬೀಳುತ್ತಿದೆ. ಮುಂದೆ ಹೆಜ್ಜೆ ಇಡುತ್ತಿಲ್ಲ. ಹಳ್ಳಿಗಳಿಗೆ ಆಸ್ಪತ್ರೆಗಳನ್ನು ಸ್ಥಾಪನೆ ಮಾಡುವಾಗ ಐದು ಹಳ್ಳಿಗಳಿಗಾದರೂ ಒಂದು ಆಸ್ಪತ್ರೆಯನ್ನು ಕೊಟ್ಟಿದ್ದಾರೆಯೇ? ಐದು ಹಳ್ಳಿಗಾದರೂ ಒಂದು ಆಸ್ಪತ್ರೆಯು ಇರಬೇಕು. ಅಂಥ ಆಸ್ಪತ್ರೆಯಲ್ಲಿ ಒಬ್ಬ ತಜ್ಞ ಡಾಕ್ಟರರನ್ನು ನೇಮಿಸುವದು ಅತ್ಯಗತ್ಯ. ಇವತ್ತಿನ ದಿವಸ ಎಷ್ಟೋ ಹೋಬಳಿಗಳಲ್ಲಿ ಆಸ್ಪತ್ರೆಯೇ ಇಲ್ಲ. ಈರೀತಿಯಾಗಿ ಮೈಸೂರು ಸಂಸ್ಥಾನದಲ್ಲಿ ಆಸ್ಪತ್ರೆಗಳು ಇಲ್ಲದೇ ಇರತಕ್ಕಂಥ ಹೋಬಳಿಗಳು ಬೇಕಾದಷ್ಟು ಇವೆ. ಮೊದಲು ಹಳ್ಳಿಗಳಿಗೆ ಆಸ್ಪತ್ರೆಗಳ ವ್ಯವಸ್ಥೆಯನ್ನು ಮಾಡಿಕೊಡದೇ ಹೋದರೆ ಮತ್ತು ಈ ರೀತಿಯಾಗಿ ಉಪೇಕ್ಷೆ ಮಾಡಿದರೆ ಮುಂದೆ ಖಡಿತವಾಗಿ ಸರಕಾರಕ್ಕೆ ತೊಂದರೆಗಳು ಬಂದೇ ಬರುತ್ತವೆ. ದೊಡ್ಡ ಪಟ್ಟಣಗಳಲ್ಲಿ ಬೇಕಾದಷ್ಟು ಅನುಕೂಲ ಕಲ್ಪಿಸಿಕೊಡುತ್ತಿದ್ದಾರೆ. ಹಳ್ಳಿಗಳಿಗೂ ಸಹ ಸಮಾನವಾದ ಅವಕಾಶ ಇರಬೇಕು. ಕಾನ್ಸ್ಟಿಟ್ಯೂಶನ್‌ನಲ್ಲಿ ಈ ಬಗ್ಗೆ ಪ್ರೊವಿಜನ್ ಇದ್ದರೂ ಕೂಡ ಹಳ್ಳಿಗಳ ವಿಚಾರದಲ್ಲಿ ಇಷ್ಟು ಉಪೇಕ್ಷೆ ಏಕೆ? ಟೌನುಗಳಲ್ಲಿ ಆಸ್ಪತ್ರೆಗಳು ಕಡಿಮೆ ಇದ್ದರೆ ಹಳ್ಳಿಗಾಡಿನ ವಿಚಾರದಲ್ಲಿ ತುಂಬಾ ಉಪೇಕ್ಷೆ ನಡೆದಿದೆ. ಈ ದೃಷ್ಟಿಯಿಂದ ಹಳ್ಳಿಗಾಡಿನ ಆಸ್ಪತ್ರೆಗಳನ್ನು ಅತಿ ಜಾಗ್ರತೆಯಾಗಿ ಉತ್ತಮ ಪಡಿಸಬೇಕೆಂದು ಹೇಳುತ್ತಾ, ಆಸ್ಪತ್ರೆಗಳ ವಿಚಾರದಲ್ಲಿ ಇನ್ನೊಂದು ಮುಖ್ಯಾಂಶವನ್ನು ತಮ್ಮ ಗಮನಕ್ಕೆ ತರುತ್ತೇನೆ. ಸ್ವಾತಂತ್ರ್ಯ ಬಂದ ಮೇಲೆ ನಮ್ಮನ್ನು ನಾವೇ ಆಳುವ ಸಂದರ್ಭ ಬಂದಿರುವುದರಿಂದ ಆಯುರ್ವೇದ ಮತ್ತು ಯುನಾನಿ ವಿಷಯದಲ್ಲಿ ಹೆಚ್ಚು ಸಂಶೋಧನೆಗಳನ್ನು ನಡೆಸಬೇಕಾಗಿದೆ. ಏತಕ್ಕೆಂದರೆ ಮಿನರಲ್ ಪ್ರಾಡಕ್ಟ್ಸ್ ಔಷಧಿಗಳಿಗಿಂತ ವನಸ್ಪತಿ ಔಷಧಿಗಳು ಬಹಳವಾಗಿ , ಪರಿಣಾಮಕಾರಿಯಾಗಿ ಖಾಯಿಲೆಗಳನ್ನು ವಾಸಿ ಮಾಡುತ್ತದೆ ಎಂದು ನಮ್ಮ ಗ್ರಂಥಗಳಿಂದ ಕಂಡಬರುತ್ತದೆ. .ಆದರೆ ನಾನು ಬಹಳ ದಿವಸಗಳಿಂದ ನೋಡುತ್ತಿದ್ದೇನೆ, ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆಗಳ ಕಾಲೇಜುಗಳಲ್ಲಿ ಸಾಕಾಗುವಷ್ಟು ವ್ಯವಸ್ಥೆ ಇಲ್ಲ ಎಂಬ ಮನೋಭಾವ ನಮ್ಮ ಜನಗಳಿಗೆ ಉಂಟಾಗಿದೆ. ಆಯುರ್ವೇದ ಮತ್ತು ಯುನಾನಿಗೆ ಸಂಬಂಧಪಟ್ಟ ಔಷಧಗಳನ್ನು ಉಪಯೋಗಿಸುವುದು ನಮ್ಮ ಜನಗಳಲ್ಲಿ ಈಗ ಬಹಳ ಕಡಿಮೆಯಾಗಿದೆ. ಇದರಿಂದ ನಮ್ಮ ದೇಶದ ಒಂದು ಕಲೆ, ಒಂದು ಸಂಪತ್ತು ಇವೊತ್ತಿನ ದಿವಸ ಹಾಳಗುವುದಕ್ಕೆ

ಮುಖ್ಯ ಕಾರಣವಾಗಿದೆ. ಇದು ಬಹಳ ವ್ಯಸನಕರವಾದ ವಿಚಾರವಾಗಿದೆ. ಏತಕ್ಕೆಂದರೆ, ನಮ್ಮ ಜಿಲ್ಲಾ ಬೋರ್ಡಿನಲ್ಲಿರುವ ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆಗಳಲ್ಲಿ ಸರಿಯಾದ ಸೂಪರ್‌ವಿಷನ್ ಇಲ್ಲ. ಇದನ್ನು ಮೆಡಿಕಲ್ ಡಿಪಾರ್ಟ್‌ಮೆಂಟಿನವರು ಸೂಪರ್‌ವೈಸ್ ಮಾಡಬೇಕಾಗಿದೆ. ಅವರು ಯಾವ ರೀತಿ ಸೂಪರ್‌ವೈಸ್ ಮಾಡುತ್ತಿದ್ದಾರೆಂಬುದು ದೇವರಿಗೇ ಗೊತ್ತು. ಈಗ ತಮಗೆ ಒಂದು ವಿಷಯವನ್ನು ತಿಳಿಸುತ್ತೇನೆ. ಆಯುರ್ವೇದ ಮತ್ತು ಯುನಾನಿ ಡಿಸ್ಪೆನ್ಸರಿಗೆ ನಮ್ಮ ಸರಕಾರದವರು ಕ್ವಾಲಿಫೈಡ್ ಡಾಕ್ಟರುಗಳು ಇರುವ ಕಡೆ 20 ರೂಪಾಯಿಗಳಂತೆ ಗ್ರ್ಯಾಂಟು ಕೊಡುತ್ತಿದ್ದಾರೆ. ಇದರಿಂದ ನಿಜವಾಗಿಯೂ ಆಸ್ಪತ್ರೆಗಳನ್ನು ಏನಾದರೂ ಬೂಟಾಟಿಕೆಗೋಸ್ಕರ ಇಟ್ಟು ಕೊಂಡಿದ್ದಾರೋ ಅಥವಾ ಎಲ್ಲೋ ಸ್ಟ್ಯಾಟಿಸ್ಟಿಕಲ್ ಪರಪಸ್ಸಿಗೋಸ್ಕರ ಏನಾದರೂ ಇಟ್ಟು ಕೊಂಡಿದ್ದಾರೋ ಏನೋ ತಿಳಿಯದು. ಈಗ ಆಸ್ಪತ್ರೆಗೆ ಕೊಡುತ್ತಿರುವ ಈ 20 ರೂಪಾಯಿ ಗ್ರ್ಯಾಂಟು ಕ್ವಾಲಿಫೈಡ್ ಮತ್ತು ಹೆರಿಗೆಟರಿ ವೈದ್ಯರಿಗೆ 20 ರೂಪಾಯಿ ಪೆನ್ಷನ್ ಕೊಟ್ಟ ಹಾಗೆ ಆಗಿದೆ. ಈ ದೃಷ್ಟಿಯಿಂದ ನಮ್ಮ ದೇಶದ ಕಲೆಯನ್ನು ಅತ್ಯುನ್ನತವಾದ ಪ್ರಗತಿಗೆ ತುರುವುದಕ್ಕೆ ಬದಲಾಗಿ ಅದು ಹಿಂದಕ್ಕೆ ಹೋಗುತ್ತಿದೆ. ನಮಗೆ ಆದರಿಂದ ಶ್ರೇಯಸ್ಸು ಆಗಲಿಕ್ಕಿಲ್ಲ. ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆ ಬಹಳ ಶ್ರೇಷ್ಠವಾದದು. ಆದ್ದರಿಂದ ನಮ್ಮ ಸರ್ಕಾರದವರು ಈ ಆಸ್ಪತ್ರೆಗಳ ವಿಚಾರವಾಗಿ ತುಂಬಾ ಆಸಕ್ತಿವಹಿಸಿ ಅವುಗಳನ್ನು ಉತ್ತಮಪಡಿಸಬೇಕು. ಆಸ್ಪತ್ರೆಗಳಲ್ಲಿ ಔಷಧಿಗಳನ್ನು ರಿಸರ್ಚ ಲ್ಯಾಬೋರೇಟರಿ ಮೂಲಕ ತುಂಬಾ ಸಂಶೋಧನೆ ಮಾಡಿ ದೇಶದ ಸಂಪತ್ತನ್ನು ಹೆಚ್ಚಿಸಬೇಕು. ನಮ್ಮ ಆಯುರ್ವೇದಿಕ್ ಮತ್ತು ಯುನಾನಿ ಔಷಧಿಗಳು ಪ್ರಪಂಚದಲ್ಲಿ ಒಂದು ಒಳ್ಳೆಯ ಪರಿಣಾಮಕಾರಿಯಾದ ಔಷಧಿ ಎಂದು ಸಾರುತ್ತಿದ್ದಾರೆ. ಅದಕ್ಕೋಸ್ಕರವಾಗಿ ಇದನ್ನು ಉನ್ನತ ಸ್ಥಿತಿಗೆ ತರಲು ಮತ್ತು ಇನ್ನೂ ಅಭಿವೃದ್ಧಿ ಪಡಿಸಲು ನಿಧಾನ ಮಾಡಬಾರದು. ಹಳ್ಳಿಗಾಡುಗಳಲ್ಲಿ ಆಯುರ್ವೇದಿಕ್ ಮತ್ತು ಯುನಾನಿ ಆಸ್ಪತ್ರೆಗಳಿಗೆ ಮತ್ತು ಎಲ್.ಎಫ್.ಡಿಸ್ಪೆನ್ಸರಿಗಳಿಗೆ ಹೆಚ್ಚಿಗೆ ಗ್ರ್ಯಾಂಟು ಕೊಡಬೇಕು. ಆಸ್ಪತ್ರೆ ಡಾಕ್ಟರುಗಳಿಗೆ ಹೆಚ್ಚಿಗೆ ಗ್ರ್ಯಾಂಟು ಕೊಡಬೇಕು. ಹೆಚ್ಚಿಗೆ ಔಷಧಿಗಳನ್ನು ಕಲ್ಪಿಸಿಕೊಡಬೇಕು. ಆಸ್ಪತ್ರೆ ಡಾಕ್ಟರುಗಳಿಗೆ ಹೆಚ್ಚಿಗೆ ಸೌಕರ್ಯವನ್ನೂ ಕಲ್ಪಿಸಿಕೊಡಬೇಕು. ಅವರಿಗೆ ಉತ್ತೇಜನಕರವಾಗತಕ್ಕ ಹಾಗೆ ವ್ಯವಸ್ಥೆಗಳನ್ನು ಅಲ್ಲಿ ಏರ್ಪಡಿಸಬೇಕು. ಈಗ ಡಾಕ್ಟರುಗಳು ಪ್ರೈವೇಟ್ ಪ್ರಾಕ್ಟೀಸ್ ಮಾಡುತ್ತಾ ಇದ್ದಾರೆ. ಹಳ್ಳಿಗಳ ಕಡೆ ಹೋಗುವುದೇ ಇಲ್ಲ ಅವರಿಗೆ ತಕ್ಕ ಸೌಕರ್ಯಗಳು ಆಲ್ಲಿ ಇಲ್ಲದೇ ಇರುವುದರಿಂದ ಆವರ ಸಹಾಯವನ್ನು ನಮ್ಮ ಸರಕಾರದವರು ಸಾಕಷ್ಟು ಪಡೆಯುವುದಕ್ಕೆ ಸಾಧ್ಯವಾಗಿಲ್ಲ. ಈ ವಿಚಾರದಲ್ಲಿ ಹೆಚ್ಚಿಗೆ ಗಮನಕೊಡಬೇಕೆಂದು ಸರ್ಕಾರದವರಲ್ಲಿ ಮನವಿಮಾಡುತ್ತೇನೆ. ಈಗ ಹೆಲ್ತ್ ಡಿಪಾರ್ಟಮೆಂಟನ್ನು ಮೆಡಿಕಲ್ ಡಿಪಾರ್ಟ್‌ಮೆಂಟ್‌ಗೆ ಸೇರಿಸಿ ಕೆಲವು ಆಸ್ಪತ್ರೆಗಳನ್ನು ಕುಲಗೆಡಿಸಿದರು. ಅದು ಹೇಗೆಂದರೆ, ಅದು ಹೆಲ್ತ್‌ಯುನಿಟಿಗೆ ಸೇರಿದ್ದು ಎಂದು ಹೇಳುವುದು, ಅಲ್ಲಿರುವ ಡಾಕ್ಟರುಗಳು ಬರೀ ಸರ್ವೇ ಕೆಲಸ ಮಾಡುವುದು, ಇನ್ನುಳಿದ ಕೆಲಸವನ್ನು, ಹಚ್ಚಿದರೆ, ಔಷಧಿ ಕೊಡುವುದು, ಇನ್ನುಳಿದ ಕೆಲಸವನ್ನು, ಇತ್ಯಾದಿ ಕೆಲಸಗಳನ್ನು ಕಾಂಪೌಂಡರುಗಳು ನೋಡಿಕೊಳ್ಳುವುದು ಈ ರೀತಿಯಾಗಿದೆ. ಎಲ್ಲಿಯವರೆಗೆ ಹೆಲ್ತ್ ಡಿಪಾರ್ಟಮೆಂಟ್ ಮತ್ತು ಮೆಡಿಕಲ್ ಡಿಪಾರ್ಟ್‌ಮೆಂಟ್ರ ಈ ಒಂದು ದೃಷ್ಟಿಯಿಂದ ಬೇರೆ ಬೇರೆ ಇರುತ್ತೋ ಅಲ್ಲಿಯವರೆಗೂ

ಹೆಲ್ತ್ ಡಿಪಾರ್ಟ್‌ಮೆಂಟ್ ಸರ್ವೇ ಸಾಧಾರಣವಾಗಿ ಉತ್ತಮ ಕೆಲಸ ಮಾಡುತ್ತಿತ್ತು. ಹೆಲ್ತ್ ಡಿಪಾರ್ಟ್‌ಮೆಂಟಿನಲ್ಲಿ ಔಷಧಗಳನ್ನು ಕೊಡುವ ವ್ಯವಸ್ಥೆಗೆ ನೇಮಕಮಾಡಿದ ಡಾಕ್ಟರು ಹೆಲ್ತ್ ಆಫೀಸರು ಆಗಕೂಡದು. ಈ ಹೆಲ್ತ್ ಡಿಪಾರ್ಟ್‌ಮೆಂಟಿನಿಂದ ಮತ್ತು ಮೆಡಿಕಲ್ ಡಿಪಾರ್ಟ್‌ಮೆಂಟಿನಿಂದ ಉಪಯೋಗ ಆಗುವುದಕ್ಕಿಂತ ಅನಿಷ್ಟ ಹೇಚ್ಚಾಗುತ್ತಿದೆ. ಹೆಲ್ತ್ ಡಿಪಾರ್ಟ್‌ಮೆಂಟನ್ನು ಪ್ರಿವೆಂಟಿವ್ ಮೆಜರ್ಸ್‌ಗಳನ್ನು ಕಂಡುಹಿಡಿದು ಕ್ರಮ ತೆಗೆದುಕೊಳ್ಳುವ ವ್ಯವಸ್ಥೆಗೆ ಬಿಟ್ಟುಕೊಡಿ, ಡಾಕ್ಟರುಗಳು ಔಷಧಿಗಳನ್ನು ಕೊಡುವುದಕ್ಕೆ ಮೆಡಿಕಲ್ ಡಿಪಾರ್ಟ್‌ಮೆಂಟನ್ನು ಬಿಟ್ಟು ಕೊಡಿ. ಇದರಿಂದ ಒಳ್ಳೆಯದಾಗುತ್ತದೆ. ನಾನು ಆಗಲೇ ಹೇಳಿದ್ದೇನೆ. ಈ ಡಿಮ್ಯಾಂಡಿನ ವಿಚಾರವಾಗಿ ಇನ್ನು ಹೆಚ್ಚಿಗೆ ಹೇಳಲು ಇಷ್ಟ ಪಡುವುದಿಲ್ಲ. ಆದರೆ ಇನ್ನು ಒಂದೆರಡು ವಿಚಾರಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಈ ವರ್ಷ ಬಡ್ಜೆಟ್ಟಿನಲ್ಲಿ ಮೆಟರ್ನಿಟಿ ಮತ್ತು ಚೈಲ್ಡ್ ವೆಲ್ ಫೇರ್ ಸೆಂಟರ್ ಬಾಬ್ತಿಗೆ ಎಂಭತ್ತೆಂಟು ಸಾವಿರದ ಐನೂರ ರೂಪಾಯಿಗಳನ್ನು ಒದಗಿಸಿದ್ದಾರೆ. ಇದು ಯಾರ ಕಿವಿಗೆ ಬಿದ್ದರೂ ಇದಕ್ಕೆ ಅಗತ್ಯವಾಗಿ ಹಣ ಹೆಚ್ಚಿಗೆ ಒದಗಿಸುವುದು ಅವಶ್ಯಕ ಎಂದು ಥಟ್ಟನೆ ಹೊಳೆಯುತ್ತದೆ. ಆದರೆ ಇದುವರೆಗೂ ಅನುಸರಿಸಿಕೊಂಡು ಬಂದಿರುವ ವಿಧಾನವನ್ನು ನೋಡಿದರೆ, ಯಾವ ಉದ್ದೇಶ ಸಾಧ್ಯವಾಗಲಿಲ್ಲ. ಇನ್ನು ಒಂದು ಬೇಬಿ ಷೋ ಎಂದು ಮಾಡುತ್ತಾರೆ. ಅಲ್ಲಿ ಯಾವುದೋ ಒಂದು ಮಗುವನ್ನು ತೆಗೆದುಕೊಂಡು ಬಂದರೆ, ಆ ಮಗುವಿಗೆ ಪ್ರೈಜ್ ಕೊಡುವುದು, ಈ ಮೂಲಕ ಮಕ್ಕಳನ್ನು ಚೆನ್ನಾಗಿ ಸಾಕಿದ ತಾಯಂದಿರಿಗೆ ಸ್ವಲ್ಪಮಟ್ಟಿಗೆ ಉತ್ತೇಜನ ಕೊಡುವುದಕ್ಕೆ ಸಹಾಯವಾಗುತ್ತದೆಯೇ ಹೊರತು ಆದರಿಂದ ಇನ್ನೇನೂ ಪ್ರಯೋಜನವಾಗುವುದಿಲ್ಲ. ಮೈಟರ್ನಿಟಿ ಅಂಡ್ ಚೈಲ್ಡ್ ವೆಲ್‌ಫೇರ್ ಸೆಂಟರ್ ಅಂದರೆ ಅಷ್ಟೆ ಅಲ್ಲ. ಅದರಲ್ಲಿ ಮಾಡುವ ಕೆಲಸವೆಷ್ಟೋ ಇದೆ. 88,500 ರೂಪಾಯಿಗಳನ್ನು ಈ ಬಾಬ್ತಿಗೆ ಒದಗಿಸಿರುವುದು ಬಹಳ ಕಡಿಮೆ. ಆದರೆ ಅದನ್ನು ಸೈಂಟಿಫಿಕ್ಕಾಗಿ ಸರಿಯಾದ ವ್ಯವಸ್ಥೆಯಿಂದ ಮಾಡಬೇಕಾಗಿದೆ. ಅನೇಕ ವಿಧ ವಿಧವಾದ ಕ್ರಮಗಳನ್ನಿಟ್ಟುಕೊಂಡು ಮಾಡಬೇಕಾದ ಸಲಕರಣೆಗಳನ್ನು ನಮ್ಮ ಸರ್ಕಾರದವರು ಶಿಶು ಸಂರಕ್ಷಣಾ ಕೇಂದ್ರಗಳಿಗೆ ಒದಗಿಸಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು.

ಇನ್ನು ಲೋಕಲ್ ವ್ಯಾಕ್ಸಿನೇಷನ್ ಟ್ರೈನಿಂಗ್ ಸ್ಕೀಮನ್ನು ಬೇರೆ ಇಟ್ಟು ಕೊಂಡಿದ್ದಾರೆ. ಇತ್ತೀಚೆಗೆ ವ್ಯಾಕ್ಸಿನೇಷನ್ ಸೆಂಟರಿನಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆ ಬಗ್ಗೆ ಎಷ್ಟು ಉಪೇಕ್ಷೆ ನಡೆದಿದೆ ಎಂದರೆ, ಅದನ್ನು ಹೇಳುವುದಕ್ಕಾಗುವುದಿಲ್ಲ. ನಾನು ಜಿಲ್ಲಾ ಬೋರ್ಡಿನಲ್ಲಿ ಅಧ್ಯಕ್ಷನಾಗಿದ್ದಾಗ ವ್ಯಾಕ್ಸಿನೇಟರುಗಳು ಮಾಡುತ್ತಿದ್ದ ಕೆಲಸಗಳನ್ನು ಖುದ್ದು ನೋಡಿ, ಅದು ಎಷ್ಟು ಜವಾಬ್ದಾರಿಯುತವಾದ ಕೆಲಸವೆಂಬುದನ್ನು ಕಣ್ಣಾರೆ ಕಂಡಿದ್ದೇನೆ . ಅದರ ದೊಡ್ಡ ಕೆಲಸದ ವ್ಯಾಪ್ತಿ ನನಗೆ ಅರಿವು ಆಗಿದೆ. ಒಂಬತ್ತು ತಾಲ್ಲೂಕುಗಳಲ್ಲಿ ಸುಮಾರು 12 ಜನ ವ್ಯಾಕ್ಸಿನೇಟರುಗಳು ಇದ್ದಾರೆ. ಅದೂ ಸಾಲದೆ ಬರುತ್ತದೆ. ಈಗಿನ ವ್ಯಾಕ್ಸಿನೇಷನ್ ಟ್ರೈನಿಂಗ್ ಬಹಳ ವಿಚಿತ್ರವಾಗಿದೆ. ಸಿಡುಬು ಬಂತು ಅಂದರೆ ಜಾಗ್ರತೆಯಾಗಿ ಕಂಟ್ರೋಲ್ ಆಗಿದೆ. ಆದರೆ ಅದಕ್ಕೆ ಮಾಡತಕ್ಕ ವ್ಯವಸ್ಥೆ, ಎಂದರೆ ವ್ಯಾಕ್ಸಿನೇಷನ್ ಟ್ರೈನಿಂಗ್ ಕೊಡುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವುದರಲ್ಲಿ ಸರ್ಕಾರದವರು ತುಂಬ

ಉಪೇಕ್ಷೆಯಿಂದ ಇದ್ದಾರೆ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಹೆಲ್ತ್ ಇನ್‌ಸ್ಪೆಕ್ಟರುಗಳಿಗೆ ಈ ವಿಚಾರವಾಗಿ ಟ್ರೈನಿಂಗ್ ಕೊಡುವ ಬಗ್ಗೆ ನಮ್ಮ ಸರ್ಕಾರದವರು ಏನೊಂದು ವ್ಯವಸ್ಥೆಯನ್ನೂ ಮಾಡಲೇ ಇಲ್ಲ. ಇದು ಬಹಳ ವಿಷಾದಕರ.

ನನಗೆ ತಿಳಿದಮಟ್ಟಿಗೆ Senior Veccinatioor will automatically become health inspectors ಎಂದು ,ಸರ್ಕಾರಿ ಆಜ್ಞೆ ಇದೆ ಎಂಟು ಹತ್ತು ವರ್ಷ ವ್ಯಾಕ್ಸಿನೇಟರಾಗಿದ್ದವರಿಗೆ ಹೆಲ್ತ್‌ಇನ್ಸ್‌ಕ್ಟರ್ ಕೆಲಸ ಕೊಟ್ಟರೆ ಹೇಗೆ ಅವರಿಗೆ ಗಾಯ ಬಿಡಿಸಿ ಲೋಷನ್ ಹಚ್ಚುವ ಟ್ರೇನಿಂಗ್ ಮಾತ್ರ ಆಗಿರುತ್ತದೆ. ಆದ್ದರಿಂದ ಇವರಿಗೆ ಟ್ರೈನಿಂಗ್ ಸರಿಯಾಗಿ ಕೊಡುವ ವ್ಯವಸ್ಥೆಯನ್ನು ತುಂಬಾ ವಿಚಾರ ಮಾಡಬೇಕು. ಗ್ರಾಮಾಂತರ ಪ್ರದೇಶಗಳಲ್ಲಿ ಆರೋಗ್ಯ ದೃಷ್ಟಿಯಿಂದ ನೈರ್ಮಲ್ಯದ ವ್ಯವಸ್ಥೆ ಬಹಳ ಶೋಚನೀಯವಾಗಿದೆ. ಒಂದು ನಿದರ್ಶನವನ್ನು ಹೇಳುತ್ತೇನೆ. ಪಂಚಾಯಿತಿ ಸಬ್‌ಓವರ್‌ಸೀರ್ ಏನು ಕೆಲಸ ಮಾಡುತ್ತಾರೆ ದುಡ್ಡು ಇರಲಿ ಇಲ್ಲದೆ ಹೋಗಲಿ ಹಳ್ಳಿಗಳಲ್ಲಿ ಎಷ್ಟೋ ಕೆಲಸ ಇದೆ. ರಸ್ತೆ, ಚರಂಡಿ ಆಗಬೇಕು ನೀರು ಸ್ಟಾಗ್ನೆಂಟ್ ಆದರೆ ಅದಕ್ಕೆ ಏರ್ಪಾಡು ಮಾಡಬೇಕು. ಮಾಡಬೇಕಾದ ಕೆಲಸಗಳಿಗೆ ಬೇಕಾದ ಪ್ಲಾನ್ ಮಾಡಿ ಅಮಲ್ದಾರರಿಗೆ ಕೊಟ್ಟರೆ. ಅವರು ತಮ್ಮಲ್ಲಿ ದುಡ್ಡು ಇದ್ದರೆ ಕೊಡುತ್ತಾರೆ. ಹೀಗೆ ಹಳ್ಳಿಗಳ ನೈರ್ಮಲ್ಯದ ವಿಚಾರದಲ್ಲಿ ಬಹಳ ಉಪೇಕ್ಷೆ ಮಾಡಿದ್ದಾರೆ. ದೊಡ್ಡ ದೊಡ್ಡ ಮುನಿಸಿಪಾಲಿಟಿಗಳಲ್ಲಿ ಈ ಕೆಲಸವನ್ನು ವೀಕ್ಷಣೆಯಿಂದ ಮಾಡುತ್ತಾ ಇರಬಹುದು. ಆ ವಿಚಾರಕ್ಕೆ ನಾನು ಹೋಗುವುದಿಲ್ಲ. ಆದರೆ ಹಳ್ಳಿಗಾಡಿನ ನೈರ್ಮಲ್ಯ ವಿಚಾರದಲ್ಲಿ ಪಂಚಾಯಿತಿ ಸಬ್‌ಓವರ್‌ಸೀರ್ ಏನು ಕೆಲಸ ಮಾಡಿದ್ದಾರೆ? ಇವತ್ತು ಅವರಿಗೆ ಕೊಡುವುದು ಪೆನ್‌ಷನ್ ಅಲ್ಲದೆ ಬೇರೆ ಏನೂ ಅಲ್ಲ. ಒಬ್ಬ ಸಬ್ ಓವರ್ ಸೀರ್ ತಾಲ್ಲೂಕಿನೊಳಗೆ ಏನೂ ಕೆಲಸ ಮಾಡುವುದಿಲ್ಲ. ಆತನು ಸುಮ್ಮನೆ ಕುಳಿತುಕೊಂಡು ಜಾಗ್ರತೆ ವರ್ಗ ಮಾಡಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಾನೆ. ಇಲ್ಲಿ ಏನೂ ಸಿಕ್ಕುವುದಿಲ್ಲ. ಏನನ್ನೂ ದುಡಿದುಕೊಂಡು ತಿನ್ನುವ ಹಾಗಿಲ್ಲ, ತಿರುಪೆ ಎತ್ತುವ ಹಾಗಿಲ್ಲ ಎನ್ನುವಂತೆ ಬೇರೆ ಕಡೆಗೆ ವರ್ಗ ಮಾಡಿಸಿಕೊಳ್ಳಲು ಪ್ರಯತ್ನ ಮಾಡುತ್ತಾನೆ.

**Sri A.V. Narasima Reddy (Bangalore South)**- I rise to a point of order. What has the Panchayet Sub overseer to do with Medical Department?

**Sri. K. Kenchappa**- A Panchayat Sub-overseer has got very many duties to do in the village parts. He has to see that the village locality is kept in a healthy condition. We are talking of Health Department ; we are talking of sewage water; all those things are closely associated with the health of the village. Supposing, for argument's sake, there is a big stagnation of water which is a source of breeding mosquitoes. Has it no connection with health? Therefore, even from the side of Health Department, who is there to take care of the health

of the villagers? I should like to say therefore the work of the Panchayet Sub-overseer is essentially connected with the Health Department. Therefore, there is absolutely no irrelevancy about it.

**Mr. Deputy Speaker** – You are in one way correct.

ಶ್ರೀ ಕೆ. ಕೆಂಚಪ್ಪ –ಪಬ್ಲಿಕ್ ವರ್ಕ್ಸ್‌ಗೆ ಸಂಬಂಧಪಟ್ಟ ಎಸ್ಟಿಮೇಟುಗಳನ್ನು ಮಾಡುವುದಕ್ಕೆ ಸಬ್ ಓವರ್‌ಸೀರ್‌ಗಳನ್ನು ಇಟ್ಟಿರುತ್ತಾರೆ ಎಂದು ತಿಳಿದು ಕೊಂಡಿರುತ್ತಾರೆ. ಹಾಗಲ್ಲ ಗ್ರಾಮಪಂಚಾಯಿತಿ ನೈರ್ಮಲ್ಯ ನೋಡಿಕೊಳ್ಳುವುದೂ ಅವರ ಕೆಲಸ . ನಾನು ಹೆಚ್ಚು ಹೇಳುವುದಕ್ಕೆ ಇಷ್ಟು ಪಡುವುದಿಲ್ಲ. ಈ ದೃಷ್ಟಿಯಿಂದ ನಾನಾ ರೀತಿಯಲ್ಲಿ ನಾವು ನೋಡುತ್ತಾ ಇರುವ ಹಾಗೆ ಕೆಲಸ ನಡೆಯುತ್ತಾ ಇಲ್ಲ. ಕೆಲವು ಹೆಲ್ತ್ ಯುನಿಟ್ಟಿನಲ್ಲಿರುವ ಡಾಕ್ಟರುಗಳು ರಾಜಕೀಯದಲ್ಲಿ ಸೇರಿಕೊಂಡುಬಿಟ್ಟಿದ್ದಾರೆ. ಕೆಲವು ಡಾಕ್ಟರುಗಳು ಪಬ್ಲಿಕ್ ವರ್ಕ್ ಡಿಪಾರ್ಟ್‌ಮೆಂಟಿನ ಕಂಟ್ರಾಕ್ಟ್ ದಾರರುಗಳಾಗಿದ್ದಾರೆ. ಯಾವುದೋ ಹೆಸರಿನಿಂದ ಕಂಟ್ರಾಕ್ಟ್ ಕೆಲಸ ಮಾಡುತ್ತ ಇದ್ದಾರೆ. ಇವರನ್ನು ಯಾರು ಕಂಟ್ರೋಲ್ ಮಾಡುತ್ತಾರೋ ನನಗೆ ಗೊತ್ತಾಗುವುದಿಲ್ಲ. ಹೆಲ್ತ್ ಯೂನಿಟ್‌ನಲ್ಲಿ ಇರುವ ಡಾಕ್ಟರುಗಳನ್ನು ಡಿಸ್ಟ್ರಿಕ್ ಹೆಲ್ತ್ ಆಫೀಸರು ನಿಜವಾಗಿಯೂ ಕಂಟ್ರೋಲ್ ಮಾಡುತ್ತಾರೆಯೇ? ಮೆಡಿಕಲ್ ಇಲಾಖೆಯಲ್ಲಿ ಇರುವವರೆವಿಗೂ ಸರಿಯಾಗಿ ಕಂಟ್ರೋಲ್ ಮಾಡುತ್ತಿದ್ದರು. ಡಿಸ್ಟ್ರಿಕ್ಟ್ ಹೆಲ್ತ್ ಆಫೀಸರಾಗಲೀ ಡೈರೆಕ್ಟರ್ ಆಫ್ ಪಬ್ಲಿಕ್ ಹೆಲ್ತ್ ಆಗಲಿ ಯಾರೂ ಇವರನ್ನು ಕಂಟ್ರೋಲ್ ಮಾಡುತ್ತಾ ಇಲ್ಲ. They have almost become dictators. ನಾನು ಇನ್ನೂ ಹೆಚ್ಚಿಗೆ ಹೇಳುವುದಿಲ್ಲ. ಹೆಲ್ತ್ ಡಿಪಾರ್ಟ್‌ಮೆಂಟಿನ ಆಡಳಿತ ವಿಚಾರದಲ್ಲಿ ತುಂಬ ಬಿಗಿ ತಪ್ಪಿಹೋಗಿ ಸಡಿಲವಾಗಿ ಅದು ಹಿಂದಕ್ಕೆ ಹೋಗಿದೆ. ದಯವಿಟ್ಟು ಇದನ್ನು ತಾವು ಆಲೋಚನೆ ಮಾಡಿ ಸರಿಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ಯ ಅಧ್ಯಕ್ಷರೇ, ಆರೋಗ್ಯ ಖಾತೆಯ ವಿಚಾರದಲ್ಲಿ ಮಾನ್ಯ ಸದಸ್ಯರು ಈಗಾಗಲೇ ಹೇಳಿರತಕ್ಕ ವಿಚಾರಗಳನ್ನುಳಿದು ಬಾಕಿ ಕೆಲವು ವಿಚಾರಗಳನ್ನು ಹೇಳುತ್ತೇನೆ. ಈ ಬಾಬ್ತಿನ ಖರ್ಚಿಗಾಗಿ ಔಷಧಾಲಯಗಳಿಗೆ ಕೊಡುವ ಹಣದಲ್ಲಿ 10,95,000 ರೂಪಾಯಿಗಳ ಉಳಿತಾಯವಾಗಿದೆ. ಈ ಉಳಿತಾಯವಾಗುವುದರ ದೆಶೆಯಿಂದ ದೇಶಕ್ಕೆ ಎಷ್ಟು ಹಾನಿಯಾಯಿತೆಂಬ ವಿಚಾರವನ್ನು ಸರ್ಕಾರದವರು ಗಮನಕ್ಕೆ ತೆಗೆದುಕೊಳ್ಳಬೇಕಾದ ಅಗತ್ಯವಿದೆ. ಆರೋಗ್ಯ ಖಾತೆಯಲ್ಲಿ ಔಷಧಿಗೆ ಸಂಬಂಧಪಟ್ಟ ಬಾಬ್ತಿನಲ್ಲಿ ಸುಮಾರು 5,95,000 ರೂಪಾಯಿಗಳಷ್ಟು ಕಡಿಮೆ ಉತ್ಪತ್ತಿಬರುವುದಕ್ಕೇನು ಕಾರಣ ಹೇಳಿದ್ದಾರೆಂದರೆ ಪಂಚವಾರ್ಷಿಕ ಯೋಜನೆಯಲ್ಲಿ ಇಂಡಿಯಾ ಸರ್ಕಾರದವರು ಕೊಡಬೇಕಾದಂಥ ಹಣವನ್ನು ಅಷ್ಟು ಮಟ್ಟಿಗೆ ಕೊಡಲಿಲ್ಲ ಎಂದು ಏಕೆಂದರೆ ಕೆಲಸಮಾಡಲಿಲ್ಲ. ಕೆಲಸಮಾಡದೆ ಇರುವುದರ ದೆಶೆಯಿಂದ ಈ 5,95,000 ರೂಪಾಯಿಗಳನ್ನು ಕೊಡದೆ ಅದಕ್ಕಾಗಿ ಮಾಡಬೇಕಾದ ಕೆಲಸ ಕುಂಠಿತವಾಗಿ ಎಷ್ಟು ಅನ್ಯಾಯವಾಯಿತೆಂಬ ವಿಚಾರವನ್ನು ಸಹಿತ ನಾವು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಮೆಡಿಕಲ್ ಕಾಲೇಜು ಮತ್ತು ಸ್ಕೂಲಿನ ಸೀಟು ವಿಚಾರದಲ್ಲಿ ಸ್ವಲ್ಪ ಯೋಚನೆಮಾಡಬೇಕಾದ ಅಂಶವಿದೆ. ಏಕೆಂದರೆ ಈ

ಕಾಲೇಜುಗಳನ್ನು ನಮಗೆ ಬೇಕಾಗುವಷ್ಟು ತೆರೆದಿಲ್ಲ. ಅದರ ಜೊತೆಗೆ ಈಗ ಕಾಲೇಜುಗಳಲ್ಲಿ ಕೊಡತಕ್ಕ ಸೀಟುಗಳ ವಿಚಾರದಲ್ಲಿ ಅಷ್ಟು ಸಮರ್ಪಕವಾದ ವ್ಯವಸ್ಥೆ ಮಾಡಿಲ್ಲ. ವಿಚಾರದಲ್ಲಿ ಆಗತಕ್ಕ ಅನಿಶ್ಚತತೆಯನ್ನು ಎಷ್ಟೋ ನಾವು ಸರ್ಕಾರದಲ್ಲಿ ಮನವಿಮಾಡಿಕೊಂಡರೂ ಗಮನಕೊಟ್ಟಿಲ್ಲ. ಕೆಲ ಕೋಮುಗಳ ಬಗ್ಗೆ ಸೀಟುಗಳು ಮೀಸಲಾಗಿಡುವ ವಿಚಾರದಲ್ಲಿ ಅನ್ಯಾಯವಾಗಿರುವುದನ್ನು ತೋರಿಸಲು ಪ್ರಯತ್ನ ಮಾಡಿದಾಗ, ತೋರಿಸಿದಾಗ, ಸರಿಪಡಿಸುತ್ತೇನೆಂದು ಹೇಳಿದರು. ಇದು ಬಹಳ ಸ್ಥೂಲವಾಗಿ ಕಾಣುತ್ತದೆ. ಅನ್ಯಾಯವಾಗಿರುವುದಕ್ಕೆ ರುಜುವಾತುಕೊಡುವುದಕ್ಕಾಗುವುದಿಲ್ಲ ಆದ್ದರಿಂದ ರೂಲ್ಸ್ ನೋಡಿದೆ. ಅದು ಯಾವುದಾದರೂ ಒಂದು ಉಪಕೋಮಿಗೆ ಕೊಡಬೇಕೆಂದಿರುವಾಗ ಆ ಕೋಮಿನವರು ಬಾರದಿದ್ದರೆ ಅದೇ ಕೋಮಿನವರಿಗೇ ಕೊಡಬೇಕಾಗಿಲ್ಲ ಬೇರೆಯಾರಿಗಾದರೂ ಕೊಡಬಹುದು ಎಂದು ಬರೆದಿದೆ. ಇದು ನ್ಯಾಯ? ಯಾವ ದೃಷ್ಟಿಯಿಂದಲೂ ಇದು ಸಮರ್ಪಕವೆಂದು ಹೇಳುವುದಕ್ಕಾಗುವುದಿಲ್ಲ. ಈ ಕಾಲೇಜುಗಳಲ್ಲಿ ಇಷ್ಟು ಮಟ್ಟಿಗೆ ಅನ್ಯಾಯವಾಗುವುದನ್ನು ಎಷ್ಟು ಸದಸ್ಯರು ಹೇಳಿದರೂ ಸಹ ಒಂದು ಫೂಲ್ ಫ್ರೂಟ್ ಮೆಥಡ್‌ನಲ್ಲಿ ಅನ್ಯಾಯವಾಗದ ರೀತಿಯಲ್ಲಿ ಮಾಡುತ್ತಿಲ್ಲ, ಮುಗುಮ್ಮಾಗಿ ಮಾಡುತ್ತಿದ್ದಾರೆ.

ಒಂದೊಂದು ನಮೂನೆಯವರನ್ನು ಒಂದೊಂದು ಕಡೆ ಏಕೆ ಸೆಗ್ರೆಗೇಟ್ ಮಾಡಬಾರದು ಎಂದು ಕೇಳಿದರೆ, ಸೆಗ್ರೆಗೇಟ್ ಮಾಡಬೇಕು, ಆದರೆ ವ್ಯವಸ್ಥೆ ಇಲ್ಲ ಎಂದು ಹೇಳುತ್ತಾರೆ ರೂಮುಗಳಿಗೆ, ಕಟ್ಟಡಕ್ಕೆ ಮೈಸೂರು ದೇಶದಲ್ಲಿ ಸೊಗಸಾದ ಆಸ್ಪತ್ರೆ ಇರುವುದು, ಬೆಂಗಳೂರಿನಲ್ಲಿ, ಅಂಥ ಆಸ್ಪತ್ರೆಯಲ್ಲಿ ಸರಿಯಾದ ರೂಮುಗಳಿಲ್ಲದೆ ಈ ರೀತಿ ಇಟ್ಟು ಕೊಂಡಿರುವುದನ್ನು ನೋಡಿದರೆ ಬೆಂಗಳೂರಿನಲ್ಲಿರುವ ಆಸ್ಪತ್ರೆಗಳನ್ನು ಎಷ್ಟರ ಮಟ್ಟಿಗೆ ಇನ್‌ಸ್ಪೆಕ್ಟ್ ಮಾಡಿದ್ದಾರೆ. ವಿದ್ಯಮಾನವನ್ನು ನೋಡಿದ್ದಾರಯೇ ಎಂದು ಕೇಳುತ್ತೇನೆ. ಮಾಡಬೇಕಾದ ಕೆಲಸಗಳು ಏನೇ ಇರಲಿ ಸರಿಯಾಗಿ ವ್ಯವಸ್ಥೆ ಮಾಡುವುದಕ್ಕೆ ಆಗದೆ ಹೋಗಿರುವ ವ್ಯವಸ್ಥೆಯನ್ನು ಕೂಡ ಹಾಗೇಯೇ ಮುಂದುವರಿಸುವುದಕ್ಕೆ ಬದಲಾಗಿ, ಅದು ಹಿಂದ ಹಿಂದಕ್ಕೆ ಹೋಗುತ್ತಿದೆ. ಈ ದೃಷ್ಟಿಯಿಂದ ಹುಚ್ಚರ ಆಸ್ಪತ್ರೆಯ ವಿಚಾರದಲ್ಲಿ ಹೆಚ್ಚಿಗೆ ದಯೆ ತೋರಿಸಬೇಕು. ಕೆಳಗೂ ಮೇಲೂ ಆಸ್ಪತ್ರೆ ಭಾಗವಿತ್ತು; ಮೇಲೆ ಟ್ಯೂಷನಿಗೋಸ್ಕರ, ಮಹಡಿ ರಿಸರ್ವ್ ಮಾಡಿದ್ದಾರೆ. ಆಸ್ಪತ್ರೆ ಕೆಳಗೆ ಮಾತ್ರ ಇದೆ. ಸಾವಿರಾರು ರೂಪಾಯಿ * ತೆಗೆದುಕೊಳ್ಳುವ ಡೈರೆಕ್ಟರನ್ನು ನಿವೃತ್ತರಾದ ಮೇಲೆ ಆರು ಆರು ತಿಂಗಳು ಅಪಾಯಿಂಟ್ ಮಾಡಿಕೊಂಡು, ಅವರ ಅಧಿಕಾರವನ್ನು ಮುಂದುವರಿಸಿಕೊಂಡು ಬಂದರೆ, ಈ ಆಸ್ಪತ್ರೆ ಪ್ರಗತಿ ಹೊಂದಬೇಕು ಎಂಬ ಆಸೆ ಸರ್ಕಾರಕ್ಕಿದೆಯೇ? ಹಾಗೆ ಮಾಡುತ್ತೇವೆ. ಹೀಗೆ ಮಾಡುತ್ತೇವೆ ಎಂದು ಹೇಳಿ ಆಡುವುದೇನು ಮಾಡುವುದೇನು? ದಯವಿಟ್ಟು ನೋಡಿರಿ ಸ್ವಲ್ಪ ಕನ್‌ಸಿಸ್ಟೆನ್ಸಿ ಇರಬೇಕೆಂದಿದ್ದರೆ ಮೆಂಟಲ್ ಆಸ್ಪತ್ರೆ ವಿಚಾರದಲ್ಲಿ ಹೆಚ್ಚಿಗೆ ಗಮನತೆಗೆದುಕೊಳ್ಳಬೇಕು. ಗಾರ್ಡನ್ನನ್ನು ಹಾರ್ಟಿಕಲ್‌ಚರ್ ಡಿಪಾರ್ಟುಮೆಂಟಿಗೆ ಕೊಟ್ಟು ಬಿಟ್ಟು ಮೇಂಟೇನ್ ಮಾಡಿ ಇಲ್ಲದಿದ್ದರೆ ಏನಾದರೂ ವಿಧಾನ ಮಾಡಿ. ನಿಮ್ಮ ವ್ಯವಸಾಯ ಇಲಾಖೆಯ ಡೈರೆಕ್ಟರರನ್ನು ಕೇಳಿ, ಸರಿಮಾಡಿ.

ಮೆಡಿಸನ್ ಮಾರಾಟ ಮಾಡುವ ವಿಚಾರದಲ್ಲಿ ನನಗೆ ಒಂದಿಷ್ಟು ಸಂಶಯ ಬರ್ತ ಇದೆ. ಆಸ್ಪತ್ರೆಗಳಿಗೆ ರೇಷನ್ ಪದ್ಧತಿಯೊಂದನ್ನು ಇಟ್ಟಿರುತ್ತೀರಿ. ಅಂದರೆ ಅಲಾಟ್‌ಮೆಂಟ್ (ತಮ್ಮಲ್ಲಿ ಕೋಟ ಎಂದು ಹೇಳುತ್ತೀರಿ) ಪದ್ದತಿ ಇಟ್ಟಿದ್ದೀರಿ ಡಿಸ್ಟ್ರಿಕ್ಟು ಆಸ್ಪತ್ರೆಗೆ ಲೋಕಲ್ ಫಂಡ್ ಡಿಸ್ಪೆನ್ಸರಿಗೆ ಇಷ್ಟು ಇಂಗ್ಲೀಷ್ ಮೆಡಿಸನ್ಸ್, ಇಷ್ಟು ಇಂಡಿಜೀನಸ್ ಮೆಡಿಸೆನ್ಸ್ ಎಂದು ಕೋಟ ಫಿಕ್ಸ್ ಮಾಡಿದ್ದೀರಲ್ಲ ಇದು ಯಾವಾಗಿನ ಮಾತು? ಇದು ಎಷ್ಟೋ ವರ್ಷಗಳ ಹಿಂದೆ ಮಾಡಿದ್ದು. ಈ ಔಷಧಿಗಳ ಖರ್ಚೇನು, ಆವುಗಳ ಬೆಲೆ ಎಷ್ಟು ಹೆಚ್ಚಾಗಿದೆ ಎನ್ನುವುದನ್ನು ನೋಡಿ, ಆ ಬೆಲೆ ಹೆಚ್ಚಿದ ಪ್ರಮಾಣದಲ್ಲಿ, ಔಷಧಿ ಕೋಟ ಹೆಚ್ಚು ಮಾಡಿದ್ದೀರಾ? ಔಷಧಿ ಆಗ ಎಷ್ಟು ಖರ್ಚಾಗುತ್ತಿತ್ತು. ಈಗ ಎಷ್ಟು ಖರ್ಚಾಗುತ್ತಿದೆ ಎನ್ನುವುದನ್ನು ನೋಡಿದ್ದೀರಾ? ಸುಮ್ಮನೆ ಆಕ್ಷೇಪಣೆ ಮಾಡುತ್ತಿದ್ದೇನೆಂದು ಹೇಳಬಹುದು ಹಳ್ಳಿಗಳಲ್ಲಿ ಕಾಲಿಗೆ ಗಾಯವಾದರೆ ಕಟ್ಟುವುದಕ್ಕೆ ಬಟ್ಟೆಯಿಲ್ಲ: ಇದಿಷ್ಟು ಕನಿಷ್ಟ ನಿರೀಕ್ಷಣೆ ಮಾಡುವುದಕ್ಕೂ ಸಾಧ್ಯವಿಲ್ಲ. ದಯವಿಟ್ಟು ಇದನೆಲ್ಲಾ ಆಲೋಚನೆ ಮಾಡಬೇಕು. ಔಷಧಿಗಳನ್ನು ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ತರಿಸುವುದನ್ನು ವ್ಯವಸ್ಥಿತವಾಗಿ ಮಾಡಿಕೊಳ್ಳದೆ, ಇಲ್ಲಿ ಸ್ಟೋರ್ಸ್ ಇದೆ, ಪರ್ಚೇಸಿಂಗ್ ಡಿಪಾರ್ಟ್‌ಮೆಂಟಿದೆ. ಸೆಂಟ್ರಲ್ ಸ್ಟೋರ್ಸ್ ಯಿಂದ ಕಳುಹಿಸುತ್ತೇವೆಂದು ಹೇಳಬಹುದು. ಸಿಬ್ಬಂದಿ ಇಟ್ಟುಕೊಂಡು, ಅದನ್ನು ಯಥೋಚಿತವಾಗಿ ಬೆಳೆಸುತ್ತಿದ್ದರೂ, ಮೆಡಿಸಿನ್ನುಗಳನ್ನು ಸಮರ್ಪಕವಾಗಿ ಆಲಾಟ್ ಮಾಡಬೇಡವೇ? ಒಂದು ಲೋಕಲ್ ಫಂಡ್ ಡಿಸ್ಪೆನ್ಸರಿಗೆ 1930ನೆಯ ಇಸವಿಯಲ್ಲಿ ಎಷ್ಟು ದುಡ್ಡಿನ ಆಲಾಟ್ಮೆಂಟ್ ಇತ್ತೋ, ಇವತ್ತಿನವರೆಗೂ ಅಷ್ಟೇ ದುಡ್ಡು ಕೊಡುತ್ತಾರೆ, ಹೆಚ್ಚಾಗಿ ಕೊಡುವುದಿಲ್ಲ. ಆಸ್ಪತ್ರೆಗಳನ್ನು ಏಕೆ ಕೊಡಬೇಕು, ಸ್ವಾಮಿ ಅವುಗಳನ್ನು ಮಾಡುವುದು ಹೇಗೆ? ನಮ್ಮ ಹಳ್ಳಿಗಳಲ್ಲಿರತಕ್ಕ ಆಸ್ಪತ್ರೆಗಳು ಬರೀ ಲೋಕಲ್ ಫಂಡ್ ಡಿಸ್ಪೆನ್ಸರಿಗಳೇ ಹೊರತು, ನಿಮ್ಮ ಆಸ್ಪತ್ರೆಗಳಿವೆಯೇ? ಡಿಸ್ಟ್ರಿಕ್ಟ್ ಹೆಡ್ ಕ್ವಾರ್ಟರುಗಳಲ್ಲಿ ನಿಮ್ಮ ಸಿವಿಲ್ ಆಸ್ಪತ್ರೆಗಳಿರಬಹುದು. ಆಸ್ಪತ್ರೆಗಳ ಕಂಟ್ರಿಬ್ಯೂಷನ್ ವಿಚಾರದಲ್ಲಿ, ಹಳ್ಳಿಗಳಿಗೆ ಯಥಾ ಪ್ರಕಾರ ಮಕ್ಕೀಕಾಮಕ್ಕಿ ಇದೆ. ಕೊಡತಕ್ಕಂಥ ವಿಚಾರದಲ್ಲಿ ಸಹ ಹಾಗೆಯೇ ಬಹಳ ಕಡಿಮೆ ಮಾಡಿದ್ದೀರಿ, ಕಂಟ್ರಿಬ್ಯೂಷನ್ ಮೊಬಲಗನ್ನು ಸರ್ಕಾರ ಡಿಸ್ಟ್ರಿಕ್ಟ್ ಬೋರ್ಡಿಗೆ ಕೊಡಬೇಕು, ವಿಲೇಜ್ ಪಂಚಾಯತಿಗೆ ಕೊಡಬೇಕು; ಆವರು ನಿಮಗೆ ಕೊಡಬೇಕಾಗುತ್ತದೆ.

ಶ್ರೀ ಅಣ್ಣಾರಾವ್ ಗಣಮುಖಿ (ವಿದ್ಯಾಶಾಖೆಯ ಮಂತ್ರಿಗಳು):- ಮಕ್ಕಿಕಾಮಕ್ಕಿ ಎಂದರೇನು.

ಶ್ರೀ ಕೆ.ಕೆಂಚಪ್ಪ- 70 ಮಾಡಿದ್ದಾರೆ 70 ಬಂದಿದೆ Sense of proportion ಅದರಲ್ಲಿ ಇಲ್ಲ: ರೀಸನ್ ಇಲ್ಲ, ರೈಮ್ ಇಲ್ಲ, ಯೋಚನೆ ಇಲ್ಲ. ಹೀಗೆ ಮಾಡುವುದಕ್ಕೆ ಮಕ್ಕೀಕಾಮುಕ್ಕಿ ಎಂದು ಹೇಳುತ್ತಾರೆ. ಮಿಂಟೋ ಆಸ್ಪತ್ರೆ ವಿಚಾರದಲ್ಲಿ ತಾವು ಎಷ್ಟು ಸುಧಾರಕರು ಎಂದು ಹೇಳುತ್ತೇನೆ. ಯಾವುದೋ ಒಂದು ಕಾಲದಲ್ಲಿ ಅಲ್ಲಿ ಲಿಫ್ಟ್ ಇತ್ತು. ಅದನ್ನು ಯಾವುದೋ ಒಂದು ಕಾಲದಲ್ಲಿ ಕೈಯಲ್ಲಿ ಎಳೆಯುತ್ತಾ ಇದ್ದರು. ಕೈಯಲ್ಲಿ ಎಳೆದರೆ ಪ್ರಗತಿದಾಯಕವಾಗಿ ಕೆಲಸ ಮಾಡುತ್ತಿದ್ದೀರಿ ಎಂದು ಹೇಳೋಣವೇ?

ಶ್ರೀ ಪಾರ್ಥಸಾರಥಿ (ಮಲ್ಲೇಶ್ವರಂ):- ಅದು ಬಿದ್ದು ಹೋಗಿದೆ. ಉಪಯೋಗಿಸುತ್ತಾ ಇಲ್ಲ.

ಶ್ರೀ ಕೆಂಚಪ್ಪ– ಯಾವರೀತಿ ಕೆಲಸ ಮಾಡುತ್ತಿದ್ದೀರಿ ಎನ್ನುವುದಕ್ಕೆ ಒಂದು ಸ್ಯಾಂಪಲ್ ಕೊಟ್ಟೆ ಅದು ಒಂದು ದೊಡ್ಡ ಆಸ್ಪತ್ರೆ; ಕಣ್ಣಾಸ್ಪತ್ರೆ ಹೆಸರು ವಾಸಿಯಾದದ್ದು. ಅಂಥ ಆಸ್ಪತ್ರೆಯಲ್ಲಿ ಒಬ್ಬರೇ ಒಬ್ಬರು ಸ್ಪೆಷಲಿಸ್ಟ್ : ಮುಗಿದು ಹೋಯಿತು; ಅವರು ಬೆಳಗಿನಿಂದ ಸಾಯಂಕಾಲದವರೆಗೆ ಪರೀಕ್ಷೆ ಮಾಡಬೇಕು ಕ್ಯೂ ನಿಂತವರಲ್ಲಿ ಕಾಲು ಭಾಗದಷ್ಟು ಅಟೆಂಡ್ ಮಾಡಬಹುದು ; 100 ರಲ್ಲಿ 75 ಜನ ಹಿಂದಕ್ಕೆ ಹೋಗಬೇಕು ತಾವು ಡಾಕ್ಟರಾಗಿದ್ದರೂ, ಮ್ಯಾಥಮ್ಯಾಟಿಕ್ಸ್ ಸ್ಟಡಿ ಮಾಡಿರಬೇಕು . ಒಬ್ಬ ಡಾಕ್ಟರು ಒಬ್ಬ ಮನುಷ್ಯನನ್ನು ಪರೀಕ್ಷೆ ಮಾಡಬೇಕಾದರೆ ಎಷ್ಟು ಕಾಲ ಬೇಕಾಗುತ್ತದೆ. ಎಷ್ಟು ಪೇಷಂಟುಗಳಿಗೆ ಆಟೆಂಡ್ ಮಾಡುವುದಕ್ಕೆ ಸಾಧ್ಯ ಎನ್ನುವುದನ್ನು ನೋಡಬೇಕು.

ಶ್ರೀ ಟಿ.ಪಾರ್ಥಸಾರಥಿ– ಅವರಿಗೆ ಐದು ನಿಮಿಷದಲ್ಲಿ ಪರೀಕ್ಷೆ ಮಾಡಿ ಕನ್ನಡಕ ಕೊಟ್ಟರು.

ಶ್ರೀ ಕೆ. ಕೆಂಚಪ್ಪ– ನನಗೋಸ್ಕರ ನಾನು ಇಲ್ಲಿಲ್ಲ; ಪ್ರಜೆಗಳಿಗೋಸ್ಕರ ಇದ್ದೇನೆ. ಅದಕ್ಕೋಸ್ಕರ ಅಲ್ಲಿನ ವಿಚಾರಗಳನ್ನು ಹೇಳುತ್ತಿದ್ದೇನೆ. ಇನ್ನು ಖರ್ಚಿನ ವಿಚಾರದಲ್ಲಿ ಹೇಳುವುದಾದರೆ ಮಿಂಟೋ ಆಸ್ಪತ್ರೆಯ ಬಗ್ಗೆ 2,100 ರೂಪಾಯಿಗಳನ್ನು ಏತಕ್ಕಾಗಿ ಉಳಿಸಿ ಕೊಂಡಿರುವಿರಿ? ಲೋಕಲ್ ಫಂಡ್ ಡಿಸ್ಪೆನ್ಸರಿ ಬಾಬಿನಲ್ಲಿ 22 ಸಾವಿರ ರೂಪಾಯಿ ಕಡಿಮೆ ಖರ್ಚು ಏತಕ್ಕೆ ಮಾಡಿದ್ದೀರಿ? ಇದರಿಂದ ಏನು ತಿಳಿದುಬರುತ್ತದೆಂದರೆ ನೀವು ಸರಿಯಾಗಿ ಕೆಲಸ ಮಾಡಲಿಲ್ಲ. ನೀವು ಮಾಡಬೇಕಾದ ಕೆಲಸವನ್ನು ಮಾಡದೇ ಇದ್ದರೆ ಕರ್ತವ್ಯಲೋಪವಾಗುತ್ತದೆ. ಆಸ್ಪತ್ರೆಗಳಿಗೆ ಡಾಕ್ಟರರನ್ನು ಕಳಿಸಿಕೊಡದೇ ಇರುವುದರಿಂದ ದುಡ್ಡು ಉಳಿಸಿಕೊಂಡಿರುವಿರಿ. ಇದರಿಂದ ಆಸ್ಪತ್ರೆಗಳು ಸರಿಯಾಗಿ ನಡೆಯಲಿಲ್ಲ ಎಂದು ಅರ್ಥವಾಗುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಾಪನೆ ಮಾಡಬೇಕಾಗಿತ್ತು ಆಸ್ಪತ್ರೆಗಳ ವಿಚಾರದಲ್ಲಿಯೂ ಸಹ ಹೆಚ್ಚಾಗಿ ** ಉಳಿಸಿಕೊಂಡಿದ್ದೀರಿ. ಮೊದಲನೆಯ ಪಂಚವಾರ್ಷಿಕ ಯೋಜನೆ ಯಲ್ಲಿ 57 ಆಸ್ಪತ್ರೆಗಳನ್ನು ನಮ್ಮ ಸಂಸ್ಥಾನ'ದಲ್ಲಿ ತೆಗೆಯುತ್ತೇವೆ ಎಂದು ಹೇಳಿದ್ದರು. ಇನ್ನೊಂದು ವಿಷಯ ಏನೆಂದರೆ, ತಾಲ್ಲೂಕುಗಳಲ್ಲಿ ಆಸ್ಪತ್ರೆಗಳನ್ನು ಲೋಕಲ್ ಫಂಡಿನಿಂದ ತೆರೆಯಬೇಡಿರಿ. ಲೋಕಲ್ ಫಂಡ್ ಡಿಸ್ಪೆನ್ಸರಿಗಳಲ್ಲಿ ಬಹಳ ಅದ್ವಾನದಲ್ಲಿ ನಡೆಯುತ್ತಿದೆ. ಅಂಥವುಗಳಲ್ಲಿ dual Government ಇದೆ ಡಾಕ್ಟರರನ್ನು ನೇಮಿಸುವುದು ಒಬ್ಬರು ಆದರೆ ಔಷಧಗಳನ್ನು ಒದಗಿಸುವವರು ಮತ್ತೊಬ್ಬರು ಪರದೇಶದಿಂದ ತರಿಸತಕ್ಕ ಔಷಧಿಗಳನ್ನು ಸರಕಾರ ಕೊಡಬೇಕು. ದೇಶೀಯ ಔಷಧಿಗಳನ್ನು ಲೋಕಲ್ ಬೋರ್ಡಿನವರು ಕೊಡಬೇಕು ಎಂದು ಇದೆ. ಈ ರೀತಿ ಇಬ್ಬಂದಿಯ ಆಡಳಿತ ಸರ್ಕಾರ ಇಟ್ಟುಕೊಂಡರೆ ಆಸ್ಪತ್ರೆಗಳು ಸರಿಯಾಗಿ ನಡೆಯುವುದಿಲ್ಲ. ಇದನ್ನು ಬದಲಾವಣೆ ಮಾಡಬೇಕು. ನಾನು ಅತ್ಯಂತ ಕಳಕಳಿಯಿಂದ ಹೇಳುವುದು ಏನೆಂದರೆ ಆಯುರ್ವೇದವನ್ನು ನೀವು ಎಲ್ಲಿಯವರೆಗೆ ಉಪೇಕ್ಷೆಮಾಡುತ್ತಿರೋ ಅಲ್ಲಿಯವರೆಗೆ ನಿಮ್ಮಲ್ಲಿ ಅಣು ಮಾತ್ರವೂ ದೇಶಭಕ್ತಿ ಇಲ್ಲ ಎಂದು ಹೇಳುತ್ತೇನೆ. ಆಯುರ್ವೇದದ ಬಗ್ಗೆ ನಿಮ್ಮಲ್ಲಿ ಏನೇನೂ ಒಳ್ಳೆಯ ಮನೋಭಾವವಿಲ್ಲ ಎಂದು ನಾನು ಹೇಳುತ್ತೇನೆ. ಇಷ್ಟು ಹೇಳಿ ನನ್ನ ಭಾಷಣ ಮುಗಿಸುತ್ತೇನೆ.

* * * * *

# ಕಬ್ಬಿನ ತೆರಿಗೆ : ರೈತಪರ ಧ್ವನಿ

* ಶ್ರೀ ಕೆ. ಕೆಂಚಪ್ಪ, - ಮಾನ್ಯ ಅಧ್ಯಕ್ಷರೇ, ಕೆಲವು ಸಂದರ್ಭಗಳಲ್ಲಿ ಎಂದರೆ ಫ್ಯಾಕ್ಟರಿಯ ಮೇಲೆ ಒಂದು ಟನ್ನಿಗೆ ಆರು ರೂಪಾಯಿಗಳ ಸೆಸ್ ಹಾಕಬಹುದು ಎಂದು ತಂದಿರತಕ್ಕಈ ಮಸೂದೆಯನ್ನು ನಾನು ಸಂಪೂರ್ಣವಾಗಿ ವಿರೋಧಿಸಬೇಕೆಂದು ನಿಂತಿದ್ದೇನೆ. ಅದಕ್ಕೆ ಕಾರಣವಿಷ್ಟೆ: ಮೊದಲನೆಯ ಕಾರಣ ಈಗಾಗಲೇ ಜಮೀನಿನಲ್ಲಿ ಬೆಳೆಯತಕ್ಕ ಅನೇಕಾನೇಕ ವಸ್ತುಗಳಲ್ಲಿ ನಾನಾ ರೀತಿಯಾದ ಕಂದಾಯಗಳನ್ನು ಹಾಕಿದ್ದಾರೆ, ತೆರಿಗೆಗಳನ್ನು ಹಾಕಿದ್ದಾರೆ ಮತ್ತು ಇನ್ನೂ ಬೇಕಾದಷ್ಟು ರೀತಿಯಲ್ಲಿ ರೈತರಿಂದ ಹಣ ವಸೂಲ್ಮಾಡುತ್ತಿದ್ದಾರೆ. ಜಮೀನಿನ ಕಂದಾಯವಿದೆ, ಅದರ ಮೇಲೆ ಸೆಸ್ ಇದೆ.

**Sri T. Mariappa:-** One word of interruption with your permission, Sir. My friend is under the impression that the cane cultivators are going to pay the cess. But it is only the factory owner who pays it and he does not collect it from the raiyat.

ಶ್ರೀ ಕೆ. ಕೆಂಚಪ್ಪ ಫ್ಯಾಕ್ಟರಿ ಮಾಲೀಕನಾದವನು ಈ ಸೆಸ್ಸನ್ನು ಕೊಡಬೇಕು, ಅಥವಾ ಬೇರೆಯವರು ಈ ಸೆಸ್ಸನ್ನು ಕೊಡಬೇಕು ಎನ್ನುವ ಕಲ್ಪನೆನನಗಿದೆ ಎಂದು ಇವರಿಗೆ ಹೇಗೆ ಗೊತ್ತಾಯಿತೋ ತಿಳಿಯದು. ನನ್ನ ಮಾತಿನಲ್ಲಿಲ್ಲದಿರುವುದನ್ನು ಹೇಳುವ ಅಸಾಧಾರಣ ಶಕ್ತಿಯನ್ನು ಹಣಕಾಸಿನ ಮಂತ್ರಿಗಳು ಪಡೆದುಕೊಂಡಿದ್ದಾರೆ. ಅದಕ್ಕೆ ಆಶ್ಚರ್ಯಪಡಬೇಕಾಗಿದೆ.

(Mr. DEPUTY SPEAKER in the Chair)

ಸ್ವಾಮಿ, ಕಬ್ಬಿನ ಮೇಲೆ ಸೆಸ್ ಹಾಕತಕ್ಕ ವಿಧಾನವನ್ನು ಅನುಸರಿಸುವುದರಲ್ಲಿ ನಾನಾ ರೀತಿಯ ಭಾವನೆಗಳನ್ನು ನಾವು ತೆಗೆದುಕೊಳ್ಳಬೇಕಾಗುತ್ತದೆ. ಮೊದಲನೆಯದಾಗಿ ಈಗಾಗಲೇ ಬೆಳೆ ಬೆಳೆಯುವುದಕ್ಕೆ ನಾನಾ ರೀತಿಯಾದ ಸೆಸ್‌ಗಳನ್ನು ಹಾಕಿದ್ದಾರೆ. ಲೋಕಲ್ ಫಂಡ್ ಸೆಸ್ ಇದೆ, ಎಜುಕೇಷನ್ ಸೆಸ್ ಇದೆ, ಇತರ ರೀತಿಯ ಸೆಸ್‌ಗಳಿವೆ. ಜಮೀನಿನ ಮೇಲೆ ಕಂದಾಯ ಒಂದೇ ಇರಬೇಕೆಂದು ಅರ್ಥಶಾಸ್ತ್ರದಲ್ಲಿದೆ. ಯಾವುದಕ್ಕೇ ಆಗಲಿ, ನಾನಾ ರೀತಿಯಾದ ತೆರಿಗೆಗಳನ್ನು ಹಾಕುವುದರ ಮೂಲಕ ಜನರಿಗೆ ಅದರಿಂದ ಭಾರವನ್ನು ಹೆಚ್ಚು ಮಾಡತಕ್ಕದ್ದು ಅರ್ಥಶಾಸ್ತ್ರದ ಮೂಲಭೂತ ತತ್ತ್ವಕ್ಕೆ ವಿರೋಧವಾದುದು. ಇತ್ತೀಚೆಗೆ multiple tax ಅಥವಾ ವಿವಿಧ ರೀತಿಯ ತೆರಿಗೆಗಳನ್ನು ಹಾಕುತ್ತಿರುವುದನ್ನು ನೋಡಿದರೆ ಈ ತತ್ತ್ವವನ್ನೇ ಕಡೆಗಣಿಸಿದಂತಾಗಿದೆ. ಈ ರೀತಿ ತೆರಿಗೆಗಳನ್ನು ಹಾಕುವುದೇ ಒಂದು ಕ್ರಮವೆನ್ನುವ ಭಾವನೆಯನ್ನುಂಟುಮಾಡುವಂತೆ ಇಂಥ ಮಸೂದೆಗಳನ್ನು ತರುವುದು

ರೂಢಿಯಾಗಿದೆ. ಈ ದೃಷ್ಟಿಯಿಂದ ನಾವು ತೆರಿಗೆ ಹಾಕುವುದನ್ನು ವಿರೋಧಿಸಬೇಕಾಗಿದೆ. ಇದನ್ನು ಸೆಸ್ ಎಂದು ಕರೆಯುತ್ತಿದ್ದಾರೆ. ಸೆಸ್ ಎಂದರೆ, ಇದುವರೆಗೂ ನಾವು ತಿಳಿದುಕೊಂಡಿರುವ ಹಾಗೆ, ಜಮೀನು ಕಂದಾಯದ ಮೇಲೆ ಯಾವುದಾದರೂ ಒಂದು ಉದ್ದೇಶಕ್ಕಾಗಿ ಸೆಸ್ ಹಾಕಬಹುದು ; ಎಂದರೆ ಒಂದು ಜಮೀನಿಗೆ ಐದು ರೂಪಾಯಿ ಕಂದಾಯವಿದ್ದರೆ ಪ್ರತಿಯೊಂದು ರೂಪಾಯಿಗೂ ಎಜುಕೇಷನ್ ಸೆಸ್ ಒಂದಾಣೆ, ಈ ರೀತಿಯಾಗಿ ಹಾಕುತ್ತಿದ್ದರು. ಈಗ ಇದು ಒಂದು ಮಾರ್ಪಾಟದ ರೂಪವನ್ನು ತಾಳಿದೆ. ಒಂದು ಟನ್ ಕಬ್ಬಿಗೆ ಆರು ರೂಪಾಯಿಗಳ ಪ್ರಕಾರ ವಸೂಲ್ಮಾಡತಕ್ಕದ್ದು ಒಂದು ಸೆಸ್. ಉತ್ಪತ್ತಿಯನ್ನು ತೆಗೆದುಕೊಳ್ಳತಕ್ಕವರು ಒಂದು ಸಂಸ್ಥೆಯಾಗಿರಲಿ, ಬಿಡಿ ಮನುಷ್ಯ ನಾಗಿರಲಿ, ಪ್ರಜೆಗಳಿಗೆ ಒಂದು ಸರಿಯಾದ ಭಾವನೆ ಬರತಕ್ಕ ರೀತಿಯಲ್ಲಿ ವ್ಯವಹಾರವನ್ನು ನಡೆಸಬೇಕಾದುದು ನಮ್ಮ ಕರ್ತವ್ಯವಾಗಿದೆ. ಆ ರೀತಿ ಇದು ಕಾಣುವುದಿಲ್ಲ. ಅದರ ಬದಲು ಹೀಗೆ ಹಾಕುವುರಿಂದ ಇದು ಏನೋ ಒಂದು ಸೆಸ್ ಎನ್ನುವ ರೀತಿಯಲ್ಲಿ ಹೇಳುವ ಹಾಗೆ ಕಾಣುತ್ತದೆ.

ಇದನ್ನು ಬಿಟ್ಟು ಮುಂದೆ ಹೋದರೆ, ಸೆಸ್ ಎನ್ನುವುದನ್ನು ಯಾವುದಾದರೂ ಒಂದು ಉದ್ದೇಶಕ್ಕಾಗಿ ಹಾಕಬೇಕೆಂದು ಹೇಳುವಾಗ ಮಾನ್ಯಮಂತ್ರಿಗಳು ಈ ಸೆಸ್ ಹಾಕುವುದು ಕಬ್ಬನ್ನು ಉತ್ತಮಪಡಿಸುವುದಕ್ಕೆ, ಬೆಳೆ ಹೆಚ್ಚಿಸುವುದಕ್ಕೆ, ತಳಿಯನ್ನು ಉತ್ತಮಪಡಿಸುವುದಕ್ಕೆ, ರಸ್ತೆಗಳನ್ನು ಮಾಡಿಸುವುದಕ್ಕೆ ಎಂದು ಹೇಳಿ, ಇಲ್ಲಿಯೂ ಕೂಡ ಒಂದು ತಪ್ಪು ದಾರಿಯನ್ನು ಹಿಡಿಸಲು ಕಾರಣರಾಗಿದ್ದಾರೆ. ಹೇಗೆಂದರೆ, ಈ ಮಸೂದೆಯ 11ನೆಯ ಖಂಡದಲ್ಲಿ ಎಲ್ಲವನ್ನೂ ಹೇಳಿ, ಕೊನೆಯಲ್ಲಿ "for such other prescribed purposes" ಎಂದು ಹೇಳಿದ್ದಾರೆ. ಮೊದಲು ಕಬ್ಬಿಗೆ ಸಂಬಂಧಪಟ್ಟ ಅನೇಕ ವಿಚಾರಗಳನ್ನು ಹೇಳಿ, ಅದರಲ್ಲಿ "Meeting the expenses in connection with the administration of the State sugarcanes fund and the functining of the Advisory Committees." ಎಂದು ನಮೂದಿಸಿದ್ದಾರೆ. ಸಮಿತಿಯೇನೆಂಬುದು ಅವರಿಗೂ ಗೊತ್ತು ನಮಗೂ ಗೊತ್ತು ಈ ರೀತಿಯ ಸಮಿತಿಗಳು ನಮ್ಮ ರಾಜ್ಯದಲ್ಲಿ ಒಂದಲ್ಲ, ಎರಡಲ್ಲ, ಎಷ್ಟೋ ಇವೆ. ಯಾರು ಬೆಲ್ಲ ತಯಾರುಮಾಡುತ್ತಾರೋ, ಯಾರು ಸಕ್ಕರೆ ತಯಾರುಮಾಡಲು ಕಾರ್ಖಾನೆ ಮಾಡುತ್ತಾರೋ ಅಲ್ಲಿಗೆಲ್ಲ **** ಸಮಿತಿ ಎಂದು ಆಡಳಿತ ನಡೆಸುವವರು ನೇಮಿಸಿ, ಈ ಸಮಿತಿಗಳ ಖರ್ಚನ್ನೆಲ್ಲ ಅಯಾ ಕೈಗಾರಿಕೆಯಿಂದಲೇ ನಿಭಾಯಿಸಬೇಕೆಂದು ಮಾಡಿದ್ದಾರೆ. ವಯಸ್ಕರ ವಿದ್ಯಾಭ್ಯಾಸ ಸಮಿತಿ ಇದೆ, ಭಿಕ್ಷುಕರ ಸಮಿತಿ ಇದೆ, ಹೀಗೆಯೇ ಎಷ್ಟೋ ಸಮಿತಿಗಳಿವೆ ; ಸಂಸ್ಕೃತಿ ಪ್ರಚಾರ ಸಮಿತಿ ಇದೆ. ಇವಕ್ಕೆಲ್ಲ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಈ ಸಮಿತಿಯಲ್ಲಿರುವವರೂ ಭಿಕ್ಷಾಟನೆ ಮಾಡುತ್ತಾರೋ ಏನೋ ಎಂಬ ಭಾವನೆ ಬರುವ ಹಾಗಿದೆ. ಹೀಗಿರುವಾಗ ಕಬ್ಬಿನ ಅಭಿವೃದ್ಧಿ ಮಾಡುವುದಕ್ಕೆ ಇದನ್ನು ಉಪಯೋಗಿಸುತ್ತೇವೆಂದರೆ, ಜನರನ್ನು ತಪ್ಪು ದಾರಿಗೆಳೆಯುವ ಹಾಗಿದೆ. 'Other purposes' ಎಂದರೆ ಬೇರೆ ಯಾವುದಕ್ಕಾದರೂ

ಖರ್ಚು ಮಾಡಬಹುದು. ಬಹಳ ಹಿಂದಿನ ಕಾಲದ ಮಾತು, 1888ನೆಯ ಇಸವಿಯಲ್ಲಿ ಭೂಕಂದಾಯದ ಮೇಲೆ ಸೆಸ್ ಹಾಕಬೇಕಾದುದನ್ನು ಬರಿಯ ರಸ್ತೆ ಮಾಡುವುದಕ್ಕೆ ಉಪಯೋಗಮಾಡುವುದನ್ನು ಲೋಕಲ್ ಫಂಡ್ ಸೆಸ್ ಎಂದು ಅದನ್ನು ಮಾಡಿರುವುದು ಕಾನೂನಿನಲ್ಲಿದೆ. ಒಂದು ಸೆಸ್ ಹಾಕಿದ ಮೇಲೆ ಆ ಕೆಲಸಕ್ಕೆ ಆ ಹಣವನ್ನು ಉಪಯೋಗಿಸಬೇಕೆಂಬ ಅಭಿಪ್ರಾಯ ತೀವ್ರವಾಗಿ ಬಂದಿದೆ. ಕಬ್ಬು ಬೆಳೆಯುವುದಕ್ಕೂ ಇತರ ಕೆಲಸಗಳಿಗೆ ಸೆಸ್ ಹಾಕಬೇಕೆಂದು ಮಾಡಿದರೆ, ನಾಳೆ ಎಕ್ಸೈಜು ಡ್ಯೂಟಿ ಹಾಕಿ ತಂಬಾಕು ಬೆಳೆಯೋಣ ಎಂದು ಹೇಳಬಹುದು, ಹೀಗೆಯೇ ದೇಶದಲ್ಲಿ ವ್ಯವಸಾಯದ ಅಭಿವೃದ್ಧಿಗೆ ಹಣ ಬೇಕಾದರೆ, ಸಾಮಾನ್ಯ ಹುಟ್ಟುವಳಿಯಿಂದ ಖರ್ಚು ಮಾಡಿದರೆಪ್ರತಿಯೊಂದಕ್ಕೂ ಸೆಸ್ ಹಾಕಬಹುದು. ಹೀಗೆ ಮಾಡುವುದು ಸರಿಯಲ್ಲ. ಈ ರೀತಿ ಸೆಸ್ ಹಾಕುವ ಕಾಲದಲ್ಲಿ ಹಿಂದೆ ಬೊಂಬಾಯಿನಲ್ಲಿ ಹತ್ತು ರೂಪಾಯಿ ಇತ್ತು, ಹೈದರಾಬಾದಿನಲ್ಲಿ ಆರು ರೂಪಾಯಿ ಇತ್ತು, ಮದರಾಸಿನಲ್ಲಿ ನಾಲ್ಕು ರೂಪಾಯಿ ಇತ್ತು, ಮೈಸೂರಿನಲ್ಲಿ ಆರು ರೂಪಾಯಿ ಇತ್ತು ಎಂದು ಹೇಳುತ್ತಾರೆ. ಬಳ್ಳಾರಿ ಮೈಸೂರಿಗೆ ಸೇರಿದ ಮೇಲೆ ಅಲ್ಲಿಯೂ ಆರು ರೂಪಾಯಿ ಮಾಡಿದ್ದಾರೆ. ಈ ರೀತಿ ಅವರೇನೋ ಮಾಡಿದ್ದರು, ಅದನ್ನು ಸರಿಪಡಿಸುತ್ತೇವೆ, ಒಪ್ಪಿಕೊಳ್ಳಿ ಎನ್ನುವುದು ಒಳ್ಳೆಯದಲ್ಲ. ಮೈಸೂರು ಸಂಸ್ಥಾನದಲ್ಲಿ ಕಬ್ಬಿನ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಕಾರ್ಖಾನೆ ಇರುವ ಕಡೆಯೆಲ್ಲಾ ಹಾಕಲಿಲ್ಲ, ಒಂದಕ್ಕೆ ಮಾತ್ರ ಹಾಕಿದರು. ಮೈಸೂರು ಸಕ್ಕರೆ ಕಾರ್ಖಾನೆಗೆ ಮಾತ್ರ ಹಾಕಿದರು. ಅದಕ್ಕೆ ಕಾರಣವನ್ನು ಈಗ ಹೇಳುವುದಿಲ್ಲ.

ಶ್ರೀ ಟಿ. ಮರಿಯಪ್ಪ :- ಹಳೆಯ ಮೈಸೂರಿನಲ್ಲಿ ಒಂದೇ ಒಂದು ಕಾರ್ಖಾನೆ ಇದ್ದುದು.

ಶ್ರೀ ಕೆ. ಕೆಂಚಪ್ಪ:- ಈಗ ಇಲ್ಲಿ ಹೆಳಿರುವ ಡೆಫನಿಷನ್ ಪ್ರಕಾರ ಎಷ್ಟಾಗಬಹುದು ಈಗ ಷಿಕಾರಿಪುರದಲ್ಲಿ ಬೆಲ್ಲ ಮಾಡುವುದಕ್ಕೆ ಹೊರಟರೆ ಅದಕ್ಕೂ ಹಾಕಲು ಹೋಗುತ್ತಿದ್ದಾರೆ. ಎರಡನೆಯ ಪುಟದ 2(b) ಖಂಡದಲ್ಲಿ " 'Factory' means any premises including the precincts thereof, etc." ಎಂದಿದೆ. ಇದು ಏನು ಭಾಷೆಯೋ, ಅವರಿಗೇ ಗೊತ್ತು. ನಾನು ಡಿಕ್ಷನರಿ ಹುಡುಕಿ ನೋಡಿದ್ದೂ ಆಯಿತು. ಏನೋ ಮಕ್ಕೀಕಾ ಮಕ್ಕಿ ಮಾಡಿದ್ದಾರೆ. ನಾನು ಇಂಡಿಯಾ ಪೀನಲ್ ಕೋಡ್ ನೋಡಿದ್ದೇನೆ. ಇತರ ಕಾನೂನುಗಳನ್ನೂ ನೋಡಿದ್ದೇನೆ, ಇಂಥ ಡೆಫನಿಷನ್ ಅವರಿಗೂ ಹೊಳೆಯಲಿಲ್ಲ

ಶ್ರೀ ಟಿ. ಮರಿಯಪ್ಪ:- ನಾನೂ ನೀವು ಲಾ ಕಾಲೇಜಿನಲ್ಲಿದ್ದೆವು.

ಶ್ರೀ ಕೆ. ಕೆಂಚಪ್ಪ:- ಕತ್ತೆ includes donkey ಎನ್ನುವ ಹಾಗಿದೆ.

"Factory means any premises including the precincts thereof wherein twenty or more workers are working or were working on any day of

the preceding twelve months and in any part of which any manufacturing process connected with the production of sugar by means of vacuum pans is being carried on, or is ordinarily, carried on, with the aid of power;

ಎಂದಿದೆ Power ಉಪಯೋಗಿಸಿ ಮಾಡಿದರೆ ಆಯಿತು; 'sugar' ಶಬ್ದ ಡಿಫೈನ್ ಮಾಡುವುದನ್ನು ಕೈಬಿಟ್ಟರು, ಅದರೆ 11ನೆಯ ಖಂಡದಲ್ಲಿ such other prescribed purposes ಆದಮೇಲೆ ಒಂದು ಕುಂಟು ಪಂಚಾಯತಿಯನ್ನು ಸೇರಿಸಿದ್ದಾರೆ. ಅದರಲ್ಲಿ, 'for the purposes of clause (b) 'sugar' includes Gur, Khandasari sugar and sugar candy' ಎಂದು ಸೇರಿಸಿದ್ದಾರೆ. ಇದೇನು ಗುರ್ ಎಂದೋ ಗರ್ ಎಂದೋ ಗೊತ್ತಿಲ್ಲ. ಗರ್ ಎಂದರೆ ಮನೆಯೆ.

ಶ್ರೀ ಟಿ. ಮರಿಯಪ್ಪ – ಗೂಡ್ ಎಂದಿರಬೇಕಾಗಿತ್ತು. ಏನು ಮಾಡುವುದು? ಎಲ್ಲರೂ ಇದೇ ರೀತಿ ಬರೆಯುತ್ತಾರೆ, ಇಲ್ಲಿ ಬೆಲ್ಲ ಎಂದರ್ಥ.

ಶ್ರೀ ಕೆ. ಕೆಂಚಪ್ಪ – ಗುರ್ ಎಂದರೆ ನಾಯಿ ಎಂದೂ ಅರ್ಥವಾಗುತ್ತದೆ. (ನಗು !)

ಶ್ರೀ ಟಿ. ಮರಿಯಪ್ಪ – ನಾಯಿಯೂ ಅಲ್ಲ, ಮನೆಯೂ ಅಲ್ಲ, ಇಲ್ಲಿ ಬೆಲ್ಲ ಎಂದರ್ಥ.

ಶ್ರೀ ಕೆ. ಕೆಂಚಪ್ಪ – ಬೆಲ್ಲ ಮಾಡತಕ್ಕ ಸ್ಥಳಕ್ಕೆ ಕಬ್ಬು ತಂದರೆ ಅದೆಲ್ಲಕ್ಕೂ ಸೆಸ್ ಹಾಕುತ್ತಾರೆ.

**Sri. K. Puttaswamy** **(Mysore).** On a point of clarification.

ಶ್ರೀ ಕೆ. ಕೆಂಚಪ್ಪ – ಅದಕ್ಕೆ ಎಕ್ಸಪ್ಲನೇಷನ್ ಕೂಡ ಇಲ್ಲ. ಅದು ಅರ್ಥವೇ ಆಗಲಿಲ್ಲ. 'Development of sugar industry in the State' ಎಂದಿದೆ. ಆ ಬಗ್ಗೆ ಏನು ಮಾಡುತ್ತಿರುವುದು! ಡೆವಲಪ್ಮೆಂಟ್ ಎಂದರೆ ಈ ಕೈಗಾರಿಕೆಯನ್ನು ಅಭಿವೃದ್ಧಿಪಡಿಸುವುದು. ಅದಕ್ಕಾಗಿ ಕಾರ್ಖಾನೆಯಲ್ಲಿ ತಯಾರುಮಾಡಿದರೆ ಸುಂಕ ಹಾಕುತ್ತಿದ್ದೀರಿ.

**"Application of proceeds of cess.-** (1) The proceeds of the cess and fees recovered under this Act shall first be credited to the Consolidated Fund of the State and shall after deduction of expenses of collection and recovery be transferred to a separate fund called the State Sugarcane Cess Fund.

(2) The fund shall be expended in such manner and under such conditions as may be prescribed, for the purposes……

ಎಂದಿದೆ. ಹಾಗಿರುವಾಗ ಸಕ್ಕರೆ ಎಲ್ಲಿಮಾಡುತ್ತಾರೋ ಅಲ್ಲಿಯೇ ಎಲ್ಲಾ ಏಕೆ ಅನ್ವಯಿಸುವುದಿಲ್ಲ ಎಂಬುದು ನನ್ನ ಪಾಯಿಂಟ್. ಕಾರ್ಖಾನೆಗೆ ತರುವಾಗ ಸೆಸ್ ಹಾಕಬೇಕೆಂದು ಹೇಳುವಾಗ ಕೇನ್ ಡೆವಲಪ್ಮೆಂಟ್ ಮಾಡುವುದಕ್ಕೆ ಈ ಹಣವನ್ನು ಉಪಯೋಗಮಾಡುವ ಕಾರ್ಖಾನೆಗಳಲ್ಲಿ ಷುಗರ್ ಮಾಡಿದಾಗ ಇದನ್ನು ಹಾಕಬಹುದೆಂದು ಏಕೆ ಅರ್ಥವಾಗುವುದಿಲ್ಲ! ಸರಿಯಾಗಿ ವಿವರಣೆ ಇಲ್ಲದಿದ್ದರೆ ನಾಳೆ ಕೋರ್ಟಿನಲ್ಲಿ ಗಲಾಟೆ ಬರುತ್ತದೆ. ಉಪಯೋಗಿಸುವಾಗ ಮಾತ್ರ ಅನ್ವಯಿಸುತ್ತದೆ; ಕಲೆಕ್ಟ್ ಮಾಡುವಾಗ ಅನ್ವಯಿಸುವುದಿಲ್ಲ ಎಂದೇಕೆ ಅರ್ಥವಾಗುವುದಿಲ್ಲ! ಇಂಥ ಪ್ರಶ್ನೆ ಬಂದಾಗ ಏನು ಮಾಡಬೇಕೆಂಬುದನ್ನು ಯೋಚನೆ ಮಾಡಬೇಕು!

ಮುಂದೆ ಹೋದರೆ ಷುಗರ್ ಅಂದರೇನು ಎಂಬುದನ್ನು ಡಿಫೈನ್ ಮಾಡಿಲ್ಲ. ಬೂರಾ ಸಕ್ಕರೆ, ಕಲ್ಲು ಸಕ್ಕರೆ ಮುಂತಾದ್ದೆಲ್ಲಾ ಇದೆ. ಕ್ರೂಡ್ ಷುಗರ್ ಕೂಡ ಇದೆ. ಮೆಷೀನ್‌ಗಳಲ್ಲಿ ಎಲೆಕ್ಟ್ರಿಸಿಟಿಯಿಂದ ಎಣ್ಣೆ ತೆಗೆದು ಉಪಯೋಗಿಸಿದರೆ ಅದಕ್ಕೂ ಅನ್ವಯವಾಗಬಹುದು. ಇದಕ್ಕೆ **** ಕಮಿಟಿ ಬೇರೆ. ಈ ಮಸೂದೆಯ ಉದ್ದೇಶವನ್ನು ಸ್ವಲ್ಪ ಓದಬೇಕಾಗಿದೆ.

"Whereas it is expedient to provide for the levy of a cess and establishment of a fund for the development and improvement of the cultivation, growth and marketing of sugarcane and other irrigated crops and for other matters."

ಎಂದಿದೆ. ಇದರ ಅರ್ಥ ಏನೆಂಬುದನ್ನು ನೋಡಬೇಕು. ಇದಕ್ಕಾಗಿ ಒಂದು ಸಮಿತಿಮಾಡಿ ಈ ಬಾಬ್ತಿನ ಹಣವನ್ನು ಅದಕ್ಕೆ ಹಂಚುವುದಾಗಿ ಹೇಳಿದ್ದಾರೆ. ಆಯಾ ಬಾಬ್ತಿಗೆ ಬೇರೆ ಬೇರೆ ವಿಧವಾದ ದುಡ್ಡನ್ನು ಸರ್ಕಾರದವರು ತೆಗೆದುಕೊಂಡು ಆಯಾ ಬಾಬ್ತಿಗೆ ಕೊಡುವ ವ್ಯವಸ್ಥೆ ಮಾಡುತ್ತೀರಾ ಎಂದು ನಾನು ಪ್ರಶ್ನೆ ಮಾಡುತ್ತೇನೆ! ಸೇಲ್ಸ್ ಟ್ಯಾಕ್ಸ್, ವರಮಾನ ತೆರಿಗೆ ಮುಂತಾದವನ್ನು ಯಾವ ಉದ್ದೇಶದಿಂದ ವಸೂಲು ಮಾಡುತ್ತೀರಿ! ವ್ಯವಸಾಯಾಭಿವೃದ್ಧಿಗೆ ವ್ಯವಸ್ಥೆ ಆಗಬೇಕು, ಕೆರೆ ಕಟ್ಟುವುದಕ್ಕೆ ಮತ್ತು ಅದರ ಮೈಂಟೆನೆನ್ಸ್‌ಗೆ ವ್ಯವಸ್ಥೆ ಆಗಬೇಕು ಎಂದು ದುಡ್ಡನ್ನು ತೆಗೆದು ಕೊಂಡು ಕೇಳಿದರೆ ಎಲ್ಲಾ ಮುಗಿದುಹೋಯಿತು ಎಂದು ಹೇಳುತ್ತಾರೆ.

ಅಂತಹ ಸಂದರ್ಭದಲ್ಲಿ ಇದನ್ನು owner ಕೊಡುತ್ತಾನೆ ಎಂದು ಆ owner ತನ್ನ ಕೈಯಿಂದ ಕೊಡುತ್ತಾನೆಯೇ! ಅಥವಾ ಸಕ್ಕರೆಯ ಮೇಲೆ ಹಾಕುತ್ತಾನೆಯೇ! ನೋಡಿ, ಇದು ಉಪಯೋಗಿಸುವವನ ಮೇಲೆ ಬೀಳುತ್ತದೆಯೋ, ಇಲ್ಲವೋ ಎಂಬುದನ್ನು! ಈಗ

ಹಾಕಿರುವುದನ್ನು ನೋಡಿದರೆ ಒಂದು ರೂಪಾಯಿ ಮಾಲಿಗೆ ಮೂರೂವರೆ ರೂಪಾಯಿ ಕೊಡಬೇಕಾಗುತ್ತದೆ ಎಂದು ತಜ್ಞರು ಹೇಳುತ್ತಾರೆ. ಹಾಗಿರುವಾಗ ಮತ್ತೆ ಸೆಸ್ ಹಾಕಿ, ಮದರಾಸಿನಲ್ಲಿ ಹಾಗಿದೆ, ಕೊಡಗಿನಲ್ಲಿ ಹೀಗಿತ್ತು ಎಂದರೆ ಅರ್ಥವೇನು! ನಾವು ಆ ವಾದ ಒಪ್ಪುವವರಲ್ಲ. ಅದರ ಬದಲು ನಿಜವಾಗಿಯೂ ನಿಮ್ಮ ನೀತಿ ಏನು! ನಿಮ್ಮ ಧರ್ಮ ಏನು! ಆಯಾಯ ಬಾಬ್ತಿನ ದುಡ್ಡನ್ನು ಆಯಾ ಬಾಬ್ತಿಗೆ ಕೊಡಬೇಕೆಂದಿದ್ದೀರಾ ಎಂದ ಮೇಲೆ, ಅದಕ್ಕೆ ಸರಿಯಾದ ವ್ಯವಸ್ಥೆ ಮಾಡಿ ಅದನ್ನು ಸರಿಮಾಡಿ ಹಾಗೆ ಮಾಡದೆ ತೆಗೆದುಕೊಳ್ಳುವುದನ್ನೆಲ್ಲಾ ತೆಗೆದುಕೊಂಡು, ಇಷ್ಟು ಹೇಳಿದರೂ ಅದರಿಂದ ಆಗತಕ್ಕ ಅನಿಷ್ಟದ ಪರಿಣಾಮವನ್ನು ದೇಶದ ಮೇಲೆ ಹಾಕಿ, ಮತ್ತೆ ಅದನ್ನು ಸೆಸ್ ಎಂದು ಕರೆದು, ತಪ್ಪುದಾರಿಗೆ ಹಚ್ಚುವುದು ಖಂಡಿತವಾಗಿಯೂ ದೇಶದ ಹಿತದೃಷ್ಟಿಯಾಗಲಾರದು. ಅದ್ದರಿಂದ ಈ ಬಿಲ್ಲನ್ನು ದಯವಿಟ್ಟು ವಾಪಾಸು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ.

ಶ್ರೀ ಟಿ. ಮರಿಯಪ್ಪ – ಈಗ ಕಲೆಕ್ಟ್ ಮಾಡುತ್ತಾ ಇದ್ದೇವೆ; ಅದರಲ್ಲಿ ಒಂದು ಯೂನಿಫಾರ್ಮಿಟಿ ಇರಬೇಕು ಎನ್ನುವುದು ಅಷ್ಟೆ.

ಶ್ರೀ ಕೆ. ಕೆಂಚಪ್ಪ – ಯೂನಿಫಾರ್ಮಿಟಿ ಇರಬಹುದು, ತೆಗೆದುಕೊಳುತ್ತಾ ಇರುವುದನ್ನು ತೆಗೆದುಹಾಕುವುದಕ್ಕೆ ನಮಗೆ ಅಧಿಕಾರ ಇಲ್ಲವೇ ! ಇದು ತಿದ್ದುಪಡಿ ಅಲ್ಲ. ತಾವು ತಪ್ಪಾಗಿ ಹೇಳುತ್ತಾ ಇದ್ದೀರಿ. ಮೈಸೂರು ಬಿಲ್ಲನ್ನು ರಿಪೀಲ್ ಮಾಡುತ್ತೇವೆ ಎಂದು ಹೇಳಿದ್ದೀರೇನು! ಅದನ್ನೂ ಇದನ್ನೂ ಇಟ್ಟುಕೊಂಡು ಜಾರಿಗೆ ತರುತ್ತೀರಾ ! ಒಂದು ವೇಳೆ ಇದನ್ನು ಪಾಸ್ ಮಾಡಿದರೆ ಅದೂ ಇರುತ್ತದೆ, ಇದೂ ಇರುತ್ತದೆ. ಈ ರೀತಿಯಾಗಿ ಇರಬಾರದು, ಸಮನ್ವಯ ಮಾಡುತ್ತೇವೆ ಎಂದರೆ, ವಜಾ ಮಾಡುವುದಕ್ಕೂ ಅಧಿಕಾರವಿಲ್ಲವೇನು1 ಈ ಕಾನೂನು ಬೇಕಾಗಿಲ್ಲ. ತಾವು ನೋಡಬೇಕು. ಒಂದು ಎಕರೆ ಕಬ್ಬು ಮುರಿಯಬೇಕಾದರೆ ಎಷ್ಟು ಜನ ಬೇಕಾಗುತ್ತದೆ ! ಎಲ್ಲಿ 20 ಜನಕ್ಕಿಂತ ಕಡಿಮೆ ಇರುತ್ತಾರೆಯೋ ಅಲ್ಲಿ ಪವರ್ ತೆಗೆದುಕೊಂಡು ಕೊಯ್ದಿದರೆ ಮುಗಿಯಿತು. ಸುಮ್ಮನೆ ವಾದಕ್ಕೆ ವಾದ ಮಾಡುವುದು ಅಲ್ಲ. ಬೂರಾ ಸಕ್ಕರೆಗೆ ಏನು ಮಾಡುತ್ತೀರಾ? ಪವರ್ ಉಪಯೋಗಿಸಿ ಕಬ್ಬಿನಿಂದ ಹಾಲು ತೆಗೆದು ಅದರಿಂದ ಬೂರಾ ಸಕ್ಕರೆ ಮಾಡಿದರೆ Will this Act apply or not ? I want to put a definite question. ಕಿರುಕುಳ ಪ್ರಾರಂಭವಾಗಿ ಅಡ್ವೈಸರಿ ಕಮಿಟಿ ಅವರ ಮುಂದೆ ಬಂದರೆ ಯಥಾ ಪ್ರಕಾರ ಮುದುಕರ ವಿದ್ಯಾಭ್ಯಾಸವಾಗುತ್ತದೆ. ಆದ್ದರಿಂದ ದಯವಿಟ್ಟು ತುಂಬಾ ಆಲೋಚನೆಮಾಡಿ ಈ ಬಿಲ್ ಮಾಡಬೇಕಾಗುತ್ತದೆ.

Imposition ಎನ್ನತಕ್ಕ ವಿಚಾರದಲ್ಲಿ ಮಾನ್ಯ ಮಿತ್ರರು ಹೇಳಿದ್ದಾರೆ. ಅದರ ಪ್ರಕಾರ ಸರ್ಕಾರದವರು ಒಂದು ನೋಟಿಫಿಕೇಷನ್ ಮಾಡಿ ಆರು ರೂಪಾಯಿಗಳ ಒಳಗೆ ಎಷ್ಟು ಬೇಕಾದರೂ ಹಾಕಬಹುದು. ಇಷ್ಟೊಂದು ಅಧಿಕಾರವನ್ನು ಸರ್ಕಾರದವರಿಗೆ ಕೊಡುವುದು ಸೂಕ್ತವೇ ? ಮತ್ತು ಅದು ಒಳ್ಳೆಯದೇ ? ಇನ್ನು ಮುಂದಾದರೂ ಯೋಚನೆ ಮಾಡೋಣ ಕಮರ್ಷಿಯಲ್ ಕ್ರಾಪ್ಸ್‌ಗೆ ಈಗಾಗಲೇ ಎಷ್ಟೋ ತೆರಿಗೆಗಳು ಬಿದ್ದಿವೆ. ಆಗಬೇಕಾದ ಅವಸ್ಥೆಯೆಲ್ಲಾ ಆಗಿದೆ. 375 ರೂಪಾಯಿಗಳಿಗೆ ಒಂದು ಟನ್

ಹಿಂಡಿ ಆಗಿ, ಅದನ್ನು ಒದಗಿಸುವುದಕ್ಕೆ ಸರ್ಕಾರದವರಿಗೆ ಆಗದೇ ಗೋಡೌನ್‌ಗಳೆಲ್ಲಾ ಒಣಗಿಹೋಗಿವೆ.

"Provided that for the purpose of levying the cess, there shall be deducted from the gross weight of sugarcane entering into the local area during any month for consumption or use"; ಎಂದರೆ ಫ್ಯಾಕ್ಟರಿಯವರಿಗೆ ಯಾರು ಕೊಡುತ್ತಾರೋ ಅವರು ಕೊಡಬೇಕೆಂದು ಹೇಳುತ್ತೀರಾ ? ತಿಂಗಳುಗಟ್ಟಲೆ ಲೆಕ್ಕ ಇಟ್ಟು ವಸೂಲು ಮಾಡಬೇಕು. ಬೂರಾ ಸಕ್ಕರೆ ಮಾಡುವವರಿಗೆ ಯಾವ ರೀತಿ ಹಾಕುತ್ತೀರಾ? ಅವರು ಹೇಳಿದ್ದನ್ನು ಕೊಡಬೇಕು. ನನ್ನ ಹೊಲದಲ್ಲಿ ಬೂರಾ ಸಕ್ಕರೆ ಮಾಡಬಹುದು.

ಶ್ರೀ ಬಿ. ವಿ. ದೇಸಾಯಿ (ಗಂಗಾವತಿ). ಸೆಸ್ ಬೂರಾ ಸಕ್ಕರೆ ಮಾಡುವವರ ಮೇಲೆ ಬೀಳುವುದಿಲ್ಲ.

ಶ್ರೀ ಕೆ. ಕೆಂಚಪ್ಪ – ಅದನ್ನು ಸರಿಯಾಗಿ ಹೇಳಬೇಕು ಸ್ವಾಮಿ, ನಾಳೆ ಕೋರ್ಟಿನಲ್ಲಿ ಬಿಡುವುದಿಲ್ಲ. ಕೊಟ್ಟು ಹೋಗಿ ಎಂದು ಹೇಳುತ್ತಾರೆ. ಆದ್ದರಿಂದ ಇದನ್ನು ಯೋಚನೆ ಮಾಡಬೇಕು.

ಇನ್ನು ಯಾರಿಗಾದರೂ ಅನನುಕೂಲವಾದರೆ ಅಪೀಲು ಮಾಡುವ ಹಾಗಿಲ್ಲ. ಅಪೀಲು ಮಾಡಲು ಕಾರಣವೇ ಇಲ್ಲ ಎಂದು ಹೇಳುತ್ತಾರೆ. 9ನೆಯ ಕ್ಲಾಸ್‌ನಲ್ಲಿ ಹೇಳಿರುವ ಪ್ರಕಾರ.

" 9. Any occupies aggrieved by an assessment made under section 8 may within three months of service of the notice referred to in subsection (1) of that section, appeal to the commission of Commercial Taxes..."

ಅವರು ತೀರ್ಮಾನ ಮಾಡಿದರೆ ಮುಗಿಯಿತು. ಯಾವ ಕೋರ್ಟಿಗೂ ಹೋಗುವ ಹಾಗಿಲ್ಲ. ನಾನು ನಿಮ್ಮನ್ನು ಕೇಳುತ್ತೇನೆ; ಯಾರೋ ಒಬ್ಬರು ನನ್ನ ಹೊಲದಲ್ಲಿ ಕಬ್ಬನ್ನು ಹಾಕಿರುತ್ತಾರೆ, ಕಬ್ಬು ನನ್ನದಲ್ಲ, ಜಾಗ ಮಾತ್ರ ನನ್ನದು, ಅಂಥ ಸಂದರ್ಭದಲ್ಲಿ ಸಿವಿಲ್ ಕೋರ್ಟಿಗೆ ಹೋಗಲು ಇರತಕ್ಕ ಅವಕಾಶವನ್ನು ಹೇಗೆ ತಡೆಗಟ್ಟುತ್ತೀರಿ? Supposing in respect of this provision I am going to a court: how does this provision prevent me from going to a court? ಹೀಗಾಗಿಬಿಟ್ಟರೆ ಏನು? ಸಿವಿಲ್‌ಪ್ರೊಸೀಜರ್ ಕೋಡ್ ಇಲ್ಲವೇ! ಕಾಮನ್ ಲಾ ಇಲ್ಲವೇ, ಈಕ್ವಿಟಿ ಇಲ್ಲವೇ? ಇಷ್ಟು ಜನ ಕುಳಿತುಕೊಂಡು ಎಂಥ ಚೆನ್ನಾಗಿರುವ ಕಾನೂನನ್ನು ಮಾಡಿದ್ದಾರೆ ಎಂದು ಅವರೇನಾದರೂ ಅಂದಾರು ಎಂದು ಹೇಳುತ್ತೇನೆ.

ಇನ್ನು ಈ 15ನೆಯ ಸಕ್ಷನ್‌ನಲ್ಲಿ ಇಂಡಿಯನ್ ಪೀನಲ್ ಕೋಡನ್ನೇ ವಜಾ ಮಾಡಿದ್ದಾರೆ. ಅದು ಇಂಡಿಯಾ ದೇಶಕ್ಕೆಲ್ಲಾ ಅನ್ವಯವಾಗತಕ್ಕ ಒಂದು ಕೋಡು.

ಅದನ್ನು ಮೂಲೆಗೆ ಇಟ್ಟುಬಿಟ್ಟು ನಾವೇ ಮಾಡುವುದಕ್ಕೆ ಅಧಿಕಾರವಿಲ್ಲ ಎಂದು ನಮ್ಮಷ್ಟಕ್ಕೆ ನಾವು ಅಂದು ಕೊಂಡು, ಅದು ಹೈಕೋರ್ಟಿಗೆ ಹೋಗಿ ಹೈಕೋರ್ಟಿನಲ್ಲಿ ತೀರ್ಮಾನವಾದರೆ. ಅದಕ್ಕೆ ತಿದ್ದುಪಡಿ ತಂದಿದ್ದೇವೆ ಎಂದು ಹೇಳುವ ಪ್ರಸಂಗ ನಾಳೆ ಬರುತ್ತದೆ. ಈ ರೀತಿಯಾಗಿ ಪದೇ ಪದೇ ತಿದ್ದು ಪಡಿ ತರುವುದರಿಂದ ನಮ್ಮ ಸಾಹಸ, ನಮ್ಮ ಶಕ್ತಿ, ನಮ್ಮ ಬುದ್ಧಿ ಇವುಗಳ ಬಗ್ಗೆ ಹೈಕೋರ್ಟಿನವರು ಏನು ತಿಳಿದುಕೊಂಡಾರು ಎಂದು ತುಂಬಾ ಯೋಚನೆ ಮಾಡಬೇಕಾಗುತ್ತದೆ.

ಇನ್ನು ಮುಂದೆ, offences ಎನ್ನತಕ್ಕಂಥ ವಿಚಾರ ಒಂದು ದೊಡ್ಡ ಪ್ರಶ್ನೆ ಇದೆ. ಇಂಥಿಂಥ ವಿಚಾರ ಅಫೆನ್ಸ್ ಆಗುತ್ತದೆಯೋ ಅನ್ನತಕ್ಕಂಥದ್ದನ್ನು ಆಲೋಚನೆ ಮಾಡಬೇಕಾದರೆ, ತೂಕವಾಗಿ ಆಲೋಚನೆ ಮಾಡಬೇಕಾಗುತ್ತದೆ. Offence ನಿಜವಾಗಿ ಆಗುತ್ತದೆಯೋ ಎನ್ನುವುದನ್ನು ನೋಡಬೇಕು. Offence ಎಂದು ಹೇಳಿದಾಕ್ಷಣ ಆಗುತ್ತದೆಯೇ? What are the essential ingredients to consitute a particular offence, if the courts must entertain a complaint and give punishments? ನಾನು ಓದುತ್ತೇನೆ ನೋಡಿ. "imprisonment which may extend to six months or with fine not exceeding one thousand rupees", "and when the offense is a continuing one with fine which may extend to fifty rupees per day". Six months imprisonment or fine not exceeding 1,000 rupees ಎಂದು ಹೇಳಿದ್ದೀರಿ. ಇದನ್ನೆಲ್ಲಾ ಜಡ್ಜಸ್ ಒಪ್ಪಿಕೊಳ್ಳುವುದಕ್ಕೆ ಪ್ರಿಪೇರ್ ಆಗಿದ್ದಾರೆಯೇ? ಪೀನಲ್ ಕೋಡಿನಲ್ಲಿ ಇದಕ್ಕೆ ನಿಲುಕು ಇಲ್ಲ. Not exceeding one thousand rupees ಎನ್ನುವುದು ಅವರಿಗೆ ನಿಲುಕಲಾರದೆ ಮಾಡುವಂಥದು. ಇದು ಕಾನೂನು ಪ್ರಕಾರ ನೋಡುವಂಥ ಪ್ರಶ್ನೆ. ಆರು ತಿಂಗಳು ಅಥವಾ 1,000 ರೂಪಾಯಿ ಅಂದರೆ ಅರ್ಥವೇನು?

ಹತ್ತನೆಯ ಪುಟದಲ್ಲಿ "Power to make rules" ಎನ್ನುವುದರಲ್ಲಿ "In making any rule under this section the Government may provide that a breach of the rule shall, on conviction, where no penalty is provided under this Act. be punishable with fine which may extend to one thousand rupees" ಎಂದಿದೆ. ಈ ವಿಚಾರವನ್ನು ತಾವೇ ಯೋಚನೆಮಾಡಬೇಕು. ಸರ್ಕಾರ ಪವರ್ ಇಟ್ಟುಕೊಳ್ಳುವುದಕ್ಕೆ a, b, c, d, e, f, g, h ಎಂದು ಎಷ್ಟೋ ರೂಲುಗಳನ್ನು ಮಾಡಿಕೊಂಡಿದ್ದಾರೆ. Constitution of Advisory Committe ವಿಚಾರ ಹೇಳುವಾಗ, they shall "exercise such powers and perform such functions as may be prescribed" ಎಂದು ಹೇಳಿದ್ದಾರೆ. ಆ ರೀತಿ ಈ ರೀತಿ ಮಾಡುವುದು, ಆ ರೀತಿ ಈ ರೀತಿ ಹೇಳುವುದು, ಇದು Advisory Committee ಅಧಿಕಾರ. ಈ ರೀತಿ ಸರ್ಕಾರ ಅಧಿಕಾರವನ್ನೆಲ್ಲಾ ತೆಗೆದುಕೊಂಡು, ಆ ಅಧಿಕಾರವನ್ನು ಜನತೆಯ ಮೇಲೆ ಉಪಯೋಗಿಸಲು ಈ ಕಮಿಟಿಗಳಿಂದ ಅನುಕೂಲವಾಗಿದೆ. ಇದರಿಂದ ಆಕಸ್ಮಾತ್ತಾಗಿ ಆಗಿಂದಾಗ್ಗೆ No-Confidence Motion ಬಾರದೆಯೇ ಉಳಿಯುತ್ತದೆ. ಆದ್ದರಿಂದ ದಯವಿಟ್ಟು ಈ ಮಸೂದೆಯನ್ನು ತರಬೇಡಿ.

* * * * *

# ರಾಜ್ಯಪಾಲರ ಭಾಷಣಕ್ಕೆ ಪ್ರತಿಕ್ರಿಯೆ

ಇಂಗ್ಲೇಂಡಿನಲ್ಲಿ ಅನುಸರಿಸುವ ಪದ್ಧತಿಯ ರೀತಿಯಲ್ಲಿ ರಾಜ್ಯಪಾಲರು ಅಡ್ರೆಸ್ ಕೊಡುತ್ತಾರೆ. ಒಂದು ಕಮಿಟಿ ಮಾಡಿ, ಪ್ರತಿಯೊಂದು ಪ್ಯಾರಾಗ್ರಾಫನ್ನೂ ಮೆಚ್ಚಿದ್ದಾರೆ ಎಂದು ಹೇಳಿ, ಹೋಲಿಸಿ, ಆಯಾ ಪ್ಯಾರಾಗ್ರಾಫಿಗೆ ಅಮೆಂಡ್‌ಮೆಂಟ್ ಕಳುಹಿಸುವುದರ ಮೂಲಕ ಯಾವ ರೀತಿ ಕೊಡಬೇಕು, ಕ್ರಮವಾಗಿ ಯಾವುಯಾವುದು ಆಗಬೇಕಾಗಿತ್ತು, ಎಂದು ನಿರ್ಧರಿಸಬೇಕಾಗಿತ್ತು. ರಾಜ್ಯಪಾಲರು ಯಾವಯಾವ ವಿಚಾರ ನಮೂದುಮಾಡಬೇಕು ಎನ್ನುವುದರಲ್ಲಿ ಕೆಲವು ಸಂಪ್ರದಾಯಗಳಿವೆ. ರಾಜ್ಯಪಾಲರ ಅಡ್ರೆಸ್ಸಿನಲ್ಲಿ ಫೈನಾನ್ಷಿಯಲ್ ಆಸ್ಪೆಕ್ಟನ್ನು ಎಕ್ಸೆಪ್ಷನಲ್ ಸರ್‌ಕಮ್‌ಸ್ಟೆನ್ಸನಲ್ಲಿ , ಆತುರವಾದ ಪರಿಸ್ಥಿಯಲ್ಲಿ ಟಚ್ ಮಾಡುತ್ತಾರೆ; ಬೇರೆ ಕಾಲದಲ್ಲಿ ಮಾಡುವುದಿಲ್ಲ. ಕೆಲವಾರು ಅಂಶಗಳನ್ನು ನಮೂದುಮಾಡಿ ಸರ್ಕಾರ ಯಾವ ಉದ್ದೇಶಕ್ಕೋಸ್ಕರವಿದೆಯೋ ಅದನ್ನು ಇಂಥಿಂಥ ಸಿದ್ಧಾಂತಗಳ ಮೂಲಕ ಸಾದಿಸುತ್ತದೆ ಎಂದು ಭಾಷಣದಲ್ಲಿ ತಿಳಿಸಬೇಕು. ಕಾಂಗ್ರೆಸ್ ಸರ್ಕಾರ ಸಮಾಜವಾದಿ ತತ್ವದ ಮೂಲಕ ಅದರ ಉದ್ದೇಶವನ್ನು ಸಾಧಿಸುತ್ತದೆ; ಅದು ಸಮಾಜವಾದಿ ಸೊಸೈಟಿಯನ್ನು ಸ್ಥಾಪಿಸಬೇಕೆಂದಿದೆ ಎಂದು ಹೇಳುತ್ತಿದೆ. ದೇಶದಲ್ಲಿರತಕ್ಕ ಪ್ರತಿಯೊಂದು ಅವಕಾಶವನ್ನು, ಪ್ರತಿಯೊಬ್ಬರು ತಮ್ಮಲ್ಲಿರತಕ್ಕ ವಿಶೇಷವಾದ ಗುಣಗಳನ್ನು ಬೆಳಸಿಕೊಂಡು ಬರುವುದಕ್ಕೆ ಅವಕಾಶವಿರಬೇಕು ಈ ತತ್ವವನ್ನು ಬೆಳಸುವುದಕ್ಕೆ ಕಾಂಗ್ರೆಸ್ ಸರ್ಕಾರದವರು ಕಟ್ಟುಬಿದ್ದವರಾಗಿದ್ದಾರೆ. ಈ ಭಾಷಣದಲ್ಲಿ ಈ ವಿಷಯವಾಗಿ ಒಂದು ಚಕಾರವು ಇಲ್ಲ. ಸಮಾಜವಾದಿ ತತ್ವವನ್ನು ಇಂಥಿಂಥ ಮಾರ್ಗವನ್ನು ಅನುಸರಿಸುವುದರ ಮೂಲಕ ಎಷ್ಟರಮಟ್ಟಿಗೆ ಸಾಧನೆ ಮಾಡಿದ್ದಾರೆ ಎಂಬುವುದರ ಬಗ್ಗೆ ಒಂದು ಚಕಾರ ಶಬ್ಧವಿಲ್ಲ. ನಮಗೆ ತುಂಬ ನಿರಾಶೆಯಾಗಿದೆ. ಯಾವರೀತಿಯ ಅಮೆಂಡ್‌ಮೆಂಟ್‌ನ್ನು ಕಳುಹಿಸಬೇಕು ಎಂಬುದರ ಬಗ್ಗೆ ಸ್ಪೀಕರ್‌ರವರು ಫಾರಂ ಪ್ರಿಸ್ಕ್ರೈಬ್ ಮಾಡಿ ಉಲ್ಲೇಖಿಸಿಲ್ಲ. "Add at the end -regret so and so" ಎಂದು ತಿದ್ದು ಪಡಿಯನ್ನು ತರಬಹುದು ಎಂದು ಎಲ್ಲಿಯಾದರೂ ಉಲ್ಲೇಖಿತವಾಗಿದ್ದರೆ, ನಾನು ಆ ರೀತಿ ಅಮೆಂಡ್‌ಮೆಂಟ್ ಕಳುಹಿಸುತ್ತೇನೆ. ತಮಗೆ ಏನಾದರೂ ಸರಿಹೋಗುವುದಾದರೆ, ಅಂಥ ಸಂದರ್ಭಗಳಲ್ಲಿ ಪಾರ್ಲಿಮೆಂಟಿನಲ್ಲಿ ಇಂಥಿಂಥದನ್ನು ಉಲ್ಲೇಖಿಸಿರುತ್ತಾರೆ, ಎಂದು ಹೇಳುತ್ತಾರೆ. ನಾನು ಇಲ್ಲಿ ನಡೆಯತಕ್ಕಂಥ ವಿಚಾರವನ್ನು ನೋಡಿ 1958ನೇ ಡಿಸೆಂಬರ್ 6ನೇ ತಾರೀಖು ತಮಗೆ ಒಂದು ಕಾಗದ ಬರೆದಿದ್ದೆ. ಅದರಲ್ಲಿ ಅಸೆಂಬ್ಲಿ ಕಾರ್ಯ ಕಲಾಪಗಳು ನಡೆಯುತ್ತಿರುವ ರೀತಿಯಲ್ಲಿ ಎಷ್ಟೆಷ್ಟು ಅಸಮದಾನವಾಗಿದೆ ಹೇಗೆ ಹೇಗೆ ತಿದ್ದುಪಡಿ ಮಾಡಿಕೊಳ್ಳಬೇಕು.............

ಅಧ್ಯಕ್ಷರು: ರಾಜ್ಯಪಾಲರ ಭಾಷಣದಮೇಲೆ ಮಾತನಾಡುವುದು ಒಳ್ಳೆಯದು. ಅಮೆಂಡ್‌ಮೆಂಟುಗಳ ವಿಚಾರ ಪ್ರೈವೇಟಾಗಿ ಛೇಂಬರಿನಲ್ಲಿ ಡಿಸ್‌ಕಸ್ ಮಾಡಬಹುದು.

ಶ್ರೀ ಕೆ. ಕೆಂಚಪ್ಪ: ಅವಶ್ಯಕವಾಗಿ ಬರುವಂತ ಪ್ರಶ್ನೆಗಳನ್ನು ತರುವುದಕ್ಕೆ ಅಮೆಂಡ್‌ಮೆಂಟ್ ಕಳುಹಿಸಬೇಕೆನ್ನುವುದೇ ಗೊತ್ತಿಲ್ಲದೆ ಚರ್ಚೆ ಮಾಡುವುದು ಏನು?

ರಾಜ್ಯಪಾಲರ ಭಾಷಣದಲ್ಲಿ ಉಲ್ಲೇಖಿತವಾಗಿರತಕ್ಕಂಥ ಅನೇಕ ವಿಚಾರಗಳ ಮೇಲೆ ನನ್ನ ಮಿತ್ರರು ಅನೇಕವಾಗಿ ಹೇಳಿದ್ದಾರೆ. ಈ ವಿಚಾರಗಳನ್ನು ಮತ್ತೆ ಪ್ರಸ್ತಾಪಮಾಡಿ ಪುನರುಕ್ತಿ ದೋಷಕ್ಕೆ ಒಳಗಾಗದೆ ಕೆಲವಾರು ಅಗತ್ಯವಾದ ವಿಷಯುಗಳಮೇಲೆ ಮಾತನಾಡುತ್ತೇನೆ.

ನಮ್ಮ ರಾಜ್ಯಪಾಲರು ಮೊದಲನೆ ಪ್ಯಾರಗ್ರಾಫಿನಲ್ಲಿ ಆಗಿನ ಕಾಲದಲ್ಲಿ ದೇಶಕ್ಕೆ ಬಹಳವಾಗಿ ಸೇವೆ ಸಲ್ಲಿಸಿರುವ ಸರ್ ಮಿರ್ಜಾರವರ ವಿಚಾರಗಳನ್ನು ಹೇಳಿದ್ದಾರೆ. ಅವರ ವಿಚಾರವಾಗಿ ಹೇಳುವಾಗ ದೇಶದ ಪ್ರಗತಿಗೆ ಬಹಳವಾಗಿ, ಆಗಿನ ಕಾಲದ ರಾಜರಿಗೆ ಮೆಚ್ಚುವ ರೀತಿಯಲ್ಲಿ ಅವರ ನಂಬಿಕೆಗೆ ಪಾತ್ರರಾಗಿ ಕೆಲಸಮಾಡಿದ್ದಾರೆಂಬ ಭಾವನೆಯನ್ನು ತಂದುಕೊಟ್ಟು, ಅದರ ಮೂಲಕ ನಮಗೆ ಆಗಿನ ಕಾಲದ ರಾಜ್ಯಭಾರವನ್ನು ಇನ್‌ಡೈರೆಕ್ಟಾಗಿ ಹೇಳಿ ಈಗಿನವರಿಗೆ ಹುಷಾರಾಗಿರಿ ಎಂದು ಕೊನೆಗೆ ಬರೆದಿದ್ದಾರೆ.

ಪ್ರತಿಯೊಬ್ಬರು ರಾಜ್ಯದ ಹಿತಸಾಧನೆಯನ್ನು ಏಕೈಕ ಗುರಿಯಾಗಿಟ್ಟುಕೊಂಡು ಕರ್ತವ್ಯಶೀಲರಾಗಬೇಕೆಂಬ ಭಾವನೆಯನ್ನುಳ್ಳವರಾಗಿರ ಬೇಕೆಂದು ರಾಜ್ಯಪಾಲರು ಭಾಷಣದ ಕೊನೆಯಲ್ಲಿ ತಿಳಿಸಿದ್ದಾರೆ. ನಮ್ಮ ಸರ್ಕಾರದಲ್ಲಿ ಹೋದವರ್ಷದ ಅವದಿಯಲ್ಲಿ ಮಂತ್ರಿ ಮಂಡಲದಲ್ಲಿ ಮುಖಂಡತ್ವ ಇಲ್ಲದ ರೀತಿಯಲ್ಲಿ ಯಾರು ಯಾರೋ ಹೋದರು, ಯಾರು ಯಾರೋ ಬಂದರು, ಏನೇನೋ ಆಗಿ ಹೋಯಿತು. ರಾಜ್ಯಪಾಲರಲ್ಲಿ ಯಾವ ಭೇದ ಭಾವಗಳೂ ಇರುವುದಿಲ್ಲ ಎಂಬುವುದನ್ನು ತಾವು ಯೋಚನೆ ಮಾಡಬೇಕು. ಒಂದು ಪ್ರಭುತ್ವವನ್ನು ನಡೆಸತಕ್ಕ ಪಾರ್ಟಿಯಲ್ಲಿ ಎಲ್ಲಕ್ಕೂ ಹೆಚ್ಚಾಗಿ ರಾಜ್ಯಪಾಲರ ಜವಾಬ್ದಾರಿ ಇದೆ. ರಾಜ್ಯವನ್ನು ನಡೆಸತಕ್ಕ ವಿಚಾರದಲ್ಲಿ ಮುಖಂಡರಾಗಿದ್ದವರು ದೇಶದ, ರಾಜ್ಯದ ವ್ಯವಸ್ಥೆ ಅವರ ಮೂಲಕವೇ ನಡೆಯ ಬೇಕೆಂಬುವುದನ್ನು ನೋಡಿಕೊಳ್ಳಬೇಕು. ಈಗ ಇರತಕ್ಕ ಪ್ರಭುತ್ವ ಅವರಿಗೆ ಸಲಹೆ ಮಾಡತಕ್ಕವರು ಮಾತ್ರ. ಅವರು ಪ್ರಜೆಗಳಿಗೆ ಏಜೆಂಟರಾಗಿ ಕೆಲಸ ಮಾಡುತ್ತಾರೆ. ಅಂತಹ ಸಂದರ್ಭಗಳಲ್ಲಿ ಸ್ವಲ್ಪ ಹುಷಾರಾಗಿರಬೇಕು ಎಂದು ಹೇಳುತ್ತೇನೆ. ಈ ವಿಚಾರದಲ್ಲಿ ಏನೇನು ಕೆಲಸಗಳು ನಡೆಯುತ್ತಿವೆ. ಪ್ರಜೆಗಳ ಅಭಿಮತ ವಿಲ್ಲದಿದ್ದರು ಸಹ ಏನೋ ಒಂದು ಪ್ರಜಾಪ್ರಭುತ್ವದ ಅವಸ್ಥೆಯಲ್ಲಿದ್ದೇವೆ ಎಂದು ಹೇಳುತ್ತಾರೆ.

"The decision of the majority is the will of the people. The good of the people is altogether different from the will of the People. The will of the people is altogether different from the operation of the democratic government"

ಎಂದು ಒಂದು ಸಾರಿ ನಾನು ಬರೆದಿದ್ದೇನೆ. ಅಂದರೆ ಪ್ರಜೆಗಳಿಗಾಗಿ ಉತ್ತಮವಾದ ಕೆಲಸಮಾಡುವುದು ಒಂದು ಭಾಗ; ಅದು ಬಹುಮತದಿಂದ ನಡೆಯತಕ್ಕದ್ದು ಇನ್ನೊಂದು ಭಾಗ. ಪ್ರಜೆಗಳ ಭಾವನೆ ಸರಿಯಾಗಿ ನಡೆಯುತ್ತಿದೆಯೇ ಇಲ್ಲವೇ ಎಂದು ನೋಡುವುದು. ಇವು ಬಹಳ ಮುಖ್ಯಾಂಶಗಳು. ರಾಜ್ಯಪಾಲರು ತಮ್ಮ ಭಾಷಣದಲ್ಲಿ ಇಂಥ ವಿಷಯಗಳನ್ನು ಉಲ್ಲೇಖಿಸಿಲ್ಲ. ಅವಶ್ಯಕವಾಗಿ ಬಹುಮುಖ್ಯವಾದ ಸಮಾಚಾರಗಳನ್ನು ಉಲ್ಲೇಖಿಸ ಬೇಕಾಗಿದೆ. ಇಂತಹ ಸಮಯದಲ್ಲಿ ಅದನ್ನು ಉಲ್ಲೇಖಿಸಿಲ್ಲ. ಅವರಿಗೆ ಇಕ್ಕಟ್ಟಿನ ಪ್ರಸಂಗಗಳು ಬಹಳ ಇವೆ. ಇವನ್ನು ಉಲ್ಲೇಖಿಸದೇ ಇದ್ದರೂ ಪ್ರಾಸಂಗಿಕವಾಗಿ ಎತ್ತಿ ತೋರಿಸಿ ನೀವು ಹುಷಾರಾಗಿರಿ ಎಂದು ಸರ್ಕಾರದವರಿಗೆ ಹೇಳುತ್ತಾ ಅವರ ಕರ್ತವ್ಯ ಪಾಲನೆ ಮಾಡಿದ್ದಾರೆ.

ದೇಶದಲ್ಲಿ ಪ್ರಗತಿ ಮೂಲವಾದ ಇಲಾಖೆಗಳು ಎಂದರೆ ಎರಡು: ಒಂದು ಮರಾಮತ್ತು ಶಾಖೆ. ಇನ್ನೊಂದು ವ್ಯವಸಾಯಶಾಖೆ. ಇವೆರಡೂ ಒಂದಕ್ಕೊಂದು ಹೊಂದಾಣಿಕೆಯಿಂದ ಕೆಲಸ ಮಾಡುವುದಾದರೆ ದೇಶದ ಏಳಿಗೆಗೆ ಯಾವ ಕುಂದಕವೂ ಉಂಟಾಗಲಾರದು. ಇವೆರಡರ ವಿಷಯದಲ್ಲಿ ನಾನು ಹೇಳಬೇಕಾದರೆ, ಪ್ರಭುತ್ವ ನಡೆಸತಕ್ಕ ಸರ್ಕಾರದವರಿಗೆ ತಮ್ಮೊಳಗೆ ಇರತಕ್ಕ ಜವಾನರೇ ಆಡಳಿತಕ್ಕ ಪಕ್ಷದ ಆಡಳಿತವನ್ನು ಒಪ್ಪುತ್ತಾರೇನು? ಇಲ್ಲ. ಅವರ ಮಾತು ಕೇಳುತ್ತಾರೆಯೇ? ಇಲ್ಲ. ಇನ್ನು ಯಾವ ಅಧಿಕಾರಿಗಳೇ ಆಗಲಿ ಅಥವಾ ಮಂತ್ರಿಗಳ ಕೈಕಕೆಳಗೆ ಇರತಕ್ಕ ಯಾವ ಆಫೀಸರೇ ಆಗಲಿ ತೃಪ್ತಿಯಿಂದ ಕೆಲಸ ಮಾಡುತ್ತಿಲ್ಲ. ಕೆಲಸ ಕಾರ್ಯಗಳಲ್ಲಿ ಅನಾದಾರಣೆ ಹೆಚ್ಚಾಗಿರಬಹುದೆಂದು ಕಾಣುತ್ತದೆ. ನಾನು ಚಿಕ್ಕ ಚಿಕ್ಕ ಇರ್ರಿಗೇಷನ್ ಪ್ರಾಜೆಕ್ಟ್ಸ್ ವಿಚಾರದಲ್ಲಿ ಎಷ್ಟರಮಟ್ಟಿಗೆ ಮಟ್ಟಿಗೆ ಕಾರ್ಯಕಲಾಪಗಳನ್ನು ಮಾಡಿದ್ದೀರಿ, ಏನು ಕೆಲಸ ನಡೆದಿದೆ ಎಂದು ಸಂಬಂದಪಟ್ಟ ಅಧಿಕಾರಿಗೆ ಬರೆದು ಕಳುಹಿಸಿಕೊಟ್ಟರೂ ಇದುವರೆಗೂ ಉತ್ತರವಿಲ್ಲ. ತಮ್ಮ ಕೈ ಕೆಳಗೇ ಇರತಕ್ಕವರು ಉತ್ತರ ಮಾತ್ರ ಕೊಡುವುದಕ್ಕೆ ಇಷ್ಟು ವಿಳಂಬ ಮಾಡಿದರೆ ಕೆಲಸ ಹೇಗೆ ನಡೆಯುತ್ತದೆ? ಮುಖ್ಯವಾಗಿ ಸರ್ಕಾರ ಪ್ರಜೆಗಳಿಗೆ ನಂಬಿಕೆ ಬರುವರೀತಿಯಲ್ಲಿ ಪ್ರಭುತ್ವ ನಡೆಸತಕ್ಕ ಮಾರ್ಗವನ್ನು ಇಟ್ಟುಕೊಂಡಿಲ್ಲವೆಂದು ಹೇಳಬಹುದು. ಅದು ಅವರ ಮೂಲ ಉದ್ದೇಶವೇ ಅಲ್ಲವೆಂದು ನನಗೆ ಕಾಣುತ್ತದೆ. ಈ ದೃಷ್ಟಿಯಿಂದ ನೋಡಿದರೆ, ನಮ್ಮ ಮರಾಮತ್ತು ಇಲಾಖಾ ಮಂತ್ರಿಗಳು, "ನಮ್ಮಲ್ಲಿ ಬೇಕಾದಷ್ಟುದುಡ್ಡಿದೆ , ಕೆಲಸ ನಡೆಯುವುದಿಲ್ಲ. ನಮ್ಮ ಕೆಲಸ ನಡೆಸುವುದಕ್ಕೆ ಕೆಲವು ಕಾರಣಾಂತರಗಳಿಂದ ಸಾದ್ಯವಾಗುತ್ತಿಲ್ಲ; ದುಡ್ಡಿಗೆ ಅಭಾವವಿಲ್ಲ"ವೆಂದು ಹೇಳಿದರು. ಇದು ಹೇಗಿದೆ ಎಂದರೆ; ನಮ್ಮ ಮುಖಕ್ಕೆ ನಾವೇ ಮಸಿ ಬಳಿದುಕೊಂಡಂತಾಗಿದೆ ಆ ರೀತಿ ಮಾಡುತಿದ್ದಾರೆ. ಇದು ಸರಿಯಲ್ಲ. ನಿಮಗೆ ದುಡ್ಡು ಯಥೇಚ್ಚವಾಗಿದ್ದರೂ ಕೆಲಸ ಮಾಡುವುದಕ್ಕೆ ಶಕ್ತಿಯಿಲ್ಲ. ನಿಮ್ಮಿಂದ ಅದು ಸಾದ್ಯವಾಗುವುದಿಲ್ಲ. ನಿಮ್ಮ ತಲೆಯಲ್ಲಿ ಅಷ್ಟು ಬುದ್ದಿಯಿಲ್ಲ ಸರಿಯಾದ ವ್ಯವಸ್ಥೆ ಮಾಡುವುದಕ್ಕೆ ನೀವು ಯೋಗ್ಯರಲ್ಲ. ಇರುವ ಹಣ ಅನ್ಯಾಯವಾಗಿ ದುರುಪಯೋಗವಾಗುತ್ತಿದೆ. ನಿಮ್ಮ ಮುಖಕ್ಕೆ ನೀವೇ ಮಸಿ ಬಳಿದುಕೊಳ್ಳುತ್ತಿದ್ದೀರಿ. ಇಷ್ಟರ ಮಟ್ಟಿಗೆ ಕೆಲಸಮಾಡಿ ಭುಜ ತಟ್ಟಿಕೊಂಡಿರುವುದು ನಮ್ಮ ಗಮನದಲ್ಲಿದೆ. ಇದನ್ನು ನೋಡಿದರೆ ದ್ವಿತೀಯ ಪಂಚವಾರ್ಷಿಕ

ಯೋಜನೆಯಲ್ಲಿ ಸೋಸಿಯಲಿಷ್ಟ ಪ್ಯಾಟರನ್ ಆಫ್ ಸೋಸೈಟಿಯ ತತ್ವವು ಎಷ್ಟರ ಮಟ್ಟಿಗೆ ಫಲಕಾರಿಯಾಗುತ್ತದೋ ಎಂಬ ಸಂದೇಹ ನನಗೆ ಬರುತ್ತದೆ. ಅದರಿಂದಾಗಿ ಬಡ್ಜೆಟ್ಟಿನ ಮೇಲೆ ಬಮು ಭಾಗ ಹೇಳುವುದಕ್ಕೆ ನಾನು ತಯಾರಿಲ್ಲ. ರಾಜ್ಯಪಾಲರ ಭಾಷಣದಲ್ಲೂ ಅಂತಹ ಪ್ರಸಂಗವೇನು ಇಲ್ಲ. ಮುಖ್ಯವಾಗಿ ದೇಶದಲ್ಲಿ ಇವತ್ತಿನ ದಿವಸ ಅನ್ನದ ಅಭಾವ ತುಂಬಾ ಆಗಿದೆ. ಧಾರಣೆಗಳು ಬಹಳ ದುಬಾರಿಯಾಗಿವೆ. ಇಂತಹ ದೃಷ್ಟಿಯಲ್ಲಿ ದೇಶದಲ್ಲಿನ ಅಸಾಧಾರಣವಾದ ಪರಿಸ್ಥಿತಿಯನ್ನು ಈ ಸಂದರ್ಭದಲ್ಲಿ ಸ್ವಲ್ಪ ಹೇಳದೇ ಹೋದರೆ ನಮ್ಮ ಕಾರ್ಯದಲ್ಲಿ ಲೋಪ ಮಾಡಿದಂತಾಗುತ್ತದೆ. ಮೈನರ್ ಇರ್ರಿಗೇಷನ್ ಪ್ರಾಜಕ್ಟಗಳ ವಿಷಯವನ್ನು ಮಾತನಾಡುತ್ತಾ ಹೇಳುವುದಾದರೆ ಅವು ಒಂದು ಸರಿಯಾದ ಹಾದಿಯಲ್ಲಿಲ್ಲ. ಅನೇಕ ಹಳ್ಳಗಳಲ್ಲಿ ಮತ್ತು ಹೊಳೆಗಳಲ್ಲಿ ನೀರೇ ಇರುವುದಿಲ್ಲ. ಅವೆಲ್ಲವು ಎಷ್ಟೋ ಬತ್ತಿ ಹೋಗಿರುತ್ತವೆ. ನೀರು ಸಾಕಷ್ಟು ಸಪ್ಲೈ ಆಗದೆ ಜಮೀನು ಉಳುಮೆ ಮಾಡತಕ್ಕ ಬಗೆ ಹೇಗೆ? ಈ ರೀತಿ ಮಾಡುತ್ತಾ ಹೋದರೆ ಖಂಡಿತವಾಗಿ ಸಮಾಜವಾದ ತತ್ವವನ್ನು ಪರಿಪಾಲಿಸುವುದಕ್ಕಾಗುತ್ತದೆಯೇ? ಎಲ್ಲರಿಗೂ ಸರಿ ಸಮನಾದ ಅವಕಾಶವನ್ನು ಜಮೀನು ದುಡುಮೆಗೋಸ್ಕರ ಕೊಡುತ್ತಿದ್ದೇವೆಂದು ಬಾಯಲ್ಲಿ ಹೇಳುತ್ತಾರೆ. ಕಾರ್ಯತಃ ಇಲ್ಲ. ಅದರಲ್ಲಿ ಎಷ್ಟರಮಟ್ಟಿಗೆ ನಿಜಾಂಶವಿದೆಯೋ ನನಗಂತೂ ಅರ್ಥವಾಗುವುದಿಲ್ಲ.

**Sri H. M. Channabasappa:-** I would like the Hon'ble Member to tell us what is the relatioinship between the minor irrigatiion scheme and samajavada?

ಶ್ರೀ ಕೆ. ಕೆಂಚಪ್ಪ:- ಮೈನರ್ ಇರ್ರಿಗೇಷನ್‌ಗೂ ಮತ್ತು ಸಮಾಜವಾದಕ್ಕೂ ಸಂಬಂಧವಿದೆ. ಪ್ರಜಾ ಪ್ರಭುತ್ವದಲ್ಲಿ ಈ ಕೆಲಸ ವಿಶೇಷ ಮಹತ್ವವುಳ್ಳದ್ದು. ಹಾಗಿದ್ದರೂ ಅವನ್ನು ನೀವೂ ಕಾರ್ಯಗತ ಮಾಡದೆ ಇರುವುದರಿಂದಲೇ ನಿಮ್ಮ ಸಬಾರ್ಡಿನೇಟ್‌ಗಳು ನೀವು ದುಡ್ಡು ಕೊಟ್ಟರೂ ನಿಮ್ಮ ಮಾತು ಕೇಳುವುದಿಲ್ಲ. ನಿಮ್ಮ ಮಾತನ್ನು ಕೇಳುವ ಸ್ಥಿತಿಯಲ್ಲಿ ಅವರಿಲ್ಲ. ನಿಮಗೆ ಅವರನ್ನು ಕಂಟ್ರೋಲ್ ಮಾಡುವ ಶಕ್ತಿ ಇದೆಯೋ ಇಲ್ಲವೋ ಗೊತ್ತಿಲ್ಲ.

ಶ್ರೀ ಎಚ್. ಎಂ. ಚನ್ನಬಸಪ್ಪ.;- ಮಾನ್ಯ ಸದಸ್ಯರು ಮಾತನಾಡುವಾಗ ಸಮಾಜವಾದಕ್ಕೂ ಮೈನರ್ ಇರ್ರೀಗೇಷನ್ ಸ್ಕೀಮಿಗೂ ಸಂಬಂಧ ಕಲ್ಪನೆಮಾಡಿ ಹೇಳುತ್ತಾರೆ. ಅವಕ್ಕೇನು ಸಂಬಂಧವಿದೆ?

ಶ್ರೀ ಕೆ. ಕೆಂಚಪ್ಪ:- ಇರತಕ್ಕಂತಹ ವಿಚಾರವನ್ನು ನಿಜವಾಗಿ ಹೇಳುತ್ತಿದ್ದೇನೆ. ಪ್ರತಿಯೊಬ್ಬ ಮನುಷ್ಯನಿಗೊಸಮಾನವಕಾಶ ಕಲ್ಪಿಸಿ ಕೊಡಲಾಗಿದೆಯೇಂಬುದೇ ಪ್ರಜಾಪಭುತ್ವದ ಮೊಲೋದ್ದೇಶ. ಅವರೆಲ್ಲರೂ ಸುವವ್ಯಸ್ಥೆಯಿಂದ ಜೀವನ ಮಾಡಬೇಕು. ಸಣ್ಣ ಸಣ್ಣ ಕೆರೆಗಳನ್ನು ಹಳ್ಳಿಗಳಲ್ಲಿ ಕೊಡದೇ ಹೋದರೆ ಸಮಾಜವಾದ ಕೊಳೆಯಾಗುತ್ತದೆ. ಆದ್ದರಿಂದ ಅಂತಹ ಅವಕಾಶಕ್ಕೆ ಆಸ್ಪದ ಕೊಡಬೇಡಿ ಎಂದು ನಾನು ಹೇಳುತ್ತೇನೆ.

ಹಿಂದಿನ ಸರ್ಕಾರದವರು ಮಾಡಿದ ಹಾಗೆ ನೀವು ಮಾಡುವ ಹಾಗೆ ಕಾಣುತ್ತದೆ.ಸಣ್ಣ ಸಣ್ಣ ಕೆರೆಗಳ ಜೀರ್ಣೋದ್ಧಾರ ಕೆಲಸವನ್ನು ಜಾಗ್ರತೆಯಾಗಿ ಕೈಗೊಳ್ಳಬೇಕು. ಬರಡು ಭೂಮಿಯಲ್ಲಾ ಸರಿಹೋಗಿ ಉತ್ತಮ ಭೂಮಿಯಾಗಬೇಕು.

**Sri H.M. Channabassappa-** The facts are otherewise. Small tanks are in malnad area and big tanks are in maidan area. You go to Shimoga, you have got small tanks; you go to Kolar, you have got big tanks.

ಶ್ರೀ ಬಿ.ಕೆ. ಪುಟ್ಟರಾಮಯ್ಯ:- ಅವರಿಗಿರುವ ಕನ್ನಡ ಪ್ರೇಮ ಕನ್ನಡ ದೇಶವನ್ನು ಮಾಡಿದವರಿಗಿಲ್ಲ

ಶ್ರೀ ಕೆ. ಕೆಂಚಪ್ಪ:- ಮೈನರ್ ಇರ್ರಿಗೇಷನ್ ಟ್ಯಾಂಕುಗಳನ್ನು ಅಭಿವೃದ್ಧಿ ಮಾಡದೆ ಹೋದರೆ ಬರಡು ಪ್ರದೇಶಗಳಲ್ಲಿ ಸಣ್ಣ ಸಣ್ಣ ಕೆರೆಗಳನ್ನು ಕಟ್ಟಿಸದೆ ಹೋದರೆ ಸಮಾಜವಾದ ಖಂಡಿತವಾಗಿ ಕೊಳೆಯಾಗುತ್ತದೆ ಎಂದು ಮತ್ತೊಂದುಸಾರಿ ಹೇಳುತ್ತೇನೆ.

ಶೀ ಎಚ್. ಎಂ. ಚನ್ನಬಸಪ್ಪ.;- ಮಾನ್ಯ ಸದಸ್ಯರು ಬೆಂಗಳೂರನ್ನು ಬಿಟ್ಟು ಹೋದಂತೆ ಕಾಣಲಿಲ್ಲ.

ಶ್ರೀ ಕೆ. ಕೆಂಚಪ್ಪ:- ನಾನು ಚಳ್ಳಕೆರೆ, ಮೊಳಕಾಲ್ಮೂರು, ಸಿರಾ, ಪಾವಗಡ ಮುಂತಾದ ಪ್ರಾಂತಗಳಲ್ಲಿ ಹೋಗಿ ನೋಡಿದ್ದೇನೆ. ಎಷ್ಟು ಕೆರೆಗಳನ್ನು ಕೊಟ್ಟಿದ್ದೀರಿ? ಎಷ್ಟುಜನ ನೀರಾವರಿ ವ್ಯವಸಾಯ ಮಾಡುತ್ತಿದ್ದಾರೆ.? I have gone round Kolar, Chitradurga, Pavagada, Sira and all these places which are classed as dry areas, Block cotton area ಏನಾಯಿತು? You have neglected them. What is the number of tanks you have constructed in Channagiri, Hiriyur, Sira, Madhugiri and Pavagada?

**Sri H. M. Channabasappa:-** I am going to tell that.

**Sri K. Kenchppa:-** Till then you take that what I say is correct.

ಆದುದರಿಂದ ಈಗ ನಾನು ಹೇಳತಕ್ಕದ್ದು ಇಷ್ಟೆ. ದಯವಿಟ್ಟು ಈ ರೀತಿ ಡಿಲೆ ಮಾಡುತ್ತಿರುವುದಕ್ಕೆ ಯಾರು ಯಾರು ಕಾರಣರೆಂಬುದನ್ನು ತಿಳಿದು ಅವರ ಬಗ್ಗೆ ಸೂಕ್ತ ಕ್ರಮವನ್ನು ಕೈಗೊಳ್ಳ ಬೇಕಾದದ್ದು ಸರ್ಕಾರದವರ ಕರ್ತವ್ಯ. ಸರ್ಕಾರದವರು ಯಾವ ಯಾವ ಸಾಲಿನಲ್ಲಿ ಎಷ್ಟೆಷ್ಟು ಹಣವನ್ನು ಯಾವ ಯಾವ ಬಾಬಿಗೆ ನಿಗದಿಮಾಡಿ ತೆಗೆದು ಇಡುತ್ತಾರೋ ಆ ಹಣವನ್ನು ಅಧಿಕಾರಿಗಳು ಆಯಾ ಸಾಲಿನಲ್ಲೇ ಕರ್ಚುಮಾಡಬೇಕೆಂದು ಕಡ್ಡಾಯ ಮಾಡಬೇಕು. ಸಣ್ಣ ಸಣ್ಣ ಕೆರೆಗಳ ಜೀರ್ಣೋದ್ಧಾರ ಕಾರ್ಯ ಸುಗಮವಾಗಿ

ನಡೆಯುತ್ತಿಲ್ಲ. ತಾವು ಅವರು ವರ್ಷಾದ್ಯಂತವೂ ಏನು ಕೆಲಸ ಮಾಡಿದ್ದಾರೆಂಬುದನ್ನೇ ನೋಡದೆ ಅವರಿಗೆ ತಾವು ಭಡತಿ ಇತ್ಯಾದಿಗಳನ್ನೆಲ್ಲ ಕೊಡುತ್ತಾ ಬಂದರೆ ನೀವು ಸಮಾಜವಾದ ತತ್ವವನ್ನು ಖಂಡಿತ ಜಾರಿಗೆ ತರಲು ಸಾಧ್ಯವಿಲ್ಲ. ತಾವು ಎಲ್ಲೋ ಅಲ್ಲೊಂದು ಇಲ್ಲೊಂದು ಕೆರೆಯನ್ನು ಕಟ್ಟಿರಬಹುದು ಇಲ್ಲ ಎಂದು ಹೇಳುವುದಿಲ್ಲ. ಆದರೆ ನಾನೀಗ ಹೇಳುತ್ತಿರುವುದು ಯಾವ ಯಾವ ಪ್ರದೇಶದಲ್ಲಿ ಎಷ್ಟೆಷ್ಟು ಕೆರೆಗಳನ್ನು ಕಟ್ಟಿಸಬೇಕಾಗಿತ್ತೋ ಅಷ್ಟನ್ನು ಕಟ್ಟಿಸಿಲ್ಲ ಎಂದು. ದೊಡ್ಡ ನೀರಾವರಿ ಯೋಜನೆಗಳ ಪೈಕಿಕರಿಯಾಲ ಪ್ರಾಜೆಕ್‌ಟೇನೋ ಅಪ್ಪಿಷ್ಟಾಯಿತು.ಆದರೆ ಇನ್ನುಳಿದ ನಾರಾಯಣಪುರದ ಕೆರೆ, ಬೀರೇನಹಳ್ಳಿ ಕೆರೆ ಇವುಗಳ ಪ್ರಪೋಜಲ್ಗಳೆಲ್ಲ ಫೈನಾನ್‌ಷಿಯಲ್ ಸೆಕ್ರೆಟೇರಿಯೆಟ್ಟಿನಲ್ಲಿ ಇಲ್ಲಿಗೆ ನಾಲ್ಕು ವರ್ಷಗಳಿಂದ ಯಾವ ತೀರ್ಮಾನವೂ ಇಲ್ಲದ ಅಲ್ಲೇ ಗೆದ್ದಲು ಹಿಡಿದು ಕುಳಿತಿವೆ. ಇನ್ನು ಹೀಗೆಯೆ ಆ ಉಳಿವಿನಾಳ್ ಕೆರೆಯ ಪ್ರಪೋಜಲ್ ಕೂಡ ಫೈನಾನ್ಸ್ ಇಲಾಖೆಯಲ್ಲೇ ಹುಳ ತಿಂದು ಹೋಗಿರಬಹುದು. ಅದುದರಿಂದ ನನ್ನನ್ನು ಇಂಥ ವಿಚಾರಗಳಲ್ಲಿ ಸುಮ್ಮನೆ ರೇಗಿಸಬೇಡಿ. ತಾವು ಸುಮ್ಮನೆ ನನ್ನನ್ನು ಪ್ರಚೋದನೆ ಮಾಡುತ್ತಿರುವುದರಿಂದ ನಾನೀಗ ಇಷ್ಟೆಲ್ಲವನ್ನೂ ಹೇಳಬೇಕಾಯಿತು. ಸರ್ಕಾರದವರು ಈ ವಿಚಾರದಲ್ಲಿ ತುಂಬ ಉಪೇಕ್ಷೆ ಮಾಡುತ್ತಿದ್ದೀರಿ. ಸಣ್ಣ ಕೆರೆಗಳನ್ನು ಎಲ್ಲಿಯೂ ದೊಡ್ಡದನ್ನಾಗಿ ಮಾಡಿಲ್ಲ.

ಎಷ್ಟೋ ಕೆರೆಗಳನ್ನು ದುರಸ್ತಿ ಇಲ್ಲದೆ ನೀರೇ ನಿಲ್ಲುತ್ತಿಲ್ಲ. ನೀವು ಆಡಳಿತ ವಹಿಸಿಕೊಂಡಮೇಲೆ ಎಷ್ಟು ಕೆರೆಗಳು ಜೀರ್ಣೋದ್ಧಾರವಾಗಿದೆ. ಎಷ್ಟು ಕೆರೆಗಳು ನಿರ್ಮಾಣವಾಗಿದೆ ಎಂಬುದಕ್ಕೆ ಅಂಕಿ ಅಂಶಗಳನ್ನು ಸಭೆಯ ಮುಂದೆ ಇಡಿ. ನಿಮ್ಮ ಆಡಳಿತಾವಧಿಯಲ್ಲಿ ಈ ಕಾರ್ಯಗಳು ಯಾವ ಪರ್ಸೆಂಟೇಜಿನಲ್ಲಿ ನೆಡೆದಿರುತ್ತವೆಂಬುದನ್ನು ನೋಡೋಣ.

Even though there are volumes and volumes of books in the Agricultural Department, they do not understand what is meant by 'reclamation'

ಹೀಗೆ ಆಧಾರ ಸಹಿತವಾಗಿಲ್ಲದ ಸರ್ಕುಲರುಗಲನ್ನು ಕಳುಹಿಸಿ ದೇಶವನ್ನು ಹಾಳುಮಾಡುತ್ತಿದ್ದೀರಿ.

It is a basic principle that when you construct a dam you should make provision for reclamation work. You have not even considered it.

ಹೀಗೆ ಆಧಾರ ರಹಿತವಾದ ಸರ್ಕುಲರ್‌ಗಳು ಹೊರಡುತ್ತಿರುವುದಕ್ಕೆ ಕಾರಣವೇನೆಂದರೆ, ನಿಮ್ಮ ಕೈ ಕೆಳಗಿರತಕ್ಕ ಅಧಿಕಾರವರ್ಗ ನಿಮ್ಮ ಮಾತನ್ನು ಕೇಳುತ್ತಿಲ್ಲ ಎಂಬುದಕ್ಕೆ ನಿದರ್ಶನ ಇಷ್ಟೇ ಸಾಕು. ನಾವು ಆಡಳಿತ ಪಕ್ಷಕ್ಕೆ ಇಲ್ಲಿಗೆ ಒಂದೂವರೆ ವರ್ಷಗಳಿಂದ ಸಹಕಾರವಿತ್ತು ನಿಮ್ಮ ಒದ್ದಾಟವನ್ನೆಲ್ಲಾ ನೋಡಿ ಸಾಕಾಗಿದೆ. ಈ ದಿವಸ

ನಿಮ್ಮ ಸರ್ಕಾರವೆಲ್ಲಿದೆ? ಕೊಲೆಯಾಗಿ ಹೋಗಿದೆ. ಈ ದಿವಸ ಸರ್ಕಾರಿ ನೌಕರರ ಪ್ರಭುತ್ವ ಎಲ್ಲೆಲ್ಲೂ ನಡೆಯುತ್ತಿದೆಯೆಂದು ಹೇಳುತ್ತೇನೆ.

ಶೀ ಎಚ್. ಎಂ. ಚೆನ್ನಬಸಪ್ಪ.;–ಎಲ್ಲಿ ಹಾಗಾಗಿದೆ ಎಂಬುದನ್ನು ತಿಳಿಸಿ.

ಶ್ರೀ ಕೆ. ಕೆಂಚಪ್ಪ:– ತಾವು ನಮ್ಮ ಹಿರಿಯೂರು ತಾಲ್ಲೂಕಿನ ಕಾಗದ ಪತ್ರಗಳ ವಿಚರವನ್ನೇ ತೆಗೆದುಕೊಳ್ಳಿ.

**Sri T. Mariyappa:-** You want that ultimately the State should wither away.

**Sri K. Kenchappa:-** I want the Government should wither away. Then there would come a utopian Government, Thereafter there would be no Government at all and each one will carry on in his own way so that he will be useful to the other and the others will be useful to him. Till that time comes. we have got to put up with people who tell one thing and act in a different way. We have got to obey such a Government. That is our unfortunate lot. ನಿಮ್ಮ ಈ ಯುಟೋಪಿಯನ್ ಕಾರ್ಯಗಳಿಂದ ದೇಶಕ್ಕೇನೂ ಪ್ರಯೋಜನವಾಗುವುದಿಲ್ಲ. ನೀವು ಸೋಮೇಶ್ವರಶತಕ, ನೀತಿ ಚಿಂತಾಮಣಿಗಳನ್ನು ಹೇಳಿದರೇನೂ ದೇಶಕ್ಕೆ ಉಪಕಾರವಾಗುವುದಿಲ್ಲ. ದಯವಿಟ್ಟು ನೀವು ನಿಮ್ಮ ಕೈ ಕೆಳಗಿರತಕ್ಕ ಅಧಿಕಾರವರ್ಗಕ್ಕೆ ನೀವು ಕೊಡತಕ್ಕ ಸರ್‌ಕ್ಯುಲರುಗಳಿಗೆ ಗೌರವಕೊಡುವಂತೆ ಮೊದಲು ಬಂದೋಬಸ್ತು ಮಾಡಿ. ನಿಮ್ಮ ಇತರ ಮಾತುಗಳನ್ನು ಅವರು ನಡೆಸದಿದ್ದರೂ ಹೋಗಲಿ ಕಡೆಗೆ ಅವರು ನಿಮ್ಮ ಸರ್‌ಕ್ಯುಲರುಗಳೇನು ಇರುತ್ತವೆ ಅವುಗಳಿಗಾದರೂ ಕಡೆಯ ಪಕ್ಷಕ್ಕೆ ಸ್ವಲ್ಪ ಗೌರವ ಕೊಡುವಂತೆ ಮಾಡಿ. ಹಾಗೆ ಮಾಡದೆ ಹೋದರೆ ರಾಜ್ಯ ಹಾಳಾಗುತ್ತದೆ

**Sri. H.M. Channabasappa.**The Hon'ble Member knows that Hiriyur taluk which was bad ten years ago is a very beatiful place now.

**Sri .K. Kenchappa:-** The circulars issued by Government are not respected the Second Five -Year Plan successfuly, you have got to see that the circulars issued by you are respected by officers.Whoever does not do that should be punished.

**Sri H.M.Channabasappa:-** Will you kindly tell us which circulars are not respected by whom?

**Sri K. Kenchappa:-** The letter written by Sri Channabasappa, Minister for Public works, is not respected. It has been ignored and thrown in to the waste paper basket.

ನಮ್ಮ ಹಿರಿಯೂರು ತಾಲ್ಲೂಕಿನಲ್ಲಿ ಇಲ್ಲಿಯ ತನಕ ಯಾವ ಅಭಿವೃದ್ಧಿ ಕಾರ್ಯಗಳೂ ಆಗಿಲ್ಲವೆಂದು ಹೇಳುತ್ತಲೇ ಇದ್ದೇನೆ. ತಾವು ಆ ಬಗ್ಗೆ ಒಂದು ಔಟ್‌ಲೇ ಕಳುಹಿಸಿಕೊಡಿ ಎಂದು ಹೇಳಿದಂತೆ ನಾನು ಕಳುಹಿಸಿ ಎಷ್ಟು ದಿನವಾಯಿತು. ಆದರೆ ಅಬಗ್ಗೆ ನನಗೆ ಇಲ್ಲಿಯವರೆಗೂ ಒಂದು ಉತ್ತರವಿಲ್ಲ.

ಶ್ರೀ ಎಚ್. ಎಂ. ಚನ್ನಬಸಪ್ಪ:- ಯಾರಿಗೆ ಉತ್ತರ ಬರಲಿಲ್ಲವೆಂದು ಹೇಳಿದಿರಿ.

**Sri K. Kenchappa:-**I have not received reply to my letter. When I came to you,you said that you had not received any reply to your letter.

**Sri H.M. Channabasappa:-** It is correct that you did not get a reply to your letter. but it is not correct to say that the officers have not replied to my letter. I did get the reply. At best you might accuse me for not passing on the information to you.

ಶ್ರೀ ಕೆಂಚಪ್ಪ:- ಯಾವರೀತಿ ಈ ದಿವಸ ನಿಮ್ಮ ಸರ್ಕಾರದಲ್ಲಿ ಕೆಳವರ್ಗದ ಅಧಿಕಾರಿಗಳೂ, ನೌಕರರೂ ಎಷ್ಟು ಉದಾಸೀನಭಾವದಿಂದ ಕೆಲಸ ಮಾಡುತ್ತಿದ್ದಾರೆ, ಎಷ್ಟು ಉಪೇಕ್ಷೆಯಿಂದ ವರ್ತಿಸುತ್ತಿದ್ದಾರೆಂಬುದನ್ನು ನೋಡಿದರೆ ಇನ್ನು ಮುಂದೆ ಯಾವ ಸರ್ಕಾರವೇ ಬಂದರೂ ಒಂದು ವೇಳೆ ಅದು ಉತ್ತಮ ಸರಕಾರವೇಆಗಿದ್ದರೂ ಕೂಡ ಅದೂ ಸಹ ಸರಿಯಾದ ರೀತಿಯಲ್ಲಿ ಕೆಲಸ ನಡೆಸಬೇಕಾದರೆ ಬಹಳ ಕಷ್ಟವಾಗುವಷ್ಟು ಮಟ್ಟಿಗೆ ಈಗ ಆಡಳಿತ ವರ್ಗ ಕೆಟ್ಟು ಹೋಗಿದೆ. ಇದನ್ನೆಲ್ಲ ನೀವು ಈಗಿನಿಂದಲಾದರೂ ಸರಿಪಡಿಸುವುದಕ್ಕೆ ಪ್ರಯತ್ನ ಪಟ್ಟರೆ ಇನ್ನೂ ಕೆಲವಾರು ವರ್ಷಗಳ ನಂತರವಾದರೂ ಆಡಳಿತದಲ್ಲಿ ಒಂದಿಷ್ಟು ಬಿಗಿಯನ್ನು ನಾವು ಕಾಣಬಹುದು. ಅಷ್ಟನ್ನಾದರೂ ಮಾಡಲು ಒಂದು ಮನಸ್ಸು ಮಾಡಿ ಅದೇ ನಿಮಗೊಂದು ದೊಡ್ಡ ಮಹಾತ್ಕಾರ್ಯ ಸಾಧಿಸಿದಂತಾಗಬಹುದು. ಸಾರ್ವಜನಿಕ ಮುಖಂಡರುಗಳು ಬರೆಯತಕ್ಕ ಕಾಗದ ಪತ್ರಗಳಿಗೆ ನೌಕರವರ್ಗ ಇಷ್ಟೊಂದು ಉಪೇಕ್ಷೆಯನ್ನು ತೋರಿಸುವುದು ಗೌರವಕ್ಕೆ ಹೇಳಿಸಿದ್ದಲ್ಲ. ನನ್ನ ಕಾಗದ ಪತ್ರಗಳಿಗೆ ಇವತ್ತಿನವರೆಗೂ ಉತ್ತರವಿಲ್ಲ, ಎಂದಮೇಲೆ ಇನ್ನು ಸಾಮಾನ್ಯ ಜನರಗತಿ ಏನಾಗಬಹುದು! ಪ್ರಜಾರಾಜ್ಯದಲ್ಲಿ ನೌಕರವರ್ಗ ಪ್ರಜಾತತ್ವ ಧರ್ಮಗಳಿಗೆ ವಿರುದ್ಧವಾಗಿ ರಾಜ್ಯಭಾರ ಮಾಡುವಂಥ ಒಂದು ಪದ್ಧತಿಯನ್ನು ನೀವು ಆ ವರ್ಗಕ್ಕೆ ದಯವಿಟ್ಟು ಕಲಿಸಬೇಡಿ.

ಇಂಡಸ್ಟ್ರೀಯಲ್ ಡೆವಲಪ್‌ಮೆಂಟ್ಗಳ ವಿಚಾರವನ್ನು ಪ್ರಸ್ತಾಪಿಸುತ್ತಾ ಈಗ ಪಬ್ಲಿಕ್ ಸೆಕ್ಟರಿನಲ್ಲಿರತಕ್ಕ ಕೈಗಾರಿಕೆಗಳು ಸರಿಯಾಗಿ ಕೆಲಸಮಾಡುತ್ತಿಲ್ಲವಾದ ಕಾರಣ ಅವುಗಳನ್ನೆಲ್ಲ ತೆಗೆದು ಹಾಕಿ ಪ್ರೈವೇಟ್ ಸೆಕ್ಟರ್‌ಗಳಿಗೆ ಒಪ್ಪಿಸಲು ಈಗಾಗಲೇ ಒಂದು ಸಮಿತಿಯನ್ನು ರಚಿಸಿರುವುದಾಗಿ ತಿಳಿಸಿದೆ. ಹಿಂದೆಯೂ ಸಹ ಅನೇಕ ಸಮಿತಿಗಳನ್ನು ಮಾಡಲಾಗಿತ್ತು. ಸರ್ಕಾರ ಹೀಗೆ ಒಂದೊಂದು ಕಾಲದಲ್ಲಿ ಒಂದೊಂದು ರೀತಿಯ ಪಾಲಸಿಯನ್ನು ತಮ್ಮ ಇಷ್ಟಾನುಸಾರ ಬದಲಾಯಿಸುತ್ತಾ ಹೋಗುತ್ತಿರುವುದರಿಂದಲೇ ದೇಶದಲ್ಲಿ ಕೈಗಾರಿಕಾ ಅಭಿವೃದ್ಧಿ ಆಗಲಿಲ್ಲ. ನೀವು ಮಾರ್ಗಬಿಟ್ಟು ಮಾರ್ಗಗಳನ್ನು ಹುಡುಕುತ್ತಿದ್ದೀರಿ. ನೀವು ಸರ್ಕಾರಿ ಕೈಗಾರಿಕೋದ್ಯಮಗಳನ್ನು ಈ ದಿವಸ ಖಾಸಗಿ ಜನರಿಗೆ ಒಪ್ಪಿಸಲು ಕಾರಣವೇನು? ಈ ಭಾವನೆ ತಮ್ಮಲ್ಲಿ ಹುಟ್ಟುವುದಕ್ಕೆ ತಮ್ಮ ಅಧಿಕಾರ ವರ್ಗದಲ್ಲೂ ಆಡಳಿತ ಪಕ್ಷದಲ್ಲೂ ದಕ್ಷತೆ ಇರುವುದಿಲ್ಲವೆಂಬುದೇ ಕಾರಣವಲ್ಲವೆ? ಕಪಿಲಾ ಟೆಕ್ಸ್‌ಟೈಲ್ಸ್, ನಂಜನಗೂಡು, ಮೈಸೂರು ನ್ಯೂ ಕರ್ನಾಟಕ ಮಿಲ್ಸ್, ಚನ್ನಪಟ್ಟಣ ಸ್ಪನ್ ಸಿಲ್ಕ್ ಮಿಲ್ಸ್, ಕ್ರೋ ಟ್ಯಾನಿಂಗ್ ಪ್ರೈವೇಟ್ ಲಿಮಿಟೆಡ್ ಈ ಕೈಗಾರಿಕೆಗಳ ಗೋಳೇನೆಂಬುದೆಲ್ಲಾ ಎಲ್ಲರಿಗೂ ಗೊತ್ತಾಗಿದೆ.

ಅಂದಮೇಲೆ ನಿಮಗೆ ಪ್ರೈವೇಟ್ ಸೆಕ್ಟಾರಿನಲ್ಲಿ ನಂಬಿಕೆ ಇದೆಯೇ, ಅಥವಾ ಪಬ್ಲಿಕ್ ಸೆಕ್ಟಾರಿನಲ್ಲಿ ನಂಬಿಕೆ ಇದೆಯೇ? ಸರ್ಕಾರ ಡೋಲಾಯಮಾನವಾಗಿದೆ. ಈ ರೀತಿಯಾಗಿ ಮಾಡುತ್ತಿರುವುದನ್ನು ನೋಡಿದರೆ ನಿಮಗೆ ನೀತಿ ಧರ್ಮವಿಲ್ಲ ಮತ್ತು ಅದರಂತೆ ನಡೆದುಕೊಳ್ಳಬೇಕು ಎನ್ನುವುದಿಲ್ಲವೆಂದು ಕಾಣುತ್ತದೆ. ಆದುದರಿಂದ ಇನ್ನೂ ಹೆಚ್ಚು ಹೇಳುವುದಿಲ್ಲ. ರಾಜ್ಯಪಾಲರು ತಮ್ಮ ಭಾಷಣದ ಕೊನೆಗೆ ಅನೇಕ ಮಸೂದೆಗಳು ಬರುತ್ತವೆ, ಅವುಗಳನ್ನು ಪರಿಶೀಲಿಸಿ ಎನ್ನತಕ್ಕ ವಿಚಾರವನ್ನು ಹೇಳಿದ್ದಾರೆ. ಆದುದರಿಂದ ಸರ್ಕಾರದವರು ಎಲ್ಲಾ ಕಾರ್ಯಕ್ರಮವನ್ನು ಸರಿಪಡಿಸುವುದಲ್ಲದೆ ಹಾಗೆ ಮಾಡುವಾಗ ಮುಂದೆ ಸಾಂಪ್ರದಾಯಿಕವಾಗಿ ಆ ಕಾರ್ಯಗಳು ನಡೆಯಬೇಕು ಮತ್ತು ಜನಗಳಿಗೆ ಪ್ರಭುತ್ವ ನಡೆಸುವವರ ಮೇಲೆ ನಂಬಿಕೆ ಇರಬೇಕು. ಮಂತ್ರಿಗಳು ಒಂದು ಕಡೆ ಭಾಷಣ ಮಾಡಿದಾಗ ವಾಗ್ದಾನ ಮಾಡಿದರೆ ಎಂಥ ವಾಗ್ದಾನ ಮಾಡಿದ್ದಾರೆಂಬುದನ್ನು , We don't find such promises in records. ಆದುದರಿಂದ ನಾವು ಏನುಮಾಡುವುದಕ್ಕಾಗುವುದಿಲ್ಲ. ಈ ರೀತಿಯಲ್ಲಿ ಮಾಡುವುದು ಬೇಡ. ಹಿಂದೆ ಹಿರಿಯೂರು ತಾಲ್ಲೂಕು ಕಾನಫರೆನ್ಸ್ ನಡೆದಾಗ ಒಂದು ನಿರ್ಣಯವನ್ನು ಪಾಸು ಮಾಡಿದರು. ಆಗ 1949ರಲ್ಲಿ ಮಂತ್ರಿಗಳು ಒಂದು ವಾಗ್ದಾನ ಮಾಡಿದರು. ಹೀಗೆ ಮಾಡಿದ ವಾಗ್ದಾನವನ್ನು ನಡೆಸದೆ ಹೋದರೆ ಪ್ರಜೆಗಳಿಗೆ ಆಗತಕ್ಕ ಮನೋಭಾವನೆ ಏನು ಎಂಬುವುದನ್ನು ಯೋಚಿಸಬೇಕು. ವಾಗ್ದಾನಗಳನ್ನು ಮಾಡಿದರೆ ಅದಕ್ಕೆ ಒಂದು Sanctity ಇರಬೇಕು. ಸರ್ಕಾರದವರು ಮಾಡಿದ ವಾಗ್ದಾನವನ್ನು, ಜವಾಬ್ದಾರಿ ಹೊತ್ತು ನಡೆಸುತ್ತಾರೆಂದು ಜನ ತಿಳಿಯುವಂತಿರಬೇಕು. ಮುಖ್ಯವಾಗಿ ನಾನು ಹೇಳುವುದೇನೆಂದರೇ, ಒಂದು

ಸಂಪ್ರದಾಯವನ್ನು ಹಾಕಬೇಕು. ಒಂದು ವೇಳೆ ನಿಮ್ಮಿಂದ ಏನು ಕೆಲಸವಾಗದೇ ಇದ್ದರೂ ಚಿಂತೆಯಿಲ್ಲ. ಆದರೆ ಒಂದು ಒಳ್ಳೆಯ ಸಂಪ್ರದಾಯವನ್ನಾದರೂ ಹಾಕುವುದಕ್ಕೆ ಪ್ರಯತ್ನಮಾಡಿ. ಇಲ್ಲದೆ ಹೋದರೆ ದಯಮಾಡಿ ಈ ಸ್ಥಾನಗಳಿಗೆ ಜಿಗಣೆ ಅಂಟಿಕೊಂಡ ಹಾಗೆ ಅಂಟಿಕೊಳ್ಳದೇ ದಯವಿಟ್ಟು ಹೊರಟು ಹೋಗಿ.

ಮಾನ್ಯ ಅಧ್ಯಕ್ಷರೆ, ಮೊನ್ನಿನ ದಿವಸ ರಾಜ್ಯಪಾಲರವರು ಸರಕಾರದವತಿಯಿಂದ ಈ ವಿಧಾನಸಭೆಯಲ್ಲಿ ಅಪ್ಪಣೆಕೊಡಿಸಿದ ಭಾಷಣದಲ್ಲಿ ವ್ಯಕ್ತಗೊಳಿಸಿದ ಕೆಲಹಾರು ವಿಷಯಗಳ ಬಗ್ಗೆ ನಾನು ಈಗ ಮಾತನಾಬೇಕೆಂದು ಇದ್ದೇನೆ. ಈಗ ತಾನೆ ಮಾತನಾಡಿದ ಕೆಲವು ಸದಸ್ಯರು, ಅಸೆಂಬ್ಲಿಯ ಮುಖಂಡರ ವತಿಯಿಂದ ರಾಜ್ಯಪಾಲರ ಭಾಷಣಕ್ಕೆ ವಂದನೆಗಳನ್ನು ಅರ್ಪಿಸುವುದಕ್ಕೆ ಮಂಡಿಸಿದ ಸೂಚನೆಯಮೇಲೆ ಮಾತನಾಡಿದ್ದಾರೆ. ಈ ಸೂಚನೆಗೆ ವಿರೋದವಾಗಿ ಸಹ ಅನೇಕರು ಮಾತನಾಡಿದ್ದಾರೆ. ರಾಜ್ಯಪಾಲರ ಭಾಷಣವನ್ನು ಮತ್ತು ಅವರ ಭಾಷಣಕ್ಕೆ ವಂದನೆಗಳನ್ನು ಅರ್ಪಿಸುವ ಸೂಚನೆಯ ಪರವಾಗಿ ಮಾತನಾಡಿದ ಈ ಮಾನ್ಯ ಸಭೆಯ ಸದಸ್ಯರ ಭಾಷಣಗಳನ್ನು ನೋಡಿದರೆ ನಮಗೆ ವಿಷಾದವಾಗುತ್ತದೆ. ನಾವು ಈಗ ಯಾವ ಸಂದರ್ಭದಲ್ಲಿ ಇದ್ದೇವೆ ಮತ್ತು ಈ ಸಂದರ್ಭಕ್ಕೆ ತಕ್ಕರೀತಿ ನಮಗೆ ಬೇಕಾಗಿರುವ ರಜ್ಯಾಡಳಿತ ವ್ಯವಸ್ಥೆ ಇದೆಯೇ ಎನ್ನತಕ್ಕಂಥ ಅಂಶವನ್ನು ನಾವು ಯೋಚಿಸಬೇಕಾಗಿದೆ. ಈ ರೀತಿಯಾಗಿ ನಾವು ಯೋಚನೆ ಮಾಡುವಾಗ ಹಿಂದಿನಿಂದ ಬಂದಿರತಕ್ಕಂಥ ನಡೆವಳಿಕೆಗಳನ್ನೂ ಈಗಿರತಕ್ಕ ಕಾಲಮಹಿಮೆಯನ್ನೂ ನಾವು ಗಣನೆಗೆ ತೆಗೆದುಕೊಳ್ಳಬೇಕು. ಬಹುಕಾಲದಿಂದ ನಮ್ಮ ಸಮಾಜದಲ್ಲಿ ಆಗಬೇಕಾದ ಪ್ರಗತಿದಾಯಕ ಸಲಕರಣೆಗಳು ಆಗದೆ ಇದ್ದುದರ ದೆಶೆಯಿಂದ ನಿರೀಕ್ಷಿಸಿದಷ್ಟು ಪ್ರಗತಿಯಾಗಿಲ್ಲ. ತೀವ್ರಾಸಕ್ತಿಯಿಂದ ಆಗತಕ್ಕಂಥ ಪ್ರಗತಿ ತೀವ್ರವಾಗಿ ನಾವು ಮಾಡದೆ ಹೋದರೆ ಪ್ರಪಂಚದಲ್ಲಿ ನಾಗಾಲೋಟದಿಂದ ನಡೆಯುತ್ತಿರುವ ಸ್ಪರ್ಧೆಯಲ್ಲಿ ಹಿಂದೆ ಉಳಿಯಬೇಕಾಗುತ್ತದೆ. ಬಹಳವಾಗಿ ಮುಂದುವರಿದಿರತಕ್ಕಂಥ ಜನತೆಯ ಜೊತೆಗೆ ಸ್ಪರ್ಧೆಯಲ್ಲಿ ನಾವುಗಳು ನಿಲ್ಲಲಾರೆವು. ಈ ಕಾರ್ಯಸಾಧನೆಗೆ ಮೊದಲು ನಮಗೆ ಸ್ವಾತಂತ್ರ್ಯಬೇಕು. ಸ್ವಾತಂತ್ರ್ಯ ಬಂದನಂತರ ಪ್ರಜಾಪ್ರಭುತ್ವದ ನೀತಿಯಮೇಲೆ ರಾಜ್ಯಾಡಳಿತ ನಡೆಸಿ ಸುಧಾರಣೆಗೆಗಳನ್ನು ಮಾಡಬೇಕು ಎಂಬ ಭಾವನೆಯನ್ನು ಇಟ್ಟುಕೊಂಡ್ಡಿದ್ದೆವು. ಈಗ ನಾವು ಸ್ವಾತಂತ್ರ್ಯವನ್ನು ಪಡೆದು ಹತ್ತು ವರುಷಗಳಾದವು. ಅಲ್ಲಿಂದ ಇದುವರೆವಿಗೂ ನಾವು ನಡೆದುಕೊಂಡುಬಂದಿರುವ ವಿಧಾನ, ಒಂದು ರೀತಿಯಿದೆ. ರಾಜ್ಯಪಾಲರು ನಮಗೆ ಅಸೆಂಬ್ಲಿಯಲ್ಲಿ ದಯಪಾಲಿಸಿರತಕ್ಕ ಭಾಷಣವನ್ನು ಈ ದೃಷ್ಟಿಯಿಂದಲೂ ಕೂಡ ವಿಮರ್ಶೆಮಾಡಬೇಕಾಗಿದೆ. ನಾನು ರಾಜ್ಯಪಾಲರು ವಿಧಾನಸಭೆಯಲ್ಲಿ ಮಾಡಿದ ಭಾಷಣವನ್ನು ಸಹ ನನ್ನ ಶಕ್ತ್ಯಾನುಸಾರ ನೋಡಿ ಅದರ ಅರ್ಥ ಮಾಡಿಕೊಂಡಿದ್ದೇನೆ. ಪ್ರಭುತ್ವ ನಡೆಸತಕ್ಕವರ ವತಿಯಿಂದಲೂ ಸಹ ಕೆಲವಾರು ವಿಷಯಗಳನ್ನು ನಾನು ಅರಿತುಕೊಂಡಿದ್ದೇನೆ. ಹೀಗೆ ಇವೆರಡನ್ನೂ ಅರಿತುಕೊಂಡಮೇಲೆ ಈ ಭಾಷಣಕ್ಕೆ ವಂದನೆಗಳನ್ನರ್ಪಿಸುವುದಕ್ಕೆ

ನನ್ನ ಮನಸ್ಸು ಅಷ್ಟಾಗಿ ಉತ್ಸಾಹಗೊಳ್ಳಲಾರದು. ಏತಕ್ಕೆಂದರೆ ಹಿಂದಿನ ಹತ್ತು ವರ್ಷಗಳ ಅನುಭವದಿಂದ ಈಗ ಮುಂದೇನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸಿದೆ. ನಾವು ಭಾರತದ ಕಾನೂನು ಅನ್ವಯವಾಗುವಾಗ ದೇಶದ ಹಿತಕ್ಕೆ ಅನುಕೂಲವಾಗುವಂತಾಗಬೇಕು, ಕೊನೆಯ ಪಕ್ಷ ಮುಖ್ಯವಾದ ಕೆಲವು ಉದ್ದೇಶಗಳಾದರೂ ಸಾಧನೆಯಾಗಬೇಕು, ಅದಕ್ಕೆ ಪ್ರಯತ್ನ ಮಾಡಬಹುದು ಎಂಬ ಭಾವನೆಯಿಂದ ಬಂದೆವು. ಈಗ ನಮ್ಮ ಮುಖ್ಯಮಂತ್ರಿಗಳಾಗಿರುವವರೂ ಸಹ ಬಹಳ ದಿವಸ ದೇಶದ ಪ್ರಗತಿಸಾಧನೆಗಾಗಿಯೂ ದೇಶದ ಸ್ವಾತಂತ್ರ್ಯಕ್ಕಾಗಿಯೂ ದುಡಿದಂಥವರೇ ಆಗಿದ್ದಾರೆ. ಹೀಗೆ ಬೇಕಾದಷ್ಟು ಜನರಿದ್ದಾರೆ. ಆದರೆ ದೇಶದ ಪ್ರಗತಿಗಾಗಿ ತೀವ್ರಾಸಕ್ತಿಯಿಂದ ಬೇಕಾದ ಕೆಲಸಗಳನ್ನು ಮಾಡುವ ಒಂದು ಪತಿಯಿಂದ ನಾವು ಬಂದಿರುವಾಗ ಅದನ್ನು ಯಾವ ವಿಧವಾಗಿ ಸಾಧಿಸಬೇಕಾಗಿದೆಯೆಂಬ ವಿಚಾರವನ್ನು ಸಹಿತ ಈ ರಾಜ್ಯಪಾಲರ ಭಾಷಣದಲ್ಲಿ ನಮೂದಿಸಿರುವಂತೆ ನಮಗೆ ಕಂಡು ಬರುವುದಿಲ್ಲ. ಒಂದೇ ಒಂದು ವಿಚಾರವನ್ನು ಹೇಳಬೇಕೆಂದರೆ ಒಂದುಕಡೆ ರಾಜ್ಯಪಾಲರು ಹೀಗೆ ಅಪ್ಪಣೆಕೊಡಿಸಿದ್ದಾರೆ.

"The sinificance of the Plan is not merely in increased industrialisation and production, but in the pattern of society it proposes to establish"

ಈ ದೃಷ್ಟಿಯಿಂದ ನೋಡಿದರೂ ಸಹಿತ ಯಾವ ತತ್ವ ಸಾಧನೆಗೆ ಯಾವ ಗುರಿಯನ್ನು ಮುಟ್ಟುವುದಕ್ಕೆ ಯಾವ ಯಾವ ಮಾರ್ಗಗಳನ್ನು ಅನುಸರಿಸಬೇಕೆಂಬುದನ್ನು ಕೂಡ ಸೂಚಿಸುವುದಿಲ್ಲ. ಅಮೇಲೆ

"The Plan will require heavy sacrifices from all sections of the community and I trust you will give your best consideration to proposals which will be placed before you in this respect in the current session."

ಎಂದು ಹೇಳಿರುವುದನ್ನು ನೋಡಬಹುದು. ಯಾವ ಪ್ಯಾಟ್ರನ್, ಯಾವ ಉದ್ದೇಶ, ಈಗ ನಡೆಯತಕ್ಕಂಥ ಪ್ರಜಾಪ್ರಭುತ್ವದಲ್ಲಿಸಮಾಜವಾದಿ ತತ್ವದಮೇಲೆ ಎಲ್ಲರಿಗೂ ಸಮನಾದ ಹಕ್ಕನ್ನು ಸ್ಥಾಪಿಸುವುದಕ್ಕೆ ಕಂಕಣ ಬದ್ಧರಾಗಿದ್ದಾರೆಯೇ ಎಂಬುದನ್ನು ಪರಿಶಿಲಿಸಬೇಕು. ಧ್ಯೇಯದ ವಿಚಾರದಲ್ಲಿ ನಮಗೂ ಸರಕಾರದವರಿಗೂ ವ್ಯತ್ಯಾಸವೇನು ಇಲ್ಲ. ಆದ್ದರಿಂದ ಈ ಬಗ್ಗೆ ನಾವು ಹೆಚ್ಚಾಗಿ ಹೇಳಬೇಕಾದ್ದಿಲ್ಲ ಎಂದುಕೊಂಡಿದ್ದೇನೆ. ನಿನ್ನಿನ ದಿವಸ ಈ ಭಾಷಣವನ್ನು ನೋಡಿಗಾಗ ಇಂಥ ಭಾವನೆಗಳು 1917ನೆಯ ಇಸವಿಯ ಅಸೆಂಬ್ಲಿಯಲ್ಲೇ ಹೇಳಿದ್ದರೆ ಒಳ್ಳೆಯದಾಗುತ್ತಿತ್ತೆನೋ, ಈಗಿನ ಸನ್ನಿವೇಶಕ್ಕೆ ಇವು ಸರಿಹೋಗುತ್ತವೆಯೋ ಇಲ್ಲವೋ ಎಂಬ ಶಂಕೆ ನಮ್ಮಲ್ಲಿ ಉಂಟಾಗಿದೆ.ನಾನು ನನ್ನ ಅಭಿಪ್ರಾಯಗಳನ್ನು ತಿಳಿಸುವಾಗ ಪ್ರಭುತ್ವದವರ ಅಭಿಪ್ರಾಯಕ್ಕೆ ಮನ್ನಣೆ ಕೊಡಲಾರದೆ ಈ ರೀತಿಯಾಗಿ

ಹೇಳಬೇಕಾಯಿತಲ್ಲಾ ಎಂದು ಮನನೊಂದುಕೊಂಡು ಗಮನಕ್ಕೆ ತರುತ್ತಿದ್ದೇನೆ. ನಾನೇನೋ ಇದನ್ನು ಸಂತೋಷದಿಂದ ಹೇಳುತ್ತಿಲ್ಲ. ನಾನು ಕೆಲವಾರು ಅಭಿಪ್ರಾಯಗಳನ್ನು ಹೇಳುವಾಗ ಅವುಗಳಲ್ಲಿ ಭಿನ್ನಭಿಪ್ರಾಯವಿದ್ದರೂ ಅವನ್ನು ದೇಶದ ಪ್ರಗತಿ ಮತ್ತು ಹಿತದೃಷ್ಟಿಯಿಂದ ಹೇಳುತ್ತೇನೆಯೇ ಹೊರತು ಅನ್ಯಥಾ ಅಲ್ಲ ಎಂದು ತಾವು ಭಾವಿಸಿಕೊಳ್ಳಬೇಕು ಎಂದು ಕೂಡ ಕೇಳಿಕೊಳ್ಳುತ್ತೇನೆ. ಇಷ್ಟು ಹೇಳಿ ನನ್ನ ಕೆಲವಾರು ಅಭಿಪ್ರಾಯಗಳನ್ನು ಸಭೆಯ ಮುಂದಿಡುತ್ತೇನೆ.

ಮೂಲಭೂತವಾದ ಪ್ರಜಾಪ್ರಭುತ್ವದ ತಳಹದಿಯ ಮೇಲೆ ಸಮಾಜವಾದ ತತ್ವವನ್ನು ಜಾರಿಗೆ ತರುವಾಗ ಅದಕ್ಕೆ ಯಾವ ಯಾವ ಸಲಕರಣೆಗಳು ಬೇಕೋ ಅವು ಈ ಭಾಷಣದಲ್ಲಿ ಕಾಣುತ್ತಿಲ್ಲ. ಈ ಭಾಷಣವನ್ನು ಸಮರ್ಥನೆ ಮಾಡಿರತಕ್ಕ ನಮ್ಮ ಗೆಳೆಯರು ನಮ್ಮ ಧ್ಯೇಯ ಸಮಾಜವಾದಿ ಸಮಾಜರಚನೆ ಮಾಡಬೇಕೆಂಬುದು ಎಂದು ಹೇಳಿದರು. ಆದರೆ ಹಾಗೆ ಹೇಳುವಾಗ ಯಾವ ಯಾವ ಮಾರ್ಗಗಳನ್ನು ಅನುಸರಿಸಿ ಆ ಒಂದು ರೀತಿಯ ಸಮಾಜವನ್ನು ನಿರ್ಮಾಣಮಾಡಬೇಕೆಂಬುದನ್ನು ಹೇಳಲಿಲ್ಲ. ಅದಕ್ಕೆ ನಿದರ್ಶನವಾಗಿ ಎರಡನೆಯ ಪಂಚವಾರ್ಷಿಕ ಯೋಜನೆಯನ್ನು ತಯಾರಿಸಿರುವುದಾದರು ಆ ಯೋಜನೆಯಲ್ಲಿ ಜನತೆಯುಲ್ಲಿರುವ ನಿರುದ್ಯೋಗ ಸಮಸ್ಯೆಯನ್ನು ಹೇಗೆ ಪರಿಹರಿಸಬೇಕೆದಿಂದ್ದಾರೆ, ಅಂಕಿ ಅಂಶಗಳನ್ನು ಸಂಗ್ರಹಿಸಿ ಅವುಗಳ ದೆಶೆಯಿಂದ ಉದ್ಭವಿಸುವ ಕೆಲವಾರು ಪ್ರಶ್ನೆಗಳನ್ನು ಬಿಡಿಸಿ ಯಾವ ರೀತಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲಿದ್ದಾರೆ, ಯಾವ ರೀತಿಯಾಗಿ ನಮ್ಮ ಸಮಾಜದಲ್ಲಿರುವ ಆರ್ಥಿಕ ಅಸಮಾನತೆಯನ್ನು ಸಾದ್ಯವಾದ ಮಟ್ಟಿಗೂ ಕಡಮೆ ಮಾಡಿಲಿದ್ದಾರೆಂಬುದೂಸಹ ನಮಗೆ ತಿಳಿಯಬೇಕು. ಈ ವಿಚಾರಗಳನ್ನೂ ಸಹ ನಾವು ಆಲೋಚಿಸಬೇಕಾಗಿದೆ. ಕೆಲವಾರು ನಿದರ್ಶನಗಳನ್ನು ಕೊಟ್ಟರೆ ಆಲೋಚನೆ ಮಾಡಬಹುದೆಂದು ಅನಿಸುತ್ತದೆ. ಭಾರತದ ಕಾನೂನು ಪ್ರಕಾರ ಅದು ಜಾರಿಯಾದ ಹತ್ತು ವರ್ಷಗಳಲ್ಲಿ ಪ್ರತಿಯೊಬ್ಬರಿಗೂ ಪ್ರಾಥಮಿಕ ವಿದ್ಯಾಭಾಸದ ಸಲಕರಣೆ ದೊರೆಯಬೇಕಾಗಿತ್ತು. 1930  ಮೈಸೂರು ಸಂಸ್ಥಾನದಲ್ಲಿ ಜಾರಿಯಲ್ಲಿದ್ದ ಪ್ರಾಥಮಿಕ ಪಾಠಶಾಲೆಗಳ ವಿದ್ಯಾಭ್ಯಾಸಕ್ಕೆ ಸಂಬಂಧ ಪಟ್ಟ ಕಾನೂನುಪ್ರಕಾರ 1940ನಯ ಇಸವಿಯ ಹೊತ್ತಿಗೆ ಹಳೆಯ ಮೈಸೂರು ಸಂಸ್ಥಾನದಲ್ಲಿ ಪ್ರತಿಯೊಂದು ಹಳ್ಳಿಗೂ ಶಾಲೆಗಳನ್ನೊದಗಿಸಬೇಕಿಂದಿತ್ತು.ಅದಾಗದೆ ಹೋಗಿದ್ದ ದೆಸೆಯಿಂದ 1941ನೆಯ ಇಸವಿಯಲ್ಲಿ ಮತ್ತೊಂದು ಕಾನೂನನ್ನು ಜಾರಿಗೆ ತಂದರು.ಅದರ ಉದ್ದೇಶ ಹತ್ತು ವರ್ಷಗಳಲ್ಲಿ ಕಡ್ಡಾಯವಾಗಿ ಶಿಕ್ಷಣವನ್ನು ಎಲ್ಲ ಕಡೆಯೂ ಹರಡಬೇಕೆಂಬುದೇ ಆಗಿತ್ತು. 1941ರಂದ 1951 ರವರೆಗೆ ಆ ಅವಧಿ ಮುಗಿಯಿತು. ಆದರೆ ಅದರಂತೆ ನಡೆಯಲಿಲ್ಲ. ಕಾನೂನು ಮಾಡಿದ ಮೇಲೆ ಮನಸ್ಸಿಗೆ ಬಂದಂತೆ ಮಾಡುವುದು ಉಚಿತವಲ್ಲ.ಹೀಗೆ ಮಾಡುವುದು ಯಾವ ಸಮಾಜ ರಚನಾರೀತಿ ಎಂದು ಪ್ರಶ್ನೆ ಮಾಡುತ್ತಿದ್ದೇನೆ.

ಕೆಲವಾರು ನೀರಾವರಿ ಯೋಜನೆ,ಕೈಗಾರಿಕಾ ಯೋಜನೆ ವಗೈರೆ ಕೈಗೊಳ್ಳುವುದರಿಂದ ಮೂಲಭೂತ ಪ್ರಶ್ನೆ ಬಿಡಿಸಬಹುದು ಎಂದು ಅಭಿಪ್ರಾಯ ಪಡುತ್ತಾರೆ.ಆದರೆ ಈ ಪ್ರಶ್ನೆ ಬಿಡಿಸುವುದಕ್ಕೆ ಸಲಕರಣೆಗಳೇನಿವೆಯೆಂಬುದನ್ನು ಹುಡುಕಿ ಅವುಗಳನ್ನು ಹೇಗೆ ಸಾಧಿಸುತ್ತಾರೆಂಬುದನ್ನು ಕಾದು ನೋಡಿ ಒಂದು ತಿರ್ಮಾನಕ್ಕೆ ಬರಬೇಕಾಗಿದೆ. ನಿರುದ್ಯೋಗ ಸಮಸ್ಯೆಗಳನ್ನು ಈ ಯೋಜನೆಗಳಿಂದ ಸ್ವಲ್ಪ ಮಟ್ಟಿಗೆ ನಿವಾರಣೆ ಮಾಡಬಹುದೆಂದು ಕೆಲವರು ಹೇಳುವುದಾದರೂ ಅದಕ್ಕೆ ಇದು ಸರಿಯಾದ ಸಾಧನವೇನು?ಒಂದು ತತ್ವದ ಮೇಲೇ ಸರಿಯಾದ ಒಂದು ಮಾರ್ಗವನ್ನು ಅನುಸರಿಸಿಗುರಿಯನ್ನು ಮುಟ್ಟಿ ನಿರುದ್ಯೋಗ ಸಮಸ್ಯೆಯನ್ನುಬಗೆಹರಿಸಬೇಕಾಗಿದೆ. ಆರ್ಥಿಕ ಸಮಾನತೆಯನ್ನು ನಾವು ಆ ದೃಷ್ಟಿಯಿಂದ ಸರಿದೂಗಿಸಬೇಕಾಗಿದೆ ಎಂದು ನಾನು ಅತಿ ನಮ್ರತೆಯಿಂದ ಸೂಚಿಸುತ್ತೀದ್ದೇನೆ.

ಮೈಸೂರು ರಾಜ್ಯದಲ್ಲಿ ಆರ್ಥಿಕ ಸಮಸ್ಯೆಯುನ್ನು ಯಾವ ರೀತಿ ಬಗೆ ಹರಿಸಬೆಕೇಬುಂದನ್ನು ಇದುವರೆಗೂ ರಾಜ್ಯಭಾರ ಮಾಡಿದವರು ಅಂಕಿ ಅಂಶಗಳನ್ನು ಶೇಖರಿಸಿ ಸರಿಯಾಗಿ ಸೂಚಿಸಿರುವುದಿಲ್ಲ, ಯಾವ ಮಾರ್ಗವನ್ನು ಅನುಸರುಸಿ ಇದನ್ನು ಸರಿಪಡಿಸಲು ಪ್ರಯತ್ನ ಮಾಡಿದ್ದಾರೆಂಬುದೂ ಕೊಡ ಇದುವರೆಗೂ ನನಗೆ ತಿಳಿದು ಬಂದಿಲ್ಲ. ಪ್ರಭುತ್ವ ನಡೆಸತಕ್ಕವರು ನಿನ್ನೆ ನಮಗೆ ಕೊಟ್ಟಿರುವ ಭಾಷಣದಿಂದ ಅದರ ಮೂಲವೇನು ಎಬುಂದು ನನಗೆ ಚೆನ್ನಾಗಿ ತಿಳಿಯಿತು. ಆ ಭಾಷಣದಲ್ಲಿ ಒಂದು ಕಡೆ "In the pattern of society it propose to establish - we have got to scrutinise the second Five Year Plan"ಎಂದು ಮೊಗುಂ ಆಗಿ ಹೇಳಿದ್ದಾರೆ ಯಾವ ಪ್ಲಾನ್ ಎಂಬುದನ್ನು ಸರಿಯಾಗಿ ಹೇಳುವುದಕ್ಕೆ ಬಾರದೆ, ಯಾವುದೋ ಒಂದು ಹೇಳೋಣ ಎನ್ನುವ ಶಕ್ತಿ ನಮ್ಮ ಪ್ರಭುತ್ವ ಪಕ್ಷದವರಿಗೆ ಇರಬಹುದು. ಆದರೆ ದೇಶದಲ್ಲಿ ಹಾಗೆ ಹೇಳಲು ಸಾಧ್ಯವೇ? ನಾವು ಯಾವ ದೃಷ್ಟಿಯಿಂದ ಇದನ್ನು ನಂಬಬೇಕೆಂಬುದು ನನಗೆ ಗೊತ್ತಿಲ್ಲ.

ಇನ್ನೊಂದು ವಿಚಾರ, ನನಗೆ ತಿಳಿದಿರುವಮಟ್ಟಿಗೆ ಅದರಲ್ಲಿರುವ ಎರಡು ಪಾಲಿಸಿ ವಿಷಯಗಳೆಂದರೆ, ಜಮೀನು ಮತ್ತು ಭೂಸುಧಾರಣೆ.ಜಮೀನಿನ ಹಂಚಿಕೆಯ ವಷಯದಲ್ಲಿ ನಾವು ಸುಧಾರಣೆಯನ್ನು ತರುವುದರಲ್ಲಿದ್ದೇವೆಂದು ಉಲ್ಲೇಖಿಸಿದ್ದಾರೆ. ನಾವು ಗೇಣಿ ಶಾಸನವನ್ನು ತಿದ್ದುಪಾಟು ಮಾಡಬೇಕೆನ್ನುವಾಗ, ಅಥವಾ ಯಾವ ರೀತಿ ಗೇಣಿ ಶಾಸನವಿರಬೇಕೆಂಬುದನ್ನು ವಿಮರ್ಶೆ ಮಾಡಿ ನಮ್ಮ ಸಮಾಜದಲ್ಲಿ ಇಡಬೇಕೆನ್ನುವಾಗ ಅಥವಾ ವಿವಿಧಪ್ರಾಂತಗಳಲ್ಲಿರುವ ಭೂಸುಧಾರಣೆ ಮಾರ್ಗಗಳನ್ನೆಲ್ಲಾ ಪರಿಶೀಲಿಸಿ ಒಂದೇ ರೀತಿಯಾದ ಶಾಸನವನ್ನು ಜಾರಿಗೆ ತರಬೇಕೆನ್ನುವಾಗ ಇದನ್ನು ತಂದಿರತಕ್ಕದ್ದು ನೋಡಿದರೆ, ನಿಜವಾಗಿಯೂ ಗೇಣಿಯ ವಿಷಯದಲ್ಲಿ ಪ್ರಗತಿ ಹೊಂದಿದ್ದಾರೆಯೇ ಎಂಬುದನ್ನು ನೋಡಬೇಕು. ಹಾಗಿದ್ದ ಪಕ್ಷದಲ್ಲಿ ಭೂಸ್ವಾಮ್ಯ ವಿಷಯವಾಗಿ ಎಲ್ಲ ಪಕ್ಷದವರಿಗಿಂತಲೂ

ಹೆಚ್ಚು ಪ್ರಶ್ನೆಯನ್ನ ನಾನು ನಮ್ಮ ಪಕ್ಷದ ಪರವಾಗಿ ಕೇಳುತ್ತಿದ್ದೆ. ಈ ದೃಷ್ಟಿಯಿಂದ the method of approach to a problem ಏನು ಇದೆ ಆ ಒಂದು ವಿಚಾರವನ್ನು ವಿಮರ್ಶೆ ಮಾಡಿ, ಅದನ್ನು ಸರಿಪಡಿಸುವ ವಿವಿಧ ಮಾರ್ಗಗಳು ಅಷ್ಟಾಗಿ ಕರ್ತವ್ಯಮುಖಿವಾಗಿಲ್ಲ. ಅವು ನಿಜವಾದ ರೂಪವನ್ನು ತಾಳಿ ಮುಂದೆ ಹೋಗುತ್ತಾ ಇಲ್ಲ. ಯಾವ ದೃಷ್ಟಿಯಿಂದ ನಾವೆಲ್ಲರೂ ಸಮಾಜ ನಿರ್ಮಾಣಕ್ಕೆ ಹೋರಾಡಿದ್ದೇವೆ ಎಂಬ ಪಿಚಾರವನ್ನು ನಾವು ಆಲೋಚನೆ ಮಾಡಿದರೆ, ಒಂದು ಗೇಣಿ ಶಾಸನವನ್ನು ಜಾರಿಗೆ ತಂದರೆ ಭೂ ಸಮಸ್ಯೆ ಬಗೆ ಹರಿಯುವುದೇ ಎಂದು ಕೇಳಬೇಕಾಗುತ್ತದೆ. ಈ ಭಾಷಣವನ್ನು ಸಮರ್ಥನೆ ಮಾಡಿದವರು ಇನ್ನೂ ಒಂದು ಅಭಿಪ್ರಾಯವನ್ನು ಹೇಳಿದರು. ಕೆಲವರು ಹಿಂದೆ Socialistic democratic ಮತ್ತು co-operative commonwealth of India ಮೊದಲಾದ ಸಮಾಜ ತತ್ವಗಳನ್ನು ಪ್ರತಿಪಾದಿಸತ್ತಾ ಇದ್ದರು. ಆಗ ನನ್ನ ಗೆಳೆಯರಲ್ಲಿ ಕೆಲವರು ಅದನ್ನು ಬದಲಾಯಿಸಿ ಸೋಷಿಯಲಿಸ್ಟಿಕ್ ಪ್ಯಾಟ್ರನ್ ಎಂದು ಇಟ್ಟುಕೊಂಡರು. ಈಗ ಅದನ್ನು ತಗೆದು ಹಾಕಿ ಸಮಾಜವಾದ ಎಂದು ಇಟ್ಟುಕೊಂಡರು. ಅಂದ ಮೇಲೆ ಇದರಲ್ಲಿ, ಸಮಾಜವಾದ ತತ್ವವನ್ನು ಇಟ್ಟುಕೊಳ್ಳಬೇಕೇ, ಅಥವಾ ಸೋಷಿಯಲಿಸ್ಟಿಕ್ ತತ್ವವನ್ನು ಇಟ್ಟುಕೊಳ್ಳಬೇಕೆ ಅಥವಾ ಕೋ-ಅಪರೇಟಿವ್ ಕಾಮನ್ ವೆಲ್ತ್ ಆಫ್ ಇಂಡಿಯಾ ತತ್ವವನ್ನು ಇಟ್ಟುಕೊಳ್ಳಬೇಕೆ. ಅಥವಾ in the way in which the socialistic pattern suggests itself in the Second Five Year plan-ಇದನ್ನೆಲ್ಲಾ ನಾವು ಆಲೋಚನೆ ಮಾಡಬೇಕಾಗಿದೆ. ಇಷ್ಟು ಹೇಳಿ ನಾನು ಕೆಲವಾರು ಸೂಚನೆಗಳನ್ನು ಕೊಡುವವನಾಗಿದ್ದೇನೆ. ಏತಕ್ಕೆಂದರೆ ಮೂಲಭೂತವಾಗಿ ನಾವು ವಿಚಾರಗಳನ್ನು ವಿಮರ್ಶೆ ಮಾಡಿ, ಅವುಗಳನ್ನು ಬಗೆಹರಿಸಲು ಪ್ರಯತ್ನ ಪಡದೆ ಹೋದರೆ ನಾವು ಒಂದು ದೊಡ್ಡ ತಪ್ಪುಹೆಜ್ಜೆಯನ್ನಿಟ್ಟಂತಾಗುತ್ತದೆ.ನಾವು ಈಗ ತಾನೆ ಮುಂದಿನ ಐದು ವರ್ಷಗಳ ಯೋಜನೆಗಳ ವಿಮರ್ಶೆ ಮಾಡಬೇಕೆಂದು ಇಲ್ಲಿ ಸೇರಿದ್ದೇವೆ. ನಾವು ಯಾವ ಸಮಾಜ ನಿರ್ಮಾಣಕ್ಕಾಗಿ ಇಲ್ಲಿ ಬಂದು ಸೇರಿದ್ದೇವೋ ಆ ಸಮಾಜ ನಿರ್ಮಾಣಕ್ಕೆ ಸಂಕಲ್ಪ ಮಾಡಿಕೊಳ್ಳುತ್ತಿದ್ದೇವೆ. ನಾನು ಒಂದು ವಿಷಯವನ್ನು ಬಹಳ ವಿಷಾದದಿಂದ ಹೇಳುತ್ತೇನೆ. 1939ನೇ ಇಸವಿಯಲ್ಲಿ ಪಬ್ಲಿಕ್ ಸೆಕ್ಯೂರಿಟಿ ಆಕ್ಟ್ ಎಂಬುದು ಮೈಸೂರು ಸಂಸ್ಥಾನದಲ್ಲಿ ಜಾರಿಗೆ ಬಂದಿತು. ಅದನ್ನು ಜಾರಿಗೆ ತರುವಾಗ ಈಗ ಪ್ರಭುತ್ವ ನಡೆಸತಕ್ಕ ಕೆಲವು ಕಾಂಗ್ರೆಸ್ ಸಂಸ್ಥೆಯವರು ದೇಶದಲ್ಲಿ ದಾಂಧಲೆ ಎಬ್ಬಿಸುತ್ತಿದ್ದರು. ಅವರನ್ನು ಕೆಲವು ಕಾಲ ಜೈಲಿನಲ್ಲಿಡುವುದಗೋಸ್ಕರ ಈ ಆಕ್ಟ್‌ನ್ನು ಜಾರಿಗೆ ತಂದರು. ಆಗಿನ ಕಾಲದ ಅಸೆಂಬ್ಲಿಯಲ್ಲಿ ಅನೇಕ ನನ್ನ ಗೆಳೆಯರು ಆಕ್ಟ್‌ನ್ನು ಉಗ್ರವಾಗಿ ಟೀಕಿಸಿದರು. ಅದನ್ನು ನಮ್ಮ ಸರಕಾರ ಇನ್ನೂ ಅಂಗೀಕಾರ ಮಾಡಿಕೊಂಡು ಬರುತ್ತಿದೆ. ಸ್ವಾತಂತ್ರ್ಯ ಬಂದರೂ ಭಾರತದ ಶಾಸನದ ಪ್ರಕಾರ ಪ್ರತಿಯೊಬ್ಬರಿಗೂ ಸರ್ವ ಸ್ವಾತಂತ್ರ್ಯವಿದ್ದರೂ ಆ ನಿಯಮಗಳ ವಿರುದ್ಧವಾಗಿ ಇನ್ನೂ ಈ ಪಬ್ಲಿಕ್ ಸೆಕ್ಯೂರಿಟಿ ಆಕ್ಟನ್ನು ಜಾರಿಯಲ್ಲಿ ಇಟ್ಟುಕೊಂಡು ಬಂದಿದ್ದಾರೆ. ಇದನ್ನು

ನೋಡಿದರೆ ಯಾವ ಉದ್ದೇಶಕ್ಕಾಗಿ ನಾವು ಹೋರಾಡಿದ್ದವೋ, ಆ ಉದ್ದೇಶವನ್ನು ಸಾಧನೆ ಮಾಡುವುದಕ್ಕೆ ತ್ರಿಕರಣ ಶುದ್ಧಿಯಿಂದ ಕೆಲಸವಾಗುತ್ತಿಲ್ಲವಲ್ಲಾ ಎಂದು ನನಗೆ ಗೋತ್ತಾಗುತ್ತದೆ.ಪ್ರತಿಯೊಬ್ಬರಿಗೂ ಸರ್ವಸಮಾನತೆಯನ್ನು ಕೊಟ್ಟು ಒಂದು ವೇಳೆ ಯಾರನ್ನಾದರೂ ಜೈಲಿಗೆ ಕಳುಹಿಸಿದರೆ ಅವರಿಗೆ ತಮ್ಮ ಹೇಳಿಕೆಯನ್ನು ಹೇಳುವುದಕ್ಕೆ ತಕ್ಕ ಅವಕಾಶ ಕಲ್ಪಿಸಿ ಕೊಟ್ಟು ವಿಚಾರಣೆ ಮಾಡಿ ದಂಡಿಸಬೇಕಾಗಿದೆ. ಸುಮ್ಮನೆ ಅವರನ್ನು ಜೈಲಿಗೆ ಕಳುಹಿಸಬಾರದು ಎಂಬ ತತ್ವವನ್ನು ಅಂಗೀಕರಿಸಿ, ಹೆಚ್ಚಿಗೆ ಪ್ರಚಾರಮಾಡುತ್ತಾ ಇರುವಾಗ ಇಂತಹ ಕಾನೂನನ್ನು ಇನ್ನೂ ಜಾರಿಗೆಯಲ್ಲಿಟ್ಟುಕೊಂಡು ಬರುತ್ತಿರುವುದನ್ನು ನೋಡಿದರೆ, ಅದಕ್ಕೆ ನಾನು ಏನು ಹೇಳಬೇಕು ಎಂಬುದು ಗೂತ್ತಾಗಲಿಲ್ಲ. ಇದು ಕಾನೂನಿಗೆ ತುಂಬ ವಿರುದ್ಧವಾಗಿದೆ. ಹೀಗಾದರೂ ಇನ್ನೂ ಈ ಆಕ್ಟ್ ಜಾರಿಯಲ್ಲೇ ಇದೆ. ಇದನ್ನು ಜಾಗ್ರತೆ ರದ್ದು ಗೂಳಿಸಲು ಪ್ರಯತ್ನಿಸಬೇಕು.

ಇನ್ನು ನಮ್ಮ ರಾಜ್ಯಭಾರದ ವವ್ಯಸ್ಥೆ ಎಷ್ಟರ ಮಟ್ಟಿಗೆ ಪ್ರಗತಿದಾಯಕವಾಗಿದೆಮತ್ತು ಸರ್ಕಾರದ ಕೆಲಸಕಾರ್ಯಗಳು ಎಷ್ಟರ ಮಟ್ಟಿಗೆ ನಡೆಯುತ್ತಿವೆ ಎನ್ನುವ ವಿಚಾರವನ್ನು ಆಲೋಚನೆಮಾಡಬೇಕಾಗಿದೆ.ಹೀಗೆ ವಿಚಾರಮಾಡುವಾಗ ನಾವು ಒಂದು ಮಾತು ಹೇಳಬೇಕಾಗಿದೆ. ನಾವು ಕಳೆಯನ್ನು ನಂಬಿ ಬೆಳೆಯನ್ನು ಕಿತ್ತುಹಾಕಿದ ಹಾಗಾಯಿತು ಮತ್ತು ಬೆಳಯನ್ನು ಬೆಳೆಯಲು ಹೋಗಿ ಕಳೆಯನ್ನು ಬೆಳೆದೆವು ಎಂಬ ಅರ್ಥ ಬರುವ ರೀತಿಯಲ್ಲಿ ನಮ್ಮ ರಾಜ್ಯಭಾರ ನಡೆಯುತ್ತಿದೆ.

ಅಧ್ಯಕ್ಷರು:- ವೇಳೆಯಾಯಿತು.

ಶ್ರೀ ಕೆ.ಕೆಂಚಪ್ಪ:- ನಾನು ಸಾಧ್ಯವಾದಷ್ಟು ಜಾಗ್ರತೆಯಾಗಿ ಮುಗಿಸುವವನಾಗಿದ್ದೇನೆ. ಆದರೆ ಕೆಲವರ ಅಭಿಪ್ರಾಯಗಳಿಗೆ ಬಿನ್ನಾಭಿಪ್ರಾಯಗಳಿರುವಾಗ, ಎಲ್ಲರ ಮೇಲಿನ ವಿಶ್ವಾಸದಿಂದ ಮತ್ತು ದೇಶದ ಪ್ರಗತಿಯ ದೃಷ್ಟಿಯಿಂದ ತಾವೆಲ್ಲರೂ ಇನ್ನೂ ಕೆಲವು ವಿಷಯಗಳ ಮೇಲೆ ನಾನು ಹೇಳುವ ಅಂಶಗಳನ್ನು ತಿಳಿದುಕೊಳ್ಳಬೇಕಾಗಿದೆ.

ಇನ್ನೂ ಜಿಲ್ಲಾ ಬೋರ್ಡುಗಳ ಮತ್ತು ಸ್ಥಳೀಯ ಸಂಸ್ಥೆಗಳ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಸ್ಥಳೀಯ ಸಂಸ್ಥೆಗಳ ಬೆಳವಣಿಗೆಗೆ ಎಲ್ಲ ಸೌಕರ್ಯಗಳನ್ನೂ ಒದಗಿಸಿಕೊಡಬೇಕೆಂದು ಭಾರತದ ಶಾಸನದಲ್ಲಿಯೇ ಇದೆ. ನಾವು ನಿನ್ನೆಯ ದಿನ ತುಂಬ ಶ್ರದ್ಧೆಯಿಂದ ಒಪ್ಪಿಕೊಂಡಿದ್ದೇವೆ ಮತ್ತು ಅದರಂತೆಯೇ ಮಾಡುತ್ತೇವೆ ಎಂದು ಪ್ರಮಾಣವಚನವನ್ನು ಸ್ವೀಕರಿಸಿದ್ದೇವೆ. 1942ನೆಯ ಇಸವಿಯಲ್ಲಿ ಗ್ರಾಮ ಪಂಚಾಯಿತಿ ಮತ್ತು ಜಿಲ್ಲಾ ಬೋರ್ಡ್ ಆಕ್ಟ್ ಜಾರಿಗೆ ಬಂದ ನಂತರ ಆ ಆಕ್ಟ್ ಕಾನೂನು ಬದ್ಧವಾಗಿ ಇದೆಯೇ ಮತ್ತು ಸರ್ಕಾರ ಪ್ರತಿಯೊಂದು ಗ್ರಾಮ ಪಂಚಾಯಿತಿಗೆ ಎಷ್ಟರ ಮಟ್ಟಿಗೆ ಸಹಾಯವನ್ನು ಕೊಡುತ್ತಿದೆಎಂಬುದನ್ನು ನಾನು ಚೆನ್ನಾಗಿ ತಿಳಿದಿದ್ದೇನೆ. ಈ ಸರಕಾರ ನಿಜವಾಗಿಯೂ ಪ್ರಗತಿದಾಯಕವಾಗಿ ನಡೆಸಿಕೊಂಡು ಬಂದಿರತಕ್ಕ ಸರಕಾರವೇ?

ಇದರಿಂದಲೇ ಗ್ರಾಮ ಪಂಚಾಯತಿಯವರ ಶಕ್ತಿ ಕುಗ್ಗುತ್ತಿದೆ. ಈಗ ಗ್ರಾಮಪಂಚಾಯತಿಯವರ ಶಕ್ತಿಯನ್ನು ಹೆಚ್ಚು ಮಾಡಿ ಇದುವರೆಗೂ ನಡೆಸಿಕೊಂಡು ಬಂದಿರತಕ್ಕ ಎಲ್ಲ ಸೌಕರ್ಯಗಳನ್ನು ಒದಗಿಸಬೇಕೆಂದಿರುವಾಗ ಅವರಿಗೆ ಕೊಡಬೇಕಾದ ಶೇಕಡಾ 12 $^1/_2$ ಭಾಗದ ದುಡ್ಡನ್ನು ಈವರೆಗೂ ಕೊಟ್ಟಿಲ್ಲ. ಆದರೆ ರಾಜ್ಯಭಾರದ ವವ್ಯಸ್ಥೆಯು ಸರಿಯಾಗಿ ಮತ್ತು ಪ್ರಗತಿದಾಂಯುಕವಾಗಿ ನಡೆಂಯುಬೇಕಾದರೆ ಏನೇನು ಸುಧಾರಣೆಗಳನ್ನು ಮಾಡಬೇಕಾಗಿದೇಯೋ ಅವೆಲ್ಲವನ್ನು ಮಾಡಿಕೊಡುವುದು ಪ್ರಭುತ್ವಪಕ್ಷದವರು ಪ್ರಥಮ ಕರ್ತವ್ಯವಾಗಿದೆ. ಜಿಲ್ಲಾ ಬೋರ್ಡುಗಳಲ್ಲಿಯೂ ಅದೇ ರೀತಿಯಾಗಿ ಇದೆ. ಈ ಬಗ್ಗೆ ಕಾನೂನು ಇದ್ದರೂ ಸರಕಾರ ಅದರಂತೆ ನಡೆಯುತ್ತಿಲ್ಲ. ಕಾನೂನಿನ ಪ್ರಕಾರ ಆಯಾ ಜಿಲ್ಲಾ ಲ್ಯಾಂಡ್ ರೆವಿನ್ಯೂ ಬಾಬಿನಲ್ಲಿ ಶೇಕಡಾ 6 14 ರಷ್ಟು ಆಯಾ ಜಿಲ್ಲೆಗಳಿಗೆ ಸಂಭಂದಪಟ್ಟಂತೆ ಪ್ರೊಪೋರ್ಪನೇಟಾಗಿ ಕೊಡ ಬೇಕಾಗಿದೆ. ಇದುವರೆಗೂ ನಮ್ಮ ಸರಕಾರ ಅದನ್ನು ಕೊಡದೆ ಇರುವುದು ಬಹಳ ಅನ್ಯಾಯ ಜಿಲ್ಲಾ ಬೋರ್ಡುಗಳ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. 1944 ನೆಯ ಇಸವಿಯ ಎಪ್ರಿಲ್1 ನೆಯ ತಾರೀಖಿನಿಂದ ಇದುವರೆಗೂ ಜಿಲ್ಲಾ ಬೋರ್ಡುಗಳಚುನಾವಣೆ ನಡೆಯದೆ ಇರುವುದಕ್ಕೆ ಒಂದೂಂದು ನೆಪವನ್ನು ಹೇಳಿಕೊಂಡು ಬಂದಿದ್ದಾರೆ. ಹಿಂದೆ ಒಂದು ಸಾರಿ ಜಿಲ್ಲಾ ಬೋರ್ಡುಗಳ ಚುನಾವಣೆ ನಡೆಯುತ್ತದೆ ಎಂದು ರಾಜ್ಯಪಾಲರು ಅಪ್ಪಣೆ ಕೊಡಿಸಿದರು. ಯಾವ ಕಾರಣದಿಂದ ಆರೀತಿ ಹೇಳಿದರೋ ಗೊತ್ತಾಗಲಿಲ್ಲ. ಜಿಲ್ಲಾ ಬೋರ್ಡುಗಳ ಚುನಾವಣೆ ಇನ್ನೂ ನಡೆಯಲೆ ಇಲ್ಲ. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಅಭಿಪ್ರಾಯಗಳು ಎಷ್ಟೋ ಬದಲಾವಣೆಗಳಾಗಿವೆ. ಈಗಲಾದರೂ ಇರತಕ್ಕ ಜಲ್ಲಾ ಬೋರ್ಡುಗಳ ಆಕ್ಟನ್ನು ಅನುಸರಿಸಿ ಜಿಲ್ಲಾ ಬೋರ್ಡುಗಳ ಚುನಾವಣೆಯನ್ನು ಏತಕ್ಕೆ ನಡೆಸಬಾರದು? ಇದು ಲೋಕಲ್ ಸೆಲ್ಫ್ ಗವರ್ನಮೆಂಟ್ , ಅಟಾನಮಸ್ಯಾಡಿ: ಇದು ಒಂದು ಸ್ವತಂತ್ರ್ಯವಾಗಿ ನಡೆಯತಕ್ಕ ಸಂಸ್ಥೆಯಾದುದರಿಂದ, ಸರಕಾರದವರು ಆ ಸಂಸ್ಥೆಗೆ ಉತ್ತೇಜನ ಕೊಟ್ಟು, ಅದನ್ನು ಅಭಿವೃದ್ದಿಗೆ ತರುವ ಯೋಜನೆಯನ್ನು ಮಾಡಬೇಕು.

ನಾನು ಇನ್ನೂ ಕೆಲವು ವಿಚಾರಗಳನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಈಗಿನ ರಾಜ್ಯಭಾರದ ವವ್ಯಸ್ಥೆಯಲ್ಲಿ ಏನು ಕಂಡು ಬರುತ್ತದೆ ಎಂದು ಮುಂದಾಗಿ ಹೋಗುವುದನ್ನು ಹಿಂದೆ ಹೋಗುತ್ತಿರುವ ಕಾಲವು ಸಮೀಪಿಸುತ್ತಿದೆ.ಇದುವರೆಗೂ ನಮ್ಮ ಸರಕಾರದವರು ನಡೆದುಕೊಂಡು ಬರುತ್ತಿರುವ ವಿಧಾನಗಳಲ್ಲಿ ಯಾವುದಾದರೂ ಒಂದು ವಿಧಾನವನ್ನು ಮಾತ್ರ ಉದಾಹರಣೆಗಾಗಿ ಇಲ್ಲಿ ಹೇಳುವುದಾದರೆ, ಸಣ್ಣ ಸಣ್ಣ ನೌಕರರನ್ನು ವರ್ಗವಿಷಯಗಳಿಗೆಲ್ಲಾ ನಮ್ಮ ಮಂತ್ರಿಗಳೂ ಕೈ ಹಾಕುತ್ತಿರುವುದನ್ನು ನೋಡಿದರೆ ನನ್ನ ಮನಸ್ಸಿಗೆ ಬಹಳ ಬೇಸರವನ್ನುಂಟುಮಾಡಿದೆ. ಇದು ಅವರ ಮುಖ್ಯ ಕೆಲಸವೇ? ಅವರು ತಮ್ಮ ಜವಾಬ್ದಾರಿ ಮತ್ತು ಧ್ಯೇಯಧೋರಣೆಗಳೇನು ಎಂಬುದನ್ನು ಚೆನ್ನಾಗಿ ಅರಿತವರಾಗಿದ್ದರೆ, ಇಂತಹ ಸಣ್ಣ ಕಾರ್ಯಗಳಿಗೆ ಕೈಹಾಕುತ್ತಿರಲಿಲ್ಲ.

ಇನ್ನೊಂದು ವಿಚಾರ,ಈಗ ಆಂಟಿಕಪ್ಷನ್ ಎಂಬ ಇಲಾಖೆಯಲ್ಲಿ ಎಫಿಯನ್ಸಿ ಆಡಿಟ್ ಎಂಬ ಒಂದು ಬ್ರಾಂಚ್ ಇದೆ.ಅಲ್ಲಿ ಒಂದು ಅರ್ಜಿ ಕೊಟ್ಟರೆ ತಾರೀಖು ಎರಡು–ಮೂರು–ನಾಲ್ಕು ವರ್ಷಗಳಾದರೂ ಉತ್ತರವೇ ಬರುವುದಿಲ್ಲ. ಮಂತ್ರಿಗಳಿಗೆ ಕೊಟ್ಟರೂ ಉತ್ತರವೇ ಬರುವುದಿಲ್ಲ. ಅವರ ಕರ್ತವ್ಯದ ವ್ಯಾಪ್ತಿ ಏನೆಂಬುದು ಸಹ ನನಗೆ ತಿಳಿಯುತ್ತಿಲ್ಲ. ಯಾವ ರೀತಿಯಾದರೂ ಆಡಿಟ್ ಮಾಡುವುದರ ಮೂಲಕ ಸರಕಾರಿ ಕೆಲಸ ಕಾರ್ಯಗಳಲ್ಲಿ ಒಂದು ಜಾಗರೂಕತೆಯನ್ನು ಉಂಟು ಮಾಡೋಣ ಎನ್ನುವುದಕ್ಕೆ ಯಾವುದಾದರು ಒಂದು ನಿಗದಿಯಾದ ಮಾರ್ಗವಿದೆಯೇ ಎಂದರೆ ಯಾವುದು ಇಲ್ಲ. ಎಫಿಷಿಯಂಟ್ ಆಡಿಟ್ ದಕ್ಷತೆಯಿಂದ ನಡೆಯುತ್ತಿಲ್ಲ. ತಾವು ಆ ಬಗ್ಗೆ ಯಾವ ಯಾವ ಸಲಕರಣೆಗಳನ್ನು ಎಂದರೆ ಗ್ರ್ಯಾಂಡ್ಸ್ಸ್ಯನನ್ನು ಕೊಟ್ಟಿದ್ದೀರಿ ಎನ್ನುವ ವಿಚಾರವನ್ನು ಪ್ರಸ್ತಾಪಿಸಬೇಕಾಗಿದೆ. ನನಗೆ ತಿಳಿದಿರುವ ಹಾಗೆ ಇದುವರೆಗೂ ಎಪಿಷಿಯನ್ಸಿ ಆಡಿಟ್ ಮಾಡಿರುವುದನ್ನು ನಾನು ನೋಡಿಯೇ ಇಲ್ಲ. ಅದನ್ನು ಖುದ್ದಾಗಿ ನಾನೇ ಹೋಗಿ ಅಲ್ಲಿನ ಕೆಲಸ ಕಾರ್ಯಗಳನ್ನು ನೋಡಿ ತಿಳಿದುಕೊಂಡು ಬಂದಿದ್ದೇನೆ. ಇದು ಬಹಳ ಶೋಚನೀಯವಾಗಿದೆ. ಒಟ್ಟಿನಲ್ಲಿ ರಾಜ್ಯಪಾಲರು ನಮಗೋಸ್ಕರ ಅಪ್ಪಣೆಕೊಡಿಸಿರತಕ್ಕ ಭಾಷಣದಲ್ಲಿ ಸರಕಾರದವರು ಪ್ರಗತಿದಾಯಕವಾಗಿ ದೇಶದ ಕಾರ್ಯಕ್ರಮಗಳನ್ನು ನಡೆಸಿಕೊಂಡು ಹೋಗತಕ್ಕ ಸಲಕರಣೆಗಳು ಇಲ್ಲ. ನಾವು ಯಾವ ಉದ್ದೇಶಗಳನ್ನು ಸಾಧನೆ ಮಾಡಬೇಕೆದಿಂದವೋ, ಆ ಉದ್ದೇಶ ಸಾಧನೆಗೋಸ್ಕರ ನಾನಾ ಅಂಕಿ ಅಂಶಗಳನ್ನಾದರೂ ಶೇಖರಿಸಿದ್ದಾರೆಯೇ ಎಂದರೆ ಅದು ಇಲ್ಲ. ಆದ್ದರಿಂದ ಈ ರಾಜ್ಯಪಾಲರ ಭಾಷಣವನ್ನು ಸಮರ್ಥಿಸುವುದಕ್ಕೆ ನಮಗೆ ಸಾಕಾದಷ್ಟು ಉದಾಹರಣೆಗಳು ಇಲ್ಲವಲ್ಲಾ ಎಂದು ಅತ್ಯಂತ ವ್ಯಸನದಿಂದ ಹೇಳಬೇಕಾಗಿದೆ. ನಾನು ವ್ಯಕ್ತಪಡಿಸಿರತಕ್ಕ ಕೆಲವಾರು ವಿಚಾರಗಲ್ಲಿ ಭಿನ್ನಾಭಿಪ್ರಾಯವಿರುತ್ತವೆ. ಅದಕ್ಕಾಗಿ ನನ್ನನ್ನು ಮನ್ನಿಸಬೇಕು. ಯಾವ ಒಂದು ಉದ್ದೇಶದಿಂದ ನನ್ನ ಅಭಿಪ್ರಾಯಗಳೆಲ್ಲವನ್ನೂ ಈ ಸಭೆಯ ಮುಂದೆ ಇಟ್ಟಿದ್ದೇನೆಂಬುದನ್ನು ಗ್ರಹಿಸಿ ಆ ಉದ್ದೇಶವನ್ನು ತಾವು ಒಪ್ಪಿದರೂ ಸರಿಯೇ, ಬಿಟ್ಟರೂ ಸರಿಯೇ,ಅಂತೂ ನನ್ನ ಅಭಿಪ್ರಾಯಗಳಿಗೆ ಒಂದು ಮಾನ್ಯತೆ ಇರಲಿ ಎಂದು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

* * * * *

ಶ್ರೀ. ಕೆ. ಕೆಂಚಪ್ಪ (ಹಿರಿಯೂರು), - ಮಾನ್ಯ ಅಧ್ಯಕ್ಷರೇ, ಈ ಮಸೂದೆಯಲ್ಲಿ "ಪ್ರಿಮೆಸಸ್" ಎಂದರೇನೆಂಬ ಅರ್ಥವನ್ನು ಸರಿಯಾಗಿ ಕೊಟ್ಟಿಲ್ಲ.

"Public premises means any premises." -

The word 'any' is a word which signified singular : it is almost an adjective which qualifies the noun 'Premises' belonging to, or allotted to the State Government or taken on lease or requisitional by, or on behalf of the State Government."

ಹೀಗೆಂದ ಮೇಲೆ ಇದರಲ್ಲಿ ನನಗೆ ಒಂದು ಅನುಮಾನ ಬರುತ್ತದೆ. ಲ್ಯಾಂಡ್ ರೆವಿನ್ಯೂ ಕೋಡಿನಲ್ಲಿ ಕೆಲವು ಸೆಕ್ಷನ್‌ಗಳ ಪ್ರಕಾರ ಕೆಲವು ಜಮೀನುಗಳ ಬಗ್ಗೆ ಪ್ರಜೆಗಳಿಗೆ ಒಂದು ರೀತಿಯ ಹಕ್ಕುಂಟಾಗುತ್ತದೆ. ಆ ಹಕ್ಕನ್ನು ಈಗ ಈ ಕಾನೂನು ಕಿತ್ತು ಕೊಳ್ಳುವ ಹಾಗೆ ಕಂಡು ಬರುತ್ತದೆ. ಆದುದರಿಂದ ಇದು ನ್ಯಾಯವಾದುದಲ್ಲ. ಯಾವುದಾದರೂ ಒಂದು ಜಮೀನು ಯಾರದಾದರೂ ಒಂದು ಜಮೀನು ಯಾರಾದರೂ ಒಬ್ಬ ಮನುಷ್ಯನ ವಶದಲ್ಲಿ 11 ವರ್ಷಗಳಿಗೆ ಮೇಲ್ಪಟ್ಟಿದ್ದರೆ ಅದರಲ್ಲಿ ಅವನಿಗೆ ಯಾವ ವಿಧವಾದ ಹಕ್ಕಿಲ್ಲದಿದ್ದರೂ ಆ ಜಮೀನಿನ ಬಗ್ಗೆ ಕಂದಾಯ ಇತ್ಯಾದಿಗಳನ್ನು ಆತನಿಂದ ವಸೂಲ್ಮಾಡಿಕೊಂಡು ಯಾವುದೋ ಒಂದು ರೀತಿಯಲ್ಲಿ ಆ ಜಮಾಕೊಂಡು ಯಾವುದೋ ಒಂದು ರೀತಿಯಲ್ಲಿ ಆ ಜಮೀನನ್ನು ಆತನಿಗೇ ಕೊಡುವಂತೆ ಮಾಡಬೇಕೆಂಬ ನಿಯಮ ಆ ಲ್ಯಾಂಡ್ ರೆವಿನ್ಯೂ ಕೋಡಿನಲ್ಲಿದೆ. ಅಷ್ಟೇ ಅಲ್ಲದೆ ಈಗ ನನಗೆ ಹಳ್ಳದ ಅಥವಾ ಒಂದು ಹೊಳೆಯ ದಡದಲ್ಲಿ ಒಂದು ಜಮೀನಿದ್ದರೆ ಅದರ ಪಕ್ಕದಲ್ಲಿ ಅಲೂವಿಡುಲ್ ಪಾಯಲ್‌ನಿಂದ ಕೂಡಿರತಕ್ಕಂಥ ಭೂಮಿ ಏನಿದೆ. ಅದೆಲ್ಲ ಆ ಅಕ್ಕ ಪಕ್ಕದ ಜಮೀನ್‌ದಾರರಿಗೇ ಸೇರಬೇಕೆಂಬ ನಿಯಮವಿದೆ. ಹೀಗೆ ಒಂದು ಕಡೆ ಲ್ಯಾಂಡ್ ರೆವಿನ್ಯೂ ಕೋಡಿನ ಪ್ರಕಾರ ಸರ್ಕಾರಕ್ಕೆ ಕೆಲವು ಜಮೀನುಗಳನ್ನು ಅವು ಅನ್-ಆಥರೈಸ್ ಭೂಮಿಗಳಾಗಿದ್ದರೂ ಅವು ಯಾರಯಾರ ಸುಪರ್ತಿನಲ್ಲಿರುತ್ತವೋ ಆ ಭೂಮಿಗಳನ್ನು ಅವರವರಿಗೇ ಕೊಡಬೇಕೆಂಬ ನಿಯಮವಿರುವಾಗ ಈಗ ಸರ್ಕಾರದವರು ಇಂಥ ಒಂದು ಮಸೂದೆಯನ್ನು ತರುವುದರಿಂದ ಅನೇಕರಿಗೆ ಸರಕಾರದವರು ಈ ಒಂದು ವಿಚಾರದಲ್ಲಿ ತುಂಬಾ ಆಲೋಚನೆ ಮಾಡಬೇಕಾಗಿದೆ. ಆದರೆ ಇಲ್ಲ Land includes the compound ಎಂದು ಬೇರೆ ಹೇಳಿದ್ದಾರೆ. ಇದರ ಅರ್ಥವೇ ಗೊತ್ತಾಗುತ್ತಿಲ್ಲ. ಬರಿದು ಜಮೀನುಗಳ ವಿಚಾರವಾದರೆ ಅದೊಂದು ರೀತಿ ಎಲ್ಲಾ ಜಮೀನುಗಳೂ ಸರ್ಕಾರದ್ದೇ. ಹೊಲ ಮಾಡತಕ್ಕವನು ಕೇವಲ ಒಬ್ಬ ಟೆನೆಂಟ್ ಮಾತ್ರ. ಕಂದಾಯ ಕೊಡುವ ತನಕ ಅವನು ಜಮೀನನ್ನು ಅನುಭವಿಸಬಹುದು. ಅದನ್ನು ಕೊಡುವುದು ತಪ್ಪಿ ಹೋದರೆ ಆ

ಕೂಡಲೆ ಆತನ ಜಮೀನು ಸರ್ಕಾರಕ್ಕೆ ಸೇರಿ ಬಿಡುತ್ತದೆ. ಆದರೆ ಸರ್ವೆ ನಂಬರುಳ್ಳ ಜಮೀನು ಮಾತ್ರ ಇದರಲ್ಲಿ ಸೇರುವುದಿಲ್ಲ ಎಂಬುದನ್ನು ಹೇಳುವುದಕ್ಕೆ ಹೇಗೆ ಸಾಧ್ಯವಿದೆ? ಈಗ ಇದರಲ್ಲಿ ನನಗೊಂದು ಏನು ಕಷ್ಟ ಬಂದಿದೆಯೆಂದರೆ .... ಬೆಂಗಳೂರಿನಲ್ಲಿ ಯಾರೋ ಒಬ್ಬರು ಒಂದು ಜಮೀನನ್ನು ತೆಗೆದುಕೊಂಡು ಅದನ್ನು ಕನ್‌ವರ್‌ಷನ್ ಮಾಡಿಸಿ ಅಗ್ರಿಕಲ್‌ಚರಲ್ ಲ್ಯಾಂಡನ್ನು ನಾನ್-ಅಗ್ರಿಕಲ್‌ಚರಲ್ ಉದ್ದೇಶಕ್ಕೆ ಎಂದರೆ ಮನೆ ಕಟ್ಟುವುದಕ್ಕೋಸ್ಕರವಾಗಿ ತೆಗೆದುಕೊಂಡಿದ್ದಾರೆ. ಮೊದಲು ಆ ಜಮೀನಿನಲ್ಲಿ ಹೊಲ ತೋಟಗಳೆಲ್ಲ ಇದ್ದವು. ಈ ಹಿಂದೆ ಟೆನೆನ್ಸಿ ಆಕ್ಟನ್ನು ತಂದಿದ್ದಾಗ ಅಲ್ಲಿ ಟೆನೆಂಟಿಗೆ ಭೂಮಿ ಕೊಡಬೇಕೆ ಬೇಡವೇ ಎನ್ನತಕ್ಕ ಪ್ರಶ್ನೆ ಬಂದಿದ್ದಾಗ ಅಲ್ಲಿ Land ಎಂಬ ಶಬ್ದಕ್ಕೆ ಒಂದು ತರಹ ಅರ್ಥವಿವರಿಸಿ ಕೊಟ್ಟಿದ್ದರು. ಆದರೆ ಈಗ ಇಲ್ಲಿ Land includes a compound ಎಂದು ಹೇಳಿದ್ದಾರೆ. ನಾನು ಹೇಳಿರತಕ್ಕ ಆ ಟೆನೆನ್ಸಿ ಬಾಬ್ತು ಲ್ಯಾಂಡ್ ಲಾಲ್‌ಬಾಗ್ ರಸ್ತೆ ಪಕ್ಕದಲ್ಲಿದೆ. ಈಗ ಆ ಜಾಗ ತಕರಾರು ಜಾಗವಾಗುತ್ತದೆಯೇ ಅಥವಾ ಇಲ್ಲವೇ ಎಂಬುದು ಗೊತ್ತಾಗುತ್ತಿಲ್ಲ ಈಗ ಹೆಂಡದ ಮರಗಳನ್ನು ಬೆಳಸಬಹುದು; ಮತ್ತೆ ಕೆಲವು ಕಡೆ ಇತರೆ ಮರಗಳನ್ನು ಬೆಳೆಸಬಹುದು. ಈ ತರಹದ ಜಮೀನುಗಳೂ ಸಹ ಇದರಲ್ಲಿ ಸೇರುತ್ತವೆಯೋ ಏನೋ ಒಂದೂ ಗೊತ್ತಾಗುವುದಿಲ್ಲ. ಹೀಗೆಲ್ಲಾ ಇರುವುದರಿಂದ ಇದನ್ನೆಲ್ಲ ಯಾವ ರೀತಿ ಮಾಡಬೇಕೆಂಬುದನ್ನು ಪರಿಶೀಲನೆ ಮಾಡಬೇಕಾದುದು ಅಗತ್ಯ. ಹಾಗೆ ಮಾಡದೆ ಸುಮ್ಮನೆ ಏನೋ ಒಂದು ಆಕ್ಟ್ ಮಾಡುತ್ತೇವೆಂದು ಹೊರಟರೆ ಇದರಿಂದ ಮುಂದೆ ಅನೇಕ ಅನರ್ಥಗಳು ಸಂಭವಿಸುತ್ತವೆ.

ಇನ್ನು ಈ ಬಿಲ್ಲಿನ 7ನೆಯ ಪೇಜಿನಲ್ಲಿ Power to recover rent or damages in respect of public premises as arrears of land revenue ಎಂದು ಹೇಳಿದೆ. ಇಲ್ಲಿ ಲ್ಯಾಂಡ್ ರೆವಿನ್ಯೂ ಎಂದರೆ ಏನು ಅರ್ಥಮಾಡಬೇಕು? ಇಲ್ಲಿ ಲ್ಯಾಂಡ್ ರೆವಿನ್ಯೂ ಅಂದರೆ ಅಸೆಸ್‌ಮೆಂಟ್ ಎಂದು ಅರ್ಥ ಮಾಡುವುದಕ್ಕೆ ಇದು ಸರ್ವೆ ನಂಬರಿನ ಜಮೀನಲ್ಲ. ಆದಾಗ್ಯೂ ಇದು ಅನ್ವಯಿಸುತ್ತದೆಯೇ ಎಂಬುದನ್ನು ಮಂತ್ರಿಗಳು ವಿವರಿಸಬೇಕು. ಆದರೆ ಈ ಬಿಲ್ಲನ್ನು ಏನೋ ಒಂದು ಆತುರ ಆತುರದಲ್ಲಿ ತಯಾರಿಸಿರುವಂತೆ ಕಂಡು ಬರುತ್ತಿದೆ. ಇದರಿಂದ ಅನೇಕ ಅನರ್ಥಗಳು ಆಗತಕ್ಕ ಸಂದರ್ಭವಿರುವುದರಿಂದ ಇದನ್ನು ದೀರ್ಘವಾಗಿ ಪರಿಶೀಲನೆ ಮಾಡಬೇಕಾದುದು ಅತ್ಯಗತ್ಯ. ಸೆಲೆಕ್ಷನ್ ಸಮಿತಿಯವರು ಈ ವಿಷಯಗಳನ್ನು ಚೆನ್ನಾಗಿ ಪರಿಶೀಲಿಸಬೇಕಾಗಿದೆ. ಈ ಅನುಮಾನಗಳನ್ನೆಲ್ಲಾ ತೆಗೆದು ಹಾಕಿ ಅನಂತರ ಈ ಬಿಲ್ಲನ್ನು ತಂದರೆ ಚೆನ್ನಾಗಿರುತ್ತದೆ. ಇಲ್ಲಿ ಸರ್ಕಾರದವರು ರೆಂಟ್ ಎಂದಿರುವುದಕ್ಕೆ ಏನು ಅರ್ಥ ಮಾಡುತ್ತಾರೋ ಗೊತ್ತಾಗುತ್ತಿಲ್ಲ. ಈ ಬಿಲ್ಲಿನ ಬಗ್ಗೆ ಅನೇಕರು ಮಾತನಾಡಿರಬಹುದು. ನಾನೂ ಸಹ ಅದನ್ನೇ ರಿಪೀಟ್ ಮಾಡುತ್ತಿರಬಹುದು ಇದನ್ನು ವಿಶಾಧೀಕರಿಸುವುದು ಒಳ್ಳೆಯದೆಂದು ಒತ್ತಾಯದಿಂದ ಹೇಳುತ್ತೇನೆ. ಅನ್ ಆಥರೈಸ್ ಲ್ಯಾಂಡ್ ಎಂದರೆ ಅದು ಯಾರ ಸ್ವಾಧೀನ?

ಈ ಅಕ್ರಮ ಸ್ವಾಧೀನ ಎನ್ನುವುದು ಯಾವ ಜಮೀನಿಗೆ ಅನ್ವಯಿಸುತ್ತಾರೆನ್ನುವುದು ಕೊಟ್ಟಿಲ್ಲ. Unauthorised ಎಂದರೆ Evelation ಎಂದು ಅರ್ಥವೇ? ಮಾತ್ರ ಆಗುತ್ತದೆ ಎನ್ನುವ ವಿಚಾರ ಇಲ್ಲಿದೆ. ಇದರಲ್ಲಿ

2. (e) "Unauthorised occupation", in relation to any public premises, means the occupation in relation to any public premises, means the occupation by any person of the public premises without authority for such occupation, and includes the continuance in occupation by any person of the public premises after the authority (whether by way of grant or any other mode of transfer) under which he was allowed to occupy the premises has expired or has been determined for any reason whatsoever" ಎಂದಿದೆ. public premises, ಎನ್ನುವುದರ ಅರ್ಥ ವಿವರಣೆ ಸರಿಯಾಗಿಲ್ಲ. ಜಮೀನಿಗೆ ನಾನು ಟೆನೆಂಟಾಗಿದ್ದರೆ ಅಂತಹ ಸರ್ವೆ ನಂಬರಿಗೆ ಅನ್ವಯವಾಗುತ್ತದೆಯೆ? ಎನ್ನುವ ಭಾವನೆ ಬರುತ್ತದೆ. ತಾವು ಈ ದಿನ ಈ ವಿಧಾನ ಸೌಧದ ಸುತ್ತಲು ಇರತಕ್ಕ ಜಾಗವನ್ನು ಯಾರಾದರೂ ಆಕ್ರಮವಾಗಿ ಉಪಯೋಗಿಸಿಕೊಳ್ಳುತ್ತಿದ್ದರೆ ಅವರನ್ನು ಓಡಿಸುವುದಕ್ಕಾಗಿ ಇಟ್ಟುಕೊಂಡಿದ್ದೀರಾ? ಇದು non-agricultural lands ಗೆ ಅನ್ವಯವಾಗುತ್ತದೆಯೇ ಇಲ್ಲವೇ ಎನ್ನುವುದನ್ನು ವಿವರಿಸಬೇಕು. ನಾನಾಗಲೇ ಹೇಳಿದ ಹಾಗೆ ಮುನಿಸಿಪಾಲಿಟಿಯ ಉಪಯೋಗಕ್ಕಾಗಿ ತೆಗೆದುಕೊಳ್ಳುವ ಜಾಗಕ್ಕೆ public primises ಎನ್ನುವ definition ಆಗುತ್ತದೆಯೆ ಹೇಗೆ? ಇದನ್ನೆಲ್ಲ defenition ನಲ್ಲಿ ಸರಿಯಾಗಿ ವಿವರಿಸಬೇಕು.

(ಹೀಗೆ ಕೆಂಚಪ್ಪ ನವರು ಹೇಳಿದಾಗ ಕಡಿದಾಳ ಮಂಜಪ್ಪನವರು ತಾಳ್ಮೆಯಿಂದ ಬಿಲ್ಲಿನಲ್ಲಿರುವುದನ್ನು ಓದಿದರೆ ಇದಕ್ಕೆ ಅವಕಾಶವೇ ಇರುವುದಿಲ್ಲ ಎಂದು ಪ್ರತಿಕ್ರಿಯಿಸುತ್ತಾರೆ.
ಆಗ ಕೆಂಚಪ್ಪ ನವರು ತಮ್ಮ ಮಾತನ್ನು ಮುಂದುವರೆಸುತ್ತಾ)

ಓದಿದ್ದೇನೆ. ಇದರಲ್ಲಿರುವ Definitions ಎನ್ನುವ ಸೆಕ್ಷನ್ನಿನಲ್ಲಿ,

2 (2) ' public premises' means any premises belonging to, or allotted to the State Government or taken on lease or requistioned by, or on behalf of the State Government;

(f) "premises" means any land or any building or part of a building and includes.....

(i) the garden, grounds and out houses, if any, appertaining to such building or part of a building and,

(ii) any fittings affixed to such building or part of a building for the more beneficial enjoyment thereof." ಎಂದಿದೆ. Definition ಎನ್ನುವುದು ಸರಿಯಾಗಿರಬೇಕು. Logic ಎನ್ನುವ ಪುಸ್ತಕದಲ್ಲಿ ಹೇಳಿರುವಂತೆ ...

Logic says that while defining, the reason must not conflict with Logic or the conclusion or the deductions.

ಈ ರೀತಿಯಾಗಿ ಇಲ್ಲಿ ಯೋಚನೆ ಮಾಡಬೇಕು, ಕೆಲವು Definable ಕೆಲವು Non-definable ಇರುತ್ತವೆ. ಈ ರೀತಿಯಾಗಿ ಕೆಲಸ ಮಾಡಿದರೆ ಮತ್ತಷ್ಟು ಅನುಮಾನಕ್ಕೆ ಆಸ್ಪದವಾಗುತ್ತದೆ. ಈ unauthorisd occupation ಎನ್ನುವುದು ಈಚೀಚೆಗೆ ಬಹಳ ಹೆಚ್ಚಾಗಿದೆ. ಏನು ಬೇಕಾದರೂ ಆಗಲೀ ಬಚಾವು ಮಾಡಿಕೊಳ್ಳಬಲ್ಲೆವು ಎನ್ನುವ ಉದ್ದೇಶದಿಂದ ಅಕ್ರಮವಾಗಿ ಸ್ವಾಧೀನ ಮಾಡಿಕೊಳ್ಳುತ್ತಿದ್ದಾರೆ. ಏನೋ ಈ ರೀತಿಯಾಗಿ ಹೆಚ್ಚಿನ ಅಕ್ರಮ ಸ್ವಾಧೀನವಾಗುತ್ತಿದೆ; ಇದನ್ನು ತಪ್ಪಿಸಲು ಈ ರೀತಿಯಾದ ಕಾನೂನನ್ನು ತಂದಿದ್ದಕ್ಕಾಗಿ ಸಂತೋಷ ಪಡೋಣ. ಸ್ವಾಮಿ, ಇಷ್ಟು ಹೇಳಿ ನನ್ನ ಈ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

(ತೋಟಗಾರಿಕೆಗೆ ಸಂಬಂಧಿಸಿದ ಮಾತು ಮುಂದುವರಿಸುತ್ತಾ)

"(26) plantation crops mean areca, cardamom, coconut, coffee, pepper, rubber and tea."

ಈಗ ಒಬ್ಬರು ಕಿತ್ತಳೆಯ ತೋಟವನ್ನು ಹಾಕಿದ್ದಾರೆ. ಅವರಿಗೆ ವಿನಾಯಿತಿ ಇಲ್ಲ? ಇದಕ್ಕೂ ಏಕೆ ವಿನಾಯಿತಿಯನ್ನು ಕೊಟ್ಟಿಲ್ಲ, ಇದೇ ರೀತಿ ಎಷ್ಟೋ ಪ್ಲಾಂಟೇಷನ್‌ಗಳಿವೆ. ನಮ್ಮ ಕಡೆ ಬಯಲು ಸೀಮೆಯಲ್ಲಿ ಹೊಂಗೆ ಪ್ಲಾಂಟೇಷನ್ಸ್ ಹಾಕಿದ್ದಾರೆ. ಇನ್ನೂ ಅನೇಕ ರೀತಿಯ ಪ್ಲಾಂಟೇಷನ್ಸ್‌ಗಳಿವೆ. ಅವನ್ನೆಲ್ಲ ಇದರಲ್ಲಿ ಏಕೆ ಸೇರಿಸಿಲ್ಲ? ಕೆಲವನ್ನು ಮಾತ್ರ ಏಕೆ ಸೇರಿಸಿದ್ದೀರಿ ಎಂದು ಕೇಳುತ್ತೇವೆ.

ನ್ಯಾಯವೆನ್ನತಕ್ಕದ್ದು ಒಂದೇ ನಮೂನೆ ಇರಬೇಕು. ಒಬ್ಬರಿಗೊಂದು, ಮತ್ತೊಬ್ಬರಿಗೆ ಇನ್ನೊಂದು ಹೀಗೆ ಮಾಡಬಾರದು. ಆದರೆ ಈ ಮಸೂದೆಯಲ್ಲಿ ಒಂದೇ ತರಹ ನ್ಯಾಯ ಕಾಣುವುದಿಲ್ಲ. ಇದನ್ನು ಆಲೋಚನೆ ಮಾಡಬೇಕಾಗಿದೆ.

ಈ ಮಸೂದೆಯಲ್ಲಿ ದನಗಳಿಗೆ ಬೇಕಾಗುವ ಮೇವನ್ನು ಬೆಳೆದರೆ ಅದರ ಸಂಬಂಧದಲ್ಲಿ ಏನೂ ವಿನಾಯಿತಿಯನ್ನು ಕೊಟ್ಟಿಲ್ಲ. ನಿನ್ನೆಯ ದಿನ ಮಾನ್ಯ ಮಂತ್ರಿಗಳು ಮಾತನಾಡುವಾಗ ಎಲ್ಲಿಯಾದರೂ ಗೋಮಾಳವಿಲ್ಲದೆಹೋದರೆ ಅವರವರ ಹೊಲದೊಳಗೇ ಮೇವನ್ನು ಬೆಳೆದುಕೊಳ್ಳಬೇಕೆಂದು ಹೇಳಿದರು. ಜಮೀನು ಇರುವವರು ದನಗಳನ್ನೂ, ಎತ್ತುಗಳನ್ನೂ ಇಟ್ಟುಕೊಳ್ಳಲೇಬೇಕು. ನಾವು mechanised cultivation

ಮಾಡಲು ಅಷ್ಟಾಗಿ ಸಾಧ್ಯವಿಲ್ಲ. ದನಗಳನ್ನು ಸಾಕುವುದರಿಂದ ಗೊಬ್ಬರ ಸಿಕ್ಕುತ್ತೆ ಮತ್ತು ಗಿಡಗಳಿಂದ ಹಸುರು ಗೊಬ್ಬರ ದೊರೆಯುತ್ತದೆ. ಇದಕ್ಕೆ ಈ ಮಸೂದೆಯಲ್ಲಿ ಪ್ರಾವಿಷನ್ಸ್ ಇಲ್ಲ. ದನಗಳಿಗೆ ಬೇಕಾದ ಮೇವು ಇಲ್ಲದೆಹೋದರೆ ದನಗಳೂ ಎತ್ತುಗಳೂ ಬದುಕುವುದಿಲ್ಲ. ಭತ್ತವನ್ನು ಬೆಳೆಯುವ ಕಡೆಗಳಲ್ಲಿ ಗದ್ದೆಗಳಲ್ಲಿ ಮೇವು ಬೆಳೆಯಲು ಸಾಧ್ಯವಿಲ್ಲ. ದನಗಳಿಗಾಗಿ ಹುಲ್ಲನ್ನು ಬೆಳೆಯಲೇ ಬೇಕಾಗುತ್ತದೆ. ಅದಕ್ಕೆ ಈ ಮಸೂದೆಯಲ್ಲಿ ಏನೇನೂ ಪ್ರಾವಿಷನ್ಸ್ ಇಲ್ಲ. ಒಬ್ಬ ಮನುಷ್ಯನು ತನ್ನಲ್ಲಿರುವ ದನಗಳಿಗೆ ಬೇಕಾದಷ್ಟು ಹುಲ್ಲನ್ನು ಬೆಳೆಯುವಷ್ಟು ಜಮೀನನ್ನು exempt ಮಾಡಲೇಬೇಕು. ಎಲ್ಲರಿಗೂ ಉಳುವುದಕ್ಕೆ ದನ, ಎತ್ತುಗಳು ಬೇಕು. ಅವುಗಳನ್ನು ಸಾಕತಕ್ಕ ಅವಶ್ಯಕತೆ ಇದೆ. ಅದಕ್ಕೆ ಏನು ಮಾಡಬೇಕೆನ್ನುವುದರ ಬಗ್ಗೆ ಹೇಳುತ್ತಿದ್ದೇನೆ. ಇದು ಎಲ್ಲರಿಗೂ ಅನ್ವಯಿಸತಕ್ಕ ವಿಷಯ. ಕ್ಲಾಜ್ ಎರಡರಲ್ಲಿ :

'(1) "agriculture" includes

(a) horticulture:

(b) the raising of crops, grass or garden produce;'.

ಎಂದು ಹೇಳಿದೆ. ಇದರ ಪ್ರಕಾರ ಹುಲ್ಲು ಬೆಳೆಯುವುದನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತೀರಿ. ಬೆಂಗಳೂರಿನಲ್ಲಿ ಯಾರೋ ಒಬ್ಬರು 500 ಎಕರೆಯಲ್ಲಿ ಹುಲ್ಲು ಬೆಳೆದು ಮಾರತಕ್ಕ ಸಂದರ್ಭದಲ್ಲಿ ಅವರಿಂದ ಜಮೀನನ್ನು ತೆಗೆದುಕೊಳ್ಳಿ, ಬೇಡವೆನ್ನುವುದಿಲ್ಲ. ಆದರೆ ಜಮೀನ್ದಾರನಿಗೆ ಹುಲ್ಲು ಬೆಳೆಯಲು ಭೂಮಿ ಅವಶ್ಯಕವಾಗಿ ಬೇಕಾಗಿದೆ.

ಶ್ರೀ ಟಿ.ಎನ್.ಮೂಡಲಗಿರಿಗೌಡ (ಕುಣಿಗಲ್):- ಹುಲ್ಲುಗಾವಲು ಎಷ್ಟಿರಬೇಕು, ಎನ್ನುವುದರ ಬಗ್ಗೆ ತಮ್ಮ ಸಲಹೆ ಇದ್ದರೆ ಹೇಳಿ.

ಶ್ರೀ ಕೆ. ಕೆಂಚಪ್ಪ:- ಅದೆಲ್ಲ ಲ್ಯಾಂಡ್ ರೆವೆನ್ಯೂ ಕೋಡಿನಲ್ಲಿ ಉಲ್ಲೇಖಿತವಾಗಿದೆ. ಒಂದೊಂದು ದನಕ್ಕೆ ಎಷ್ಟು ಬೇಕಾಗುತ್ತದೆಂದು ಇದೆ. ಹುಲ್ಲು ಗಾವಲನ್ನು ಬೆಳೆಸುವುದಕ್ಕೆ ಎಷ್ಟು ಬಿಡಬೇಕು, ಎಷ್ಟನ್ನು ಲೆಕ್ಕಾಚಾರಕ್ಕೆ ತೆಗೆದುಕೊಳ್ಳಬೇಕು ಎನ್ನುವುದೇ ಪ್ರಶ್ನೆ.

5 P.M. ಆಮೇಲೆ,

'(c) the use by an agriculturist of the land held by him or a part thereof for the grazing of his cattle'.

ಎಂದಿದೆ. ತನ್ನ ಜಮೀನಿನಲ್ಲೆ ದನಗಳನ್ನು ಮೇಯಿಸುವ ಸಲುವಾಗಿ ಎಷ್ಟು ಜಮೀನನ್ನು ಕೊಡಬೇಕೆನ್ನುವುದನ್ನು ಸ್ವಲ್ಪ ಆಲೋಚನೆ ಮಾಡಬೇಕು. ಆದುದರಿಂದ ಇದನ್ನು ಮೊದಲಿಗೇ ಮಾಡಬೇಕಾಗಿದೆ. ಮತ್ತೆ

"but does not include allied pursuits or the cutting of wood only"

ಎಂದಿದೆ. ಉತ್ಪತ್ತಿಯನ್ನು ಆಲೋಚನೆ ಮಾಡುವಾಗ Allied pursuitsನ್ನು ಗಣನೆಗೆ ತೆಗೆದುಕೊಳ್ಳಬಾರದು ಎನ್ನುವ ವಿಚಾರ ಸ್ವಲ್ಪ ಸಿಗ್ನಿಫಿಕೆಂಟು ಆಗಿದೆ. ಜಮೀನು ಹಿಡುವಳಿಯ ಉತ್ಪತ್ತಿಯನ್ನು ಉಪಕಸಬು ಎಂದು ಸೇರಿಸಿಬಿಟ್ಟು ಆ ರೀತಿಯಾಗಿ ಸೀಲಿಂಗನ್ನು ನಿಗದಿಮಾಡಿದರೆ ಯಾವ ಸಮಾಜದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದಕ್ಕಾಗುತ್ತದೆ? ಇದು ಯಾವ ಮೂಲ ಭೂತ ತತ್ವವನ್ನು ಒಳಗೊಂಡಿದೆ ಎನ್ನುವುದನ್ನು ನಾವು ಇಲ್ಲಿ ಆಲೋಚನೆ ಮಾಡಬೇಕಾಗಿದೆ. ತಾವು ಜಮೀನನ್ನು ಹಂಚುವ ಹವ್ಯಾಸಕ್ಕೆ ಕೈಹಾಕಿ ಮುಖ್ಯವಾದ ವಿಚಾರವನ್ನೇ ಇಲ್ಲಿ ಕೈಬಿಡಲಾಗಿದೆ. ಇದಕ್ಕೆ ಒಂದು ನಿದರ್ಶನವನ್ನು ಹೇಳಬೇಕಾದರೆ, ಒಬ್ಬ ಸಾಹುಕಾರ ಬೆಂಗಳೂರಿನಲ್ಲಿದ್ದುಕೊಂಡು ತಿಂಗಳಿಗೆ ಒಂದೋ ಅಥವಾ ಒಂದೂವರೆ ಲಕ್ಷ ಅಥವಾ ಎರಡು ಲಕ್ಷದಷ್ಟು ಉತ್ಪತ್ತಿ ಬರುವಂತೆ ಮಾಡಿಕೊಂಡಿರುತ್ತಾನೆ. ಅಂತಹವನು ಮೂರುಸಾವಿರದ ಆರುನೂರು ರೂಪಾಯಿಗಳಷ್ಟು ಉತ್ಪತ್ತಿ ಬರುವಷ್ಟು ಜಮೀನನ್ನು ಪರಮಾವಧಿಯಾಗಿಟ್ಟುಕೊಳ್ಳಬಹುದು. ಜಮೀನನ್ನೇ ನಂಬಿಕೊಂಡ ಇನ್ನೊಬ್ಬನಿಗೂ 3,600 ರೂಪಾಯಿ ಪರಿಮಿತಿ ಇಟ್ಟಿದ್ದೀರಿ. ಇದು ಯಾವ ಸಮಾಜವಾದ ? ಪೃಥ್ವಿಯಲ್ಲಿಲ್ಲದ ಸಮಾಜವಾದವನ್ನು ತಾವು ಆಲೋಚನೆ ಮಾಡಬೇಕಾಗಿದೆ. Is there any basic objective while introducing this Bill ? ಯಾವ ಮೂಲಭೂತವಾದ ತತ್ವವನ್ನು ಇಟ್ಟುಕೊಂಡು ಈ ಬಿಲ್ಲನ್ನು ಇಲ್ಲಿ ಇಂಟ್ರೊಡ್ಯೂಸ್ ಮಾಡಿಲ್ಲ? ಇರತಕ್ಕ ಎಷ್ಟೋ ಲಕ್ಷ ಎಕರೆಗಳಷ್ಟು ಭೂಮಿಯ ಸ್ಟ್ಯಾಟಿಸ್ಟಿಕ್ಸ್ ಬರೆದುಕೊಂಡು ಬಿಟ್ಟರೆ ಸಾಕೆ? ದೈವಿಕವಾಗಿ ಕೊಟ್ಟಿರುವ ಶಕ್ತಿಗೆ ಹೊಂದಿಕೊಂಡು ಇರತಕ್ಕ ಭೂಮಿಯ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವೇ ಎನ್ನುವುದನ್ನು ಯೋಚನೆ ಮಾಡಲು ಯಾವ ವ್ಯವಸ್ಥೆ ನಿಮ್ಮಲ್ಲಿದೆ? ಈ ದೃಷ್ಟಿಯಿಂದ ನೋಡಿದರೆ ಇದರಲ್ಲಿ ಯಾವ ಮೂಲ ಭೂತವಾದ ತತ್ವವೂ ಇಲ್ಲ.

We would however urge that ceiling may be imposed early in other sectors of the colony also so that there may be no sense of grievance on the part of agriculturists.

ಭೂಮಿಯ ಸುಧಾರಣೆಯನ್ನು ಮಾಡುವಾಗ ಸೀಲಿಂಗು ಪಾಯಿಂಟನ್ನು ನಿಗದಿಮಾಡುವುದು ಬಹಳ ಮಹತ್ವವುಳ್ಳದ್ದು. ಇಲ್ಲಿ ಬೇಸಿಕ್ಕು ಹೋಲ್ಡಿಂಗು ನಾನೂರು ರೂಪಾಯಿಗಳೆಂದು ನಿಗದಿ ಮಾಡಲಾಗಿದೆ. ಆದರೆ ಇದು ನಮ್ಮ ಕಡೆಯ ಸ್ಕೂಲು ಮೇಷ್ಟರು, ಜವಾನನಿಗೆ ಬರುವ ಸಂಬಳಕ್ಕೂ ಕಡಮೆಯಾಗಿದೆ. ಈ ಜವಾನರಿಗೂ ಕನಿಷ್ಟವಾದ ಸಂಬಳ ಐವತ್ತೈದರಿಂದ ಅರವತ್ತರವರೆಗೆ ಇರಬೇಕು ಮತ್ತು ಇದಕ್ಕಿಂತ ಕಡಿಮೆ ಇರಕೂಡದು ಎಂದು ಈಗಾಗಲೇ ಮಾಡಲಾಗಿದೆ. ಈ ಬಿಲ್ಲಿನಲ್ಲಿ "ಬೇಸಿಕ್ಕು ಹೋಲ್ಡಿಂಗು" ಎನ್ನುವ ಪದವನ್ನು ಎಲ್ಲಿಂದ ತಂದಿದ್ದೀರಿ? ಪೃಥ್ವಿಯಲ್ಲಿ ಇಲ್ಲದೇ ಇರುವ ಪದವನ್ನು ಇಲ್ಲಿತಂದಿದ್ದೀರಿ, ಫ್ಯಾಮಿಲಿ ಹೋಲ್ಡಿಂಗು, ಎಕನಾಮಿಕ್ಕು ಹೋಲ್ಡಿಂಗೂ

ಎನ್ನುವುದನ್ನು ಆಲೋಚನೆ ಮಾಡುವಾಗ ಬೇಸಿಕ್ಕು ಹೋಲ್ಡಿಂಗು ಹೇಗೆ, ಫ್ಯಾಮಿಲಿ ಹೋಲ್ಡಿಂಗು ಹೇಗೆ ಎನ್ನುವುದನ್ನು ತಾವು ವಿಶದೀಕರಿಸಬೆಕು.

'Basic Holding' generally includes the minimum area needed for profitable cultivation."

ಈ ರೀತಿಯಾಗಿ ಉತ್ಪತ್ತಿಯನ್ನು ಜನರಲ್ಲಾಗಿ ಪ್ರಾಫಿಟಬಲ್ ಕಲ್ಟಿವೇಷನ್ನು ಎಂದು ಕರೆಯುವುದಕ್ಕೆ ನಿಮ್ಮ ಬಿಲ್ಲಿನಲ್ಲಿ ಯಾವ, ರೀತಿಯಾಗಿ ಅಳವಡಿಸಿಕೊಂಡಿದ್ದೀರಿ? ಬೇಸಿಕ್ಕು ಹೋಲ್ಡಿಂಗಿಗೆ ಫ್ಯಾಮಿಲಿ ಹೋಲ್ಡಿಂಗಿನ ಮೂರರಲ್ಲಿ ಒಂದು ಭಾಗ ಎಂದು ನಿವೇನೋ ಲೆಕ್ಕವನ್ನು ತೆಗೆದುಕೊಂಡಿದ್ದೀರಿ. ಇದರಿಂದ ಇಲ್ಲಿರುವ ಫ್ಯಾಮಿಲಿ ಹೋಲ್ಡಿಂಗು ಏನು ಎನ್ನುವುದು ಅರ್ಥವಾಗುವುದಿಲ್ಲ. 1,200 ರೂಪಾಯಿಗಳ ಉತ್ಪತ್ತಿ ಎಂದು ಮಾಡಿದ್ದೀರಿ. ಎಂದರೆ ತಿಂಗಳಿಗೆ ನೂರು ರೂಪಾಯಿ ಎಂದಾಗುತ್ತದೆ. ಇದು ನಮ್ಮ ರೈತರ ಮಟ್ಟಕ್ಕೆ ಅನುಕೂಲವಾಗುತ್ತದೆ ಎಂದು ಇದರಲ್ಲಿ ಹೇಳಲಾಗಿದೆ.

ಶ್ರೀ ಎಚ್. ಎಂ. ಚನ್ನಬಸಪ್ಪ:-. ಹೆಚ್ಚಿಗೆ ಮಾಡಬೇಕೆಂದು ತಮ್ಮ ಅಭಿಪ್ರಾಯವೋ?

ಶ್ರೀ ಕೆ. ಕೆಂಚಪ್ಪ:- ಸೀಲಿಂಗನ್ನು ನಿಗದಿಮಾಡುವಾಗ ಎಷ್ಟೋ ಕಡೆಗಳಲ್ಲಿರುವ ಧಾರಣೆವಾಸಿಗಳನ್ನು ತೆಗೆದುಕೊಳ್ಳಬಾಕಾಗುತ್ತದೆ ಮತ್ತು ಒಬ್ಬ ಮನುಷ್ಯನನ್ನು ತೆಗೆದುಕೊಳ್ಳಬೇಕಾಗುತ್ತದೆ ಮತ್ತು ಒಬ್ಬ ಮನುಷ್ಯನು ತನ್ನ ಮಕ್ಕಳ ವಿದ್ಯಾಭ್ಯಾಸ, ಪೋಷಣೆ, ಲಗ್ನ ಇತ್ಯಾದಿಗಳಿಗೆ ಒಂದು ಮಿನಿಮಂ ಲಿಮಿಟ್ಟು ಇಷ್ಟೇ ಇರಬೇಕು ಎನ್ನುವುದನ್ನು ಲೆಕ್ಕ ಹಾಕಬೇಕು ಇದಕ್ಕೆ ಎಕನಾಮಿಕ್ ಹೋಲ್ಡಿಂಗ್ ಎನ್ನುತ್ತಾರೆ ಅದಕ್ಕೆ ಫ್ಯಾಮಿಲಿ ಹೋಲ್ಡಿಂಗ್ ಎಂದು ಬರೆಯುತ್ತಾರೆ. ಹೈದರಾಬಾದಿನಲ್ಲಿ ಫ್ಯಾಮಿಲಿ ಹೋಲ್ಡಿಂಗ್ ಎಂದು ಇಟ್ಟುಕೊಂಡಿದ್ದಾರೆ. ಇದನ್ನು ಉಲ್ಲೇಖಿಸಿ ಎಕನಾಮಿಕ್ಸ್ ಹೋಲ್ಡಿಂಗ್ ಬಿಟ್ಟುಬಿಟ್ಟಿದ್ದಾರೆ.

By this arbitrary conception of fixing the income of the family holding and the income of the family holding and the income of the family holding and the income of the basic holding and by fixing this income arbitrarily, you have jumped to the conclusion that ceiling should be Rs. 3,600. ಇದು wrong approach. ಎಷ್ಟು ಸೀಲಿಂಗ್ ತೆಗೆದುಕೊಳ್ಳಬೇಕು, ಎಷ್ಟು ತೆಗೆದುಕೊಂಡರೆ ಸಮಾಜದಲ್ಲಿ ಅಸಮಾಧಾನ ಉದ್ಭವಿಸುತ್ತದೆ ಅಥವಾ ಸಮಾಧಾನ ಎಷ್ಟು ಜನಗಳಿಗೆ ಉದ್ಭವಿಸುತ್ತದೆ ಎನ್ನುವುದನ್ನು ನೋಡಬೇಕು. ಎಲ್ಲರಿಗೂ ಸಮಾಧಾನವಿಲ್ಲದಿದ್ದರೂ ಸಹ ಸಮಾಜದಲ್ಲಿ ಸುಮಾರು ಶೇಕಡ 75 ಜನಗಳಿಗೆ ಸಮಾಧಾನಕರವಾಗುವುದಾದರೆ ಅದನ್ನು ಯೋಚನೆ ಮಾಡಬೆಕು. ಭೂಮಿಯನ್ನು ಹಂಚಿಕೆ ಮಾಡುವ ವಿಚಾರವಾಗಿ ಹೇಳುವುದಾದರೆ ಭೂಮಿ ಕೊಡುತ್ತೇವೆ ಎಂದರೆ ನಾನಾ ನಮೂನೆಯ ವ್ಯವಸ್ಥೆ ಇದೆ. ಇದ್ದವರಿಗೆ ಎಕನಾಮಿಕ್ ಹೋಲ್ಡಿಂಗ್ ಕೊಟ್ಟು

ಮೂರು ನಾಲ್ಕರಷ್ಟು ಐದರಷ್ಟು ಸೀಲಿಂಗ್ ಪಾಯಿಂಟ್ ಇಟ್ಟು ಅದರ ಮೇಲೆ ಬರತಕ್ಕ ಜನಗಳಿಗೆ ಕ್ಲಾಜ್ ಅನ್ವಯಿಸುವ ಹಾಗೆ ಇರಬೇಕು. ಈ ರೀತಿ ಮಾಡುವುದನ್ನು ಆಲೋಚನೆ ಮಾಡಿದ್ದೀರಾ ಶೇಕಡಾ ·75ರಷ್ಟು ಜನ ಹಳ್ಳಿಯಲ್ಲಿದ್ದಾರೆ. ಹೊಟ್ಟೆಗೆ ಇಲ್ಲದವನಿಗೆ ಒಂದು ತುತ್ತು ಕೊಟ್ಟರೆ ಅಂಗಲಾಚಿ ಬೇಡಿಕೊಂಡು ತೆಗೆದುಕೊಳ್ಳುತ್ತಾನೆ. A hungry dog stretches its mouth ever for a straw. ನಿಮ್ಮದು restricted economy, free trade or controlled economyಯೇ? ಅದನ್ನು ಹೇಳಬೇಕು. ಅದು ಮೂಲಭೂತವೆಂದು ಭಾವಿಸುತ್ತಾರೆ. ರಿಸ್ಟ್ರಿಕ್ಟೆಡ್ ಎಕಾನಮಿ ಇಡದೆ ಹೋದರೆ ಯಾವ ರೀತಿ ಸಮಾಜ ಸ್ಥಾಪಿಸುತ್ತೀರಿ, ಎನ್ನುವುದು ಮೂಲಭೂತವಾಗಿ ಇಟ್ಟು ಡಿಲ್ಲಿಯಲ್ಲಿ ಕುಳಿತಿರತಕ್ಕ ಕಮೀಷನ್‌ನವರು ಏನೋ ರಿಪೋರ್ಟ್ ಕೊಟ್ಟರು, His master's voiceನಂತೆ ಅವರು ಹೇಳಿದ್ದನ್ನು ಒಬೇ ಮಾಡಬೇಕು ಎಂದು ಕೂತರೆ ನಾವು ಒಬೇ ಮಾಡುವುದಿಲ್ಲ. ಅದು ರೀಜನಬಲ್ ಆಗಿದ್ದರೆ ಒಪ್ಪಿಕೊಳ್ಳಿ. ಅವರು ನಮ್ಮವರೇ, ನಮ್ಮವರೂ ಅಲ್ಲಿಗೆ ಹೋಗಿದ್ದಾರೆ, ಆಕಸ್ಮಾತ್ ಆಗಿ ಒಂದು ಇಕ್ಕಟ್ಟಿಗೆ ಸಿಕ್ಕಿಬಿದ್ದು ಅವರು ಅದನ್ನು ಮಾಡಿರಬಹುದು. ಆದ್ದರಿಂದ ನಾವು ಅದನ್ನು ಆಲೋಚನೆ ಮಾಡಲಿಕ್ಕೆ ಬೇಕಾಗಿದೆ. "Each man to himself" let the devil take care of the hindmost' ಎಂದು ಹೇಳಿದ ಹಾಗೆ ಆಗುತ್ತದೆ. ಅದು ಸೋಷಿಯಲಿಸ್ಟ್ ಏಕಾನಮಿ ಇಡಲೇ ಬೇಕಾಗುತ್ತದೆ. ಇದು ಜಟಿಲವಾದ ಪ್ರಶ್ನೆ. ಸುಲಭದ್ದು ಎಂದು ನಾನು ಹೇಳುವುದಿಲ್ಲ. ಆರ್ಥಿಕವಾಗಿ ಸಮಾಜ ರಚನೆಯನ್ನು ಮಾರ್ಪಾಡು ಮಾಡಿ ಅದರ ಮೂಲಕ ಸಮಾಜ ವ್ಯವಸ್ಥೆಯ ತತ್ವ, ಸ್ಥಾಪನೆ ಮಾಡಬೇಕು ಎಂದರೆ ಅದನ್ನು ನಾನು ಸಣ್ಣ ಪ್ರಶ್ನೆ, ಅಥವಾ ಸುಲಭವಾಗಿ ಬಗೆಹರಿಸುವ ಪ್ರಶ್ನೆ ಎಂದು ಹೇಳುವುದಿಲ್ಲ. ನಾವು ಮುಂದೆ ಹೆಜ್ಜೆಯನ್ನು ತಪ್ಪಿತವಾಗಿ ಇಡಬೇಕಾಗುತ್ತದೆ. ನಾನು ಇಂಗ್ಲೆಂಡಿನ ವಿಚಾರವನ್ನು ತಮ್ಮ ಗಮನಕ್ಕೆ ತರುವುದಿಲ್ಲ. ರಷ್ಯದ ವ್ಯವಸ್ಥೆಯನ್ನು ಇಟ್ಟುಕೊಂಡು ನಾನು ಮಾತನಾಡುತ್ತಿಲ್ಲ. ಕಾರ್ಲ್ ಮಾರ್ಕ್ಸ್ ಮತ್ತು ಗಾಂಧೀಜಿ ಇಬ್ಬರೂ ನನ್ನ ಗಮನದಲ್ಲಿ ಇಲ್ಲ.

You must at least get yourself dominated by the principles of reason. ಈ ಬಿಲ್ಲು ತಂದಿದ್ದಕ್ಕೆ ನಾನು ಬಹಳ ಸಂತೋಷ ಪಟ್ಟಿದ್ದೇನೆ. ಒಳ್ಳೆಯದು ಬೇಕಾದಷ್ಟು ಇದರಲ್ಲಿದೆ. ಅವುಗಳನ್ನು ಟಚ್ ಮಾಡುವುದಿಲ್ಲ. ವಿರೋಧಪಕ್ಷದವರಾದ ನಾವು ನಿಮಗೆ ಎಚ್ಚರಿಕೆ ಕೊಡುವುದು ನಮ್ಮ ಕರ್ತವ್ಯ. ಆದ್ದರಿಂದ ಅದನ್ನು ಮಾತ್ರ ಹೇಳುತ್ತಿದ್ದೇನೆ. ಇದರಲ್ಲಿ ಒಳ್ಳೆಯ ಭಾಗಗಳು ಇವೆ. ಒಳ್ಳೆಯ ಭಾಗಗಳು ಇದ್ದರೂ ಸಹ ಕೆಲವನ್ನು ಅಕಸ್ಮಾತ್ತಾಗಿ ಎಷ್ಟರಮಟ್ಟಿಗೆ ಇದೆ ಎಂಬುದನ್ನು 5ನೇ ಸೆಕ್ಷನ್ ತೆಗೆದು ನೋಡಿದರೆ ನೀವು ಮಾಡತಕ್ಕ ವಿಧಾನ ಎದ್ದು ಕಾಣುತ್ತದೆ.

"3. For the purpose of subsection (2) the net income shall be deemed to be .........

(a) fifty per cent of the gross income in the case of lands possessing facilities for asured irrigation from a tank or a river channel; and

(b) Thirty-three and one third per cent of the gross income in the case of the other lands."

ಎಂದು ಹೇಳಿದ್ದಾರೆ. ಇದನ್ನು ಒಕ್ಕಲುತನ ಮಾಡುವವರು ಯಾರಾದರೂ, ನಿಜವಾಗಿಯೂ ಅನುಭವ ಇದ್ದವರು ಬರೆದಿದ್ದಾರೆಯೇ? ಒಕ್ಕಲುತನ ಮಾಡದವರಿಗೆ ಅದರ ಅನುಭವವಿಲ್ಲ. ನೀರಾವರಿ ಜಮೀನಿಗೆ ಎಷ್ಟು ಖರ್ಚು ಬರುತ್ತದೆ ಅಥವಾ ಖುಷ್ಕಿ ಜಮೀನಿನಲ್ಲಿ ಬೆಳೆ ತೆಗೆಯಲು ಎಷ್ಟು ಖರ್ಚು ಬರುತ್ತದೆ ಎಂದು ನೋಡಿದರೆ, ಖುಷ್ಕಿ ಜಮೀನಿನಲ್ಲಿ ಬೆಳೆಯುವವರ ಉತ್ಪತ್ತಿಯಲ್ಲಿ ಖರ್ಚಿಗೋಸ್ಕರ ಕಳೆಯುವುದು ಶೇಕಡ 66 2/3. ತರೀ ಜಮೀನಿನಲ್ಲಿ ಬೆಳೆಯತಕ್ಕವನ ಖರ್ಚಿಗೋಸ್ಕರ ಕಳೆಯುವುದು ಶೇಕಡಾ 50 ರಷ್ಟು. ಇದು ಯಾವ ನ್ಯಾಯ? ಯಾವ ಅನುಭವದಿಂದ ಬರೆದಿರುವುದು? ಈಗಲೂ ಸಹ ಡೈರೆಕ್ಟರ್ ಆಫ್ ಅಗ್ರಿಕಲ್‌ಚರ್ ಅವರ ಬುಕ್ಕಿನಲ್ಲಿ ಬರೆದಿದ್ದಾರೆ. ಅದನ್ನು ನೋಡಬಹುದು.

ಶ್ರೀ ಕಡಿದಾಳ್ ಮಂಜಪ್ಪ – ತಮ್ಮ ಅಭಿಪ್ರಾಯ ಏನು? ಖುಷ್ಕಿ ಜಮೀನಿನಲ್ಲಿ ಖರ್ಚು ಕಡಮೆ ಬರುತ್ತದೆಯೇ ಅಥವಾ ತರೀ ಜಮೀನಿನಲ್ಲಿ ಖರ್ಚು ಕಡಮೆ ಬರುತ್ತದೆಯೇ? ಡಿಸ್ಟ್ರೆಸ್ ಏರಿಯಾದಲ್ಲಿ ಎಷ್ಟು ಪರ್ಸೆಂಟ್ ಫಿಕ್ಸ್ ಮಾಡಬೇಕು?

ಶ್ರೀ ಕೆ. ಕೆಂಚಪ್ಪ:– ನನ್ನ ಅಭಿಪ್ರಾಯದಲ್ಲಿ 1/3 ಭಾಗ ಅಲ್ಲಿ ಖರ್ಚು ಬರಬಹುದು. ಒಂದು ಎಕರೆಗೆ ಎರಡು ಪಲ್ಲ, ಮೂರು ಪಲ್ಲ ಉತ್ಪತ್ತಿ ಬರಬಹುದು. ಉತ್ಪತ್ತಿ ಬರುವ ಮಾತಲ್ಲ.

ಶ್ರೀ ಕಡಿದಾಳ್ ಮಂಜಪ್ಪ – ಹಿರಿಯೂರು ತಾಲ್ಲೂಕಿನಲ್ಲಿ ಧರ್ಮಪುರಿ ಹೋಬಳಿ ಇದೆ. ಅಲ್ಲಿ ಪದೇ ಪದೇ ಡಿಸ್ಟ್ರೆಸ್ ಏರಿಯಾದಲ್ಲಿ ಎಷ್ಟು ಪರ್ಸೆಂಟ್ ಫಿಕ್ಸ್ ಮಾಡಬೇಕು?

ಶ್ರೀ ಕೆ. ಕೆಂಚಪ್ಪ, – ನನ್ನ ಅಭಿಪ್ರಾಯದಲ್ಲಿ 1/3 ಭಾಗ ಅಲ್ಲಿ ಖರ್ಚು ಬರಬಹುದು. ಒಂದು ಎಕರೆಗೆ ಎರಡು ಪಲ್ಲ, ಮೂರು ಪಲ್ಲ ಉತ್ಪತ್ತಿ ಬರಬಹುದು. ಉತ್ಪತ್ತಿ ಬರುವ ಮಾತಲ್ಲ.

ಶ್ರೀ ಕಡಿದಾಳ್ ಮಂಜಪ್ಪ – ಹಿರಿಯೂರು ತಾಲ್ಲೂಕಿನಲ್ಲಿ ಧರ್ಮಪುರಿ ಹೋಬಲಿ ಇದೆ. ಅಲ್ಲಿ ಪದೇ ಪದೇ ಡಿಸ್ಟ್ರೆಸ್ ಆಗುತ್ತದೆ. ಅಲ್ಲ ಹೇಗೆ ಫಿಕ್ಸ್ ಮಾಡಬೇಕು?

ಶ್ರೀ ಕೆ. ಕೆಂಚಪ್ಪ – ಹಿರಿಯೂರು ತಾಲ್ಲೂಕಿನಲ್ಲಿ ಖುಷ್ಕಿ ಬೆಳೆ ಬೆಳೆಯುವುದಿಲ್ಲ. ಅಲ್ಲಿ ಮಳೆ ಬರುವುದಿಲ್ಲ. ಎಲ್ಲಾ ಕಡೆ ನೆರೆಬಂದು ಊರು ಮುಳುಗಿ ಹೋದರೆ, ಅಲ್ಲಿ

ನೀರು ಇಲ್ಲದೆ ಪೈರು ಒಣಗಿಹೋಗುತ್ತದೆ. ಹರಿಹರದ ಹತ್ತಿರ ಹತ್ತಿ ಬೆಳೆಯತಕ್ಕಂಥ ಖುಷ್ಕೀ ಜಮೀನು ನನಗೆ ಇದೆ. ಸಾಧ್ಯವಾದ ಮಟ್ಟಿಗೆ ನಾನು ಮೈಸೂರು ದೇಶವನ್ನೆಲ್ಲಾ ತಿರುಗಿದ್ದೇನೆ. ಕನಿಷ್ಟಪಕ್ಷ ಯಾರನ್ನು ತೆಗೆದುಕೊಂಡರೂ, ಎಲ್ಲರಿಗಿಂತಲೂ ನಾನು ಕಡಿಮೆ ತಿರುಗಿಲ್ಲ ಎಂದರೆ ದಯವಿಟ್ಟು ಯಾರೂ ತಪ್ಪು ತಿಳಿದುಕೊಳ್ಳಬಾರದು. ಆ ರೀತಿ ನಾನು ತಿರುಗಿದಾಗ ಜಮೀನು ನೋಡಿಕೊಂಡು ಬಂದಿದ್ದೇನೆ. ವಿಚಾರ ಮಾಡಿದ್ದೇನೆ. ಖುಷ್ಕಿ ಜಮೀನು ಇರುವ ಕಡೆ ನಾನು ಹುಟ್ಟಿ ಬೆಳೆದಿದ್ದೇನೆ. ನಾನು ತರೀ ಜಮೀನ್ದಾರ. ನನಗೆ ಎರಡು ತರಹ ಜಮೀನಿನ ಅನುಭವವಿರುವುದರಿಂದ ನಾನು ಖಚಿತವಾಗಿ ಹೇಳುತ್ತೇನೆ. The percentage of expenditure for Dry Cultivation is certainly far less or lower than the percentage of expenditure for growing wet crop. ಆದ್ದರಿಂದ ನಾವು ಈ ರೀತಿ ಬರೆಸಿಕೊಳ್ಳುವುದು ಸರಿಯಲ್ಲ. ಒಬ್ಬ ಡಾಕ್ಟ್ರೇಟ್ ಪ್ರಶಸ್ತಿ ಪಡೆದು ಬುದ್ಧಿವಂತನಾಗಿರಬಹುದು. But the technical people will have developed one sided knowledge. ಬಾಕಿ ವಿಷಯದಲ್ಲಿ ಅವರಿಗೆ ವಿಷಯ ಜ್ಞಾನ ಕಡಿಮೆ ಇರುತ್ತದೆ. ನಾನು ಸೈಕಾಲಜಿ ಓದಿದ್ದೇನೆ.

ಶ್ರೀ ಕಡಿದಾಳ್ ಮಂಜಪ್ಪ:- Cost of cultivation, incomeನ ಎಷ್ಟು ಪರ್ಸೆಂಟ್ ಬರುತ್ತದೆಂದು ನೀವು ಹೇಳುತ್ತೀರಿ? ಇದರಲ್ಲಿ ತಮ್ಮ ಅಭಿಪ್ರಾಯ ಸ್ಪಷ್ಟವಾಗಿರಬೇಕು.

ಶ್ರೀ ಕೆ. ಕೆಂಚಪ್ಪ - ಹರಿಹರದಲ್ಲಿ ಖುಷ್ಕಿ ಜಮೀನು ಹೊರತು ತರೀ ಜಮೀನು ಇಲ್ಲ. Ninety per cent of the people have not seen paddy fields. ಅವರು ಒಂದು ಎಕರೆಗೆ ಐದು ಗಾಡಿ ಗೊಬ್ಬರ ಹಾಕಿದರೆ ಅದು ಅತ್ಯಧಿಕವಾಯಿತು. ಐಮಂಗಲ ಹೋಬಳಿಯಲ್ಲಿ ಮಳೆ ಬರುವುದಿಲ್ಲ. ಬೆಳೆ ಆಗುವುದಿಲ್ಲ. ಅಲ್ಲಿ ನಾಲ್ಕು-ಐದು ವರ್ಷಕೊಮ್ಮೆ ಗೊಬ್ಬರ ಹಾಕುತ್ತಾರೆ. ವೆಟ್ ಕಲ್ಟಿವೇಷನ್‌ಗೆ ಎಷ್ಟು ಸಾರ್ತಿ ನೇಗಿಲು ಹೊಡೆಯಬೇಕು, ಎಷ್ಟು ಕೂಲಿ ಕೊಡಬೇಕು, ಎಷ್ಟು ಅಡಿ ಹೊಡೆಯಬೇಕು, ಎಷ್ಟು ಸಾರಿ ಕಳೆ ಕೀಳಬೇಕು, ಎಷ್ಟು ಗಾಡಿ ಗೊಬ್ಬರ ಹಾಕಬೇಕು, ಎಷ್ಟು (ಗ್ರೀನ್ ಮನ್ಯೂರ್) ಸರಬು ಗೊಬ್ಬರ ಹಾಕಬೆಕು, ಎಷ್ಟು ಮೂಟೆ ಉಪ್ಪು ಹಾಕಬೇಕು ಎಷ್ಟು ಬೂದಿ ಹಾಕಬೇಕು ಇವೆಲ್ಲಾ ತಮಗೆ ಗೊತ್ತೇ ಇದೆ. ಇದನ್ನೆಲ್ಲಾ ಲೆಕ್ಕಾ ಹಾಕಿಕೊಂಡರೆ ಡ್ರೈಕಲ್ಟಿವೇಷನ್‌ಗೆ ಶೇಕಡ 66 ರಷ್ಟು ತರೀ ಜಮೀನಿಗೆ ಸುಮಾರು ಶೇಕಡ 50 ರಷ್ಟು ಖರ್ಚಾಗುತ್ತದೆ.

ಶ್ರೀ ಕಡಿದಾಳ್ ಮಂಜಪ್ಪ - ಎಷ್ಟು ಹಾಕಬಹುದು ಎಂಬುದಕ್ಕೆ ತಮ್ಮ ಅಭಿಪ್ರಾಯವೇನು?

ಶ್ರೀ ಕೆ. ಕೆಂಚಪ್ಪ - ತಾವು ಅಧಿಕಾರದಲ್ಲಿದ್ದೀರಿ. ಎನ್‌ಕ್ವೈರಿ ಮಾಡಿ. ಹರಿಹರದಲ್ಲಿ ಐದು ಗಾಡಿ ಗೊಬ್ಬರ ಹಾಕುತ್ತಾರೆ.

ಶ್ರೀ ಕಡಿದಾಳ್ ಮಂಜಪ್ಪ – ನಿಮ್ಮ ಅಭಿಪ್ರಾಯದಲ್ಲಿ ಎಷ್ಟಿರಬೇಕೆಂದು ಹೇಳುತ್ತೀರಿ?

ಶ್ರೀ ಕೆ. ಕೆಂಚಪ್ಪ – ನಾನು ಲೆಕ್ಕಮಾಡಿ ನೋಡಲಿಲ್ಲ. ಅದನ್ನೆಲ್ಲಾ ಲೆಕ್ಕ ಮಾಡಬೇಕು. ಅದು ಅರ್ಧಕ್ಕಿಂತ ಬಹಳ ಕಡಿಮೆ ಇದೆ. ತರೀ ಬೆಳೆಗೆ ಎಷ್ಟು ಗೊಬ್ಬರ ಹಾಕುತ್ತೀರೋ ಅದರ ಅರ್ದದಷ್ಟು ಖುಷ್ಕಿಗೆ ಹಾಕಬೇಕು. ಮಂತ್ರಿಗಳು ಐವತ್ತು ಪಲ್ಲ ಬತ್ತ ಬೆಳೆಯುತ್ತಾರೆಂದು ಹೇಳಿದರು. ಕೆಲವು ಕಡೆ ಐದು ಪಲ್ಲ 7 ಪಲ್ಲ ಹೀಗೆಲ್ಲಾ ಬೆಳೆಯುತ್ತಾರೆ. ಇದುವರೆಗೂ ಅವರೇಜ್ ಕೇಳಿದ್ದರಲ್ಲಿ ಬಹಳ ವ್ಯತ್ಯಾಸ ಇದೆ. ಈಗ ಬೆಳೆಯತಕ್ಕಂಥಾದ್ದಕ್ಕೆ ಎಷ್ಟು ಖರ್ಚಾಗುತ್ತದೆ ಎಂಬುದನ್ನು ಯೋಚನೆ ಮಾಡಬೇಕು ಈಗಿರುವ ಹಾಗೆ ಮುಂದುವರಿದರೆ ಒಂದು ಎಕರೆ ಜಮೀನಿನಲ್ಲಿಯೂ ಸಹ ವ್ಯವಸಾಯ ಮಾಡುವ ಹಾಗಿಲ್ಲ. ಒಂದು ಎಕರೆ ತರೀ ಜಮೀನಿಗೆ 20 ಪಲ್ಲ ಬೆಳೆಯಾಗುತ್ತದೆಂದು ಹೇಳುತ್ತಾರೆ. ಬತ್ತದ ಧಾರಣೆ, ರಾಗಿಧಾರಣೆ, ಹೇಳುತ್ತಾರೆ. ಬತ್ತದ ಧಾರಣೆ, ರಾಗಿಧಾರಣೆ, ಜೋಳದ ಧಾರಣೆ ಒಂದೇ ಸಮನೆ ಇರುತ್ತದೆಯೇ ಎಂಬುದನ್ನು ಲೆಕ್ಕ ಹಾಕಿ ನೋಡಬೇಕು.

**Sri M. Y. Ghorpade, -** Is it the idea of the Hon'ble Member that ceiling should be fixed in such a manner that people owning dry areas are not at a disadvantage? You want net income to be made the basis in fixing compensation and not for calculating compensation?

**Sri K. Kenchappa –** There is no doubt about, that. Whether in arriving at net income should we take 66 2/3 per cent dry cultivation and 50 per cent for wet cultivation in consideration is the point. It is simple matter.

ಆದ್ದರಿಂದ ನಾವು ಈ ವಿಚಾರವನ್ನು ಇಲ್ಲಿ ಚರ್ಚೆ ಮಾಡುವಾಗ ತಿಳಿದವರ ಹತ್ತಿರ ಕೇಳಿ ಇದಕ್ಕೆ ಎಷ್ಟು ಆಕ್ಚುಯಲ್ಲಾಗಿ ಖರ್ಚಾಗುತ್ತದೆ. ಎಂಬುದನ್ನು ಗಮನಿಸಬೇಕು. ಡೈರೆಕ್ಟಿವ್ ಆಗಿ ಅಗ್ರಿಕಲ್‌ಚರಲ್ ಇನ್‌ಸ್ಪೆಕ್ಟರುಗಳಿಗೆ ಅನೇಕ ರೂಲ್ಸ್‌ಗಳನ್ನು ಈ ಬಗ್ಗೆ ಕಳುಹಿಸಿ ಕೊಟ್ಟಿದ್ದಾರೆ. ಆದ್ದರಿಂದ ತರೀ, ಖುಷ್ಕಿ ಜಮೀನುಗಳಲ್ಲಿ ಒಂದು ಎಕರೆಗೆ ಎಷ್ಟು ಕಾಳು ಬರುತ್ತದೆಂಬುದನ್ನು ನೋಡಿ ನಂತರ ಜಮೀನಿನ ಆದಾಯ ಖರ್ಚು ಎಷ್ಟು ಎಂಬುದನ್ನು ನಿಗದಿ ಮಾಡಬೇಕು. ಖಚಿತವಾಗಿ ಇಷ್ಟೇ ರೂಪಾಯಿಗಳು ವರಮಾನವೆಂದು ಹೇಳುವುದು ಕಷ್ಟ. ಅದನ್ನು ಯಾವ ರೀತಿಯಿಂದಲೂ ಹೇಳುವುದಕ್ಕೆ ಸಾಧ್ಯವಿಲ್ಲ. ಅವರೇಜ್ ಆದಾಯ ಮತ್ತು ಖರ್ಚು ತರೀಗೂ ಖುಷ್ಕಿಗೆ ಎಷ್ಟೆಂಬುದನ್ನು ನೋಡಬೇಕು. ಎರಡಕ್ಕೂ ಯೂನಿಫಾರಂ ಆಗಿ ಆದಾಯ ಅಷ್ಟೇ ಮಾಡುತ್ತೇವೆಂದರೆ ಹೇಗೆ? ತರೀ ಜಮೀನಿನಿಂದ ಹೆಚ್ಚು ಬೆಳೆಯಾಗುವುದರಿಂದ ಹೆಚ್ಚು ಆದಾಯ ಬರುತ್ತದೆ. ಖುಷ್ಕಿ ಜಮೀನಿನಿಂದ ಕಡಿಮೆ ಬೆಳೆಯಾಗುವುದರಿಂದ ವರಮಾನ ಕಡಿಮೆ ಬರುತ್ತದೆ.

ಆದ್ದರಿಂದ ಇದನ್ನು ಲೆಕ್ಕ ಮಾಡಲೇಬೇಕು. ಒಂದೊಂದು ಸಾರಿ ತರೀ ಜಮೀನಿನಲ್ಲಿ ಎಕರೆಗೆ 20–25 ಪಲ್ಲ ಬೆಳೆಯಬಹುದು, ಖುಷ್ಕಿ ಜಮೀನಿನಲ್ಲಿ ಒಂದು ಎಕರೆಗೆ 5 ಪಲ್ಲ ಮಾತ್ರ ಅದೇ ಪ್ರಕಾರ ತರೀ ಬೆಳೆಗೆ ಸಾಮಾನ್ಯವಾಗಿ ಖರ್ಚು ಜಾಸ್ತಿ ಬೀಳುತ್ತದೆ. ಖುಷ್ಕಿಗೆ ಖರ್ಚು ಕಡಿಮೆ ಬೀಳುತ್ತದೆ.

**Sri. H.M. Channabasappa.** – Is in your case that we must enhance the expenditure on the wet side?

ಶ್ರೀ ಕೆ. ಕೆಂಚಪ್ಪ:– ನಿಮ್ಮ ಟಾರ್ಜೆಟ್ ಮೆತಡೆ ನಮಗೆ ಗೊತ್ತಾಗುವುದಿಲ್ಲ. ಮುಖ್ಯವಾಗಿ ಜನರು ಡೆಫಿನಿಷನ್ ಕ್ಲಾಜಿನಲ್ಲಿ ಸಬ್‌ಕ್ಲಾಜು ಎರಡು 'Allied pursuits' ಎಂದು ಅದರ ವಿವರಣೆಯನ್ನು ಮಾತ್ರ ಕೊಟ್ಟಿದ್ದಾರೆ. ಕೊನೆಯಲ್ಲಿ ಇಷ್ಟು ಪರ್ಸೆಂಟೇಜ್ ಕಂಪನ್‌ಸೇಷನ್ ಕೊಡಬೇಕೆಂದು ಬೇರೆ ಹೇಳಿದ್ದಾರೆ. ಬೇರೆಬೇರೆ ಕಸಬುಗಳಲ್ಲಿರುವರ ಉತ್ಪತ್ತಿಯನ್ನೂ, ತೆಗೆದುಕೊಳ್ಳಿ, ವ್ಯವಸಾಯ ಮಾಡುವುದೂ ಒಂದು ಕಸಬು ಎಂದು ಇದರಲ್ಲಿ ತೆಗೆದುಕೊಂಡ ಮೇಲೆ, ಇತರೆ ಕಸಬುಗಳೂ ಇದರಲ್ಲಿ ಸೇರಿರಬೇಕು. ಇಲ್ಲಿ ಅಲೈಡ್ ಪರ್‌ಸ್ಯೂಟ್ಸ್ ಇಟ್ಟುಕೊಳ್ಳಬೇಕೇ, ಬಿಡಬೇಕೇ, ಎಂಬ ಯೋಚನೆ ಮಾಡಬೇಕು. ಇದನ್ನು ಈ ಬಿಲ್ಲಿನಲ್ಲಿ ಯಾವ ದೃಷ್ಟಿಯಿಂದ ಇಟ್ಟು ಕೊಂಡಿರಬೇಕೆಂದು ಹೇಳುತ್ತೀರಿ? "Allied pursuits" means dairy farming poultry farming, breeding of live-stock grazing (other than pasturage of one" own agricultural cattle) and such other pursuits as may be prescribed' ಎಂದು ಹೇಳಿದ್ದೀರಿ. ತಾವು ಇದರಲ್ಲಿ ಏನಾದರೂ ಪ್ರಿಸ್ಕ್ರೈಬ್ ಮಾಡಿಕೊಳ್ಳಬಹುದು. ಈ ರೀತಿ ಮಾಡಬೇಡಿ ಎಂದು ನಾನು ಖಡಾಖಂಡಿತವಾಗಿ ಹೇಳುತ್ತೇನೆ. ಅಲೈಡ್ ಪರ್‌ಸ್ಯೂಟ್ಸ್ ಎಂದರೆ ಏನು ಇಷ್ಟು ಮಾತ್ರ ಅಲೈಡ್ ಪರ್‌ಸ್ಯೂಟ್ಸ್ ಎಂದು ಆಗುವುದಿಲ್ಲ. ಬೇರೆಬೇರೆ ಕಸಬುಗಳು ಎಷ್ಟೋ ಇವೆ. Breeding of live-stock ಅಲೈಡ್ ಪರ್‌ಸ್ಯೂಟ್ಸ್ ಅಲ್ಲವೆಂದು ನಾನು ಹೇಳಿದರೆ ಏನೂ ತಪ್ಪಾಗುವುದಿಲ್ಲ. ಇದರಲ್ಲಿ ಅಧಿಕಾರಿಗಳು ಇನ್ನಾವುದಾದರೂ ಆ ರೀತಿ ಸೇರಿಸಬಹುದು. ಅದಕ್ಕೋಸ್ಕರ ಈ ಕ್ಲಾಜನ್ನು ಡಿಲೀಟ್‌ಮಾಡಿ. ಇಟ್ಟುಕೊಂಡರೆ ಎಲ್ಲ ಕಸಬುಗಳನ್ನು ಇಟ್ಟುಕೊಳ್ಳಿ ನಾನು ಬೇಡ ಎನ್ನುವುದಿಲ್ಲ. ಯಾವ ಕಸಬಾಗಲೀ ಅದು ಅಲೈಡ್ ಪರ್‌ಸ್ಯೂಟ್ಸ್ ಆಗಿರಲಿ, ಆಗಿರದೇ ಇರಲಿ ಅಂಥಾದನ್ನು ಇದರಲ್ಲಿ ಸೇರಿಸುವುದರಿಂದ ಯಾರೂ ಅಬ್ಜಕ್ಷನ್ ತೆಗೆದುಕೊಳ್ಳುವುದಿಲ್ಲ. ಆಗ ಅಧಿಕಾರಿಗಳು ಯಾರಮುಖ ದಾಕ್ಷಿಣ್ಯಕ್ಕೂ ಒಳಪಡುವಹಾಗಿಲ್ಲ. ಆ ರೀತಿ ಮಾಡಿದರೆ ಎಲ್ಲವೂ ಸರಿಹೋಗುತ್ತದೆ.

Allied pursuits ಎಂದರೆ ಚೀಫ್ ಸೆಕ್ರೆಟರಿಯಾಗಿ ನಾಳೆ ಮೂರುಸಾವಿರ ರೂಪಾಯಿಗಳನ್ನು ತೆಗೆದುಕೊಂಡರೆ ಅದೂ ಸೇರಿಕೊಳ್ಳುತ್ತದೆ. ಆದ್ದರಿಂದ ಸ್ವಲ್ಪ ಯೋಚನೆಮಾಡಿ. ಆ ಮೇಲೆ ಫ್ಯೂಚರ್ ಅಕ್ವಿಜಿಷನ್ ವಿಚಾರದಲ್ಲಿ ಒಂದು ವಿಷಯ ಹೇಳಬೇಕಾಗುತ್ತದೆ. ಪ್ಲಾಂಟೇಷನ್ ವಿಚಾರ ತೆಗೆದುಕೊಂಡರೆ ಈ ದಿವಸ ಯಾರಿಗಾದರೂ ಐದು ಸಾವಿರ ಎಕರೆ ಪ್ಲಾಂಟೇಷನ್ ಇದ್ದರೆ ಅದರ ಮೇಲೆ ನೂರು ಎಕರೆ ಪಡೆಯಬಹುದೆಂದು ಅರ್ಥವಾಗುತ್ತದೆ.

ಶ್ರೀ ಕಡಿದಾಳ್ ಮಂಜಪ್ಪ, - ಹೊಸದಾಗಿ ಯಾರಾದರೂ ಕಾಫಿ, ಅಡಿಕೆ ಮುಂತಾದುವುಗಳ ತೋಟ ಮಾಡುವುದಾದರೆ ಕೊಡುವುದು, ಫ್ಯೂಚರ್‌ಗೆ ಅಲ್ಲ.

ಶ್ರೀ ಕೆ. ಕೆಂಚಪ್ಪ – ಈಗ ಅಡಕೆ ತೋಟ 500 ಎಕರೆಯಷ್ಟು ತೀರ್ಥಹಳ್ಳಿಯಲ್ಲಿ ನನಗಿದ್ದರೆ ನಾಳೆ ಇನ್ನೂ ನೂರು ಎಕರೆ ತೋಟ ಮಾಡಬಹುದು.

ಶ್ರೀ ಕಡಿದಾಳ್ ಮಂಜಪ್ಪ – ಹಾಗೆ ಮಾಡುವುದಕ್ಕಾಗುದಿಲ್ಲ.

ಶ್ರೀ ಕೆಂಚಪ್ಪ – ಯಾವ ಕಡೆ ಆ ಅಧಿಕಾರವಿದೆ ಎಂಬುದನ್ನು ಕಾನೂನು ಓದಿ ಹೇಳಬೇಕಾಗುತ್ತದೆ. "ಇದು ಹಿಂದಿನದು exempted, ಮುಂದಿನದು allowed" ಎಂಬಂತಿದೆ. (ನಗು) ಆದುದರಿಂದ ಇದನ್ನು ವಿಚಾರಮಾಡಿ 71ನೆಯ ಕ್ಯಾಬಿನ್ ಪ್ರಕಾರ ಮುಂದೆ ನೂರು ಎಕರೆಗಳವರೆಗೆ ಮಾಡಿಕೊಂಡು ಹೋಗಬಹುದು. ಇದು ಯಾವ ಸೋಷಿಯಲ್ ಜಸ್ಟಿಸ್‌ನಲ್ಲಿ ಬರುತ್ತದೆ? ದಯವಿಟ್ಟು ಅದನ್ನು ಓದಿ ಹೇಳಿ, ಸೆಕ್ಷನ್ ಯಾವುದೆಂಬುದನ್ನು ತಿಳಿಸಿಬಿಡಿ.

ಶ್ರೀ ಕಡಿದಾಳ್ ಮಂಜಪ್ಪ – ಅದು ಸೆಕ್ಷನ್‌ನಲ್ಲೇ ವಿಶದವಾಗಿರುವುದರಿಂದ ಮತ್ತೆ ಓದಬೇಕಾಗಿಲ್ಲ.

ಶ್ರೀ ಕೆ. ಕೆಂಚಪ್ಪ – ಹಾಗಾದರೆ ಫ್ಯೂಚರ್ ಆಕ್ವಿಜಿಷನ್‌ನಲ್ಲಿ ನೂರು ಎಕರೆಗಳಿಗಿಂತ ಹೆಚ್ಚಾಗಿ ಯಾರೂ ಇಟ್ಟುಕೊಳ್ಳುವುದಕ್ಕಾಗುವುದಿಲ್ಲ. 500 ಎಕರೆಗೆ ವಿನಾಯಿತಿಯಾದರೆ ಈಗ ಈ ಕಾನೂನು ಬಂದನಂತರ 500 ಹೋಗಿ 100 ಆಗುತ್ತದೆ. ಸೆಲೆಕ್ಟ್ ಕಮಿಟಿಗೆ ಕಳುಹಿಸಿದಾಗಲಾದರೂ ಈ ನ್ಯೂನತೆಗೆ ಅವಕಾಶ ಕೊಡಬೇಡಿ; ಉದ್ದೇಶ ಸಾಧನೆಯಾಗಬೇಕು. ಈ ಕಾನೂನು ಜಾರಿಗೆ ಬಂದ ಮೇಲೆ ನೂರು ಎಕರೆಗಳಿಗಿಂತ ಹೆಚ್ಚಾಗಿ ಇಟ್ಟುಕೊಳ್ಳುವುದಕ್ಕೆ ಅವಕಾಶವಿಲ್ಲ. ಇದನ್ನು ತಾವು ಆಲೋಚನೆ ಮಾಡಬೇಕಾಗಿದೆ. ನಾವು 3,600 ರೂಪಾಯಿಗಳಿಗೆ ಒಪ್ಪಿಕೊಂಡಿದ್ದೇವೆ. ಷೋಷಿಯಲ್ ಜಸ್ಟಿಸ್ ಎಂದು ಹೇಳುವಾಗ ಒಬ್ಬರಿಗೊಂದು ಇನ್ನೊಬ್ಬರಿಗೊಂದು ಮಾಡಬಾರದು.

ಕೊನೆಯದಾಗಿ ಕೋ–ಆಪರೇಟಿವ್ ಫಾರ್ಮಿಂಗ್ ವಿಚಾರ ಹೇಳುವದಾದರೆ 119ನೆಯ ಕ್ಲಾಜಿನ ಪ್ರಕಾರ ನನಗೆ ಒಂದು ಊರಿನಲ್ಲಿ ಆರು ಕಡೆ ಜಮೀನಿದ್ದರೆ ಒಂದು ಕೋ–ಆಪರೇಟಿವ್ ಫಾರ್ಮಿಂಗ್ ಅಲ್ಲಿ ಮಾಡುವುದಾದರೆ, ನಾನು ಮೆಂಬರಾಗಿ ಒಂದು ಜಮೀನನ್ನು ಅದಕ್ಕೆ ಸೇರಿಸಿದರೆ ಇತರೆ ಐದು ಜಮೀನುಗಳೂ ಅದಕ್ಕೆ ಸೇರುತ್ತವೆ ಎಂಬ ಭಾವನೆ ಬರಲು ಅವಕಾಶವಿದೆ. ಒಂದು ಸಲ ಕೋ–ಆಪರೇಟಿವ್ ಫಾರ್ಮಿಂಗ್ ಮೆಂಬರಾದರೆ ನನ್ನ ಎಲ್ಲಾ ಜಮೀನನ್ನೂ ಕೊಡಬೇಕು ಆದುದರಿಂದ ಸರ್ವಿಸ್ ಕೋ–ಆಪರೇಟಿವ್ ಫಾರ್ಮಿಂಗ್ ಎಂದು ಮಾಡಿದರೆ ಅದೇನು ಮಲ್ಟಿಪರ್ಪಸ್ ಸೊಸೈಟಿ ಯಾಗುತ್ತದೆಯೇ ಅಥವಾ ಡೆವಲಪ್‌ಮೆಂಟ್ ಕಮಿಟಿ ಯಾಗುತ್ತದೆಯೇ ಅಥವಾ ಸಂಸ್ಕೃತಿಪ್ರಚಾರವಾಗುತ್ತದೆಯೇ ಎಂಬುದನ್ನು ಹೇಳಬೇಡವೇ. ಅಂದ ಮೇಲೆ ಕೋ–ಆಪರೇಟಿವ್ ಫಾರ್ಮಿಂಗ್ ಡಿಸ್‌ಕರೇಜ್ ಮಾಡಿದಹಾಗಾಯಿತು. ಮುಂದೆ ಒಳ್ಳೆಯದೋ, ಕೆಟ್ಟದ್ದೋ ಆ ಮಾತು ಬೇರೆ. ಆದರೆ ಮಾಡಿದ ಮೇಲೆ ನಮ್ಮಲ್ಲಿರುವ ಜಮೀನನ್ನೆಲ್ಲಾ

ಕೋ-ಆಪರೇಟಿವ್ ಫಾರ್ಮಿಂಗಿಗೆ ಸೇರಿಸಬೇಕು, ಬೇರೆ ವಿಧಿಯಿಲ್ಲ ಎಂದರೆ ಅರ್ಥವೇನು? ಬೇರೆ ಜಮೀನು ಇಟ್ಟುಕೊಳ್ಳುವುದಕ್ಕೆ ನನಗೇಕೆ ತೊಂದರೆ ಮಾಡಬೇಕು? ಪ್ರತಿ ಪಕ್ಷದ ನಾಯಕರು ಶೇಕಡ 75 ಜನ ಒಪ್ಪಿದರೆ ಒತ್ತಾಯವಾಗುತ್ತದೆಂದು ಹೇಳಿದರು. ಹಾಗೇಕೆ ಮಾಡಬೇಕು? The co-operative movement is a democratic institution and co-operative societies are formed by the free will of the people who joint them. You are only a guide and a philosopher andnot a dictator. ಇದು ನಿಮ್ಮ ಆಬ್ಜೆಕ್ಟಿವ್ ಪ್ರಿನ್ಸಿಪಲ್ ಆಗರುವಾಗ ಡಿಕ್ಟೇಟರ್ ಕೆಲಸವಾಗುತ್ತದೆಂಬ ಭಾವನೆ ಬರುವುದಿಲ್ಲವೇ. ಆದುದರಿಂದ ದಯವಿಟ್ಟು ಇದನ್ನು ಆಲೋಚಿಸಿ ಸರಿಪಡಿಸಿ ಎಂದು ಹೇಳುತ್ತೇನೆ. ಸಹಕಾರಿ ಚಳುವಳಿಯ ಬಗ್ಗೆ ನಮಗೂ ಸಹ ಬಹಳ ಮಮತೆಯಿದೆ. ನಮಗೂ ಬೇಕಾಗಿದೆ. ಸಹಕಾರಿ ಚಳವಳಿಯು ಹೊಸದಾಗಿರುವುದರಿಂದ ಇದರಲ್ಲಿ ನ್ಯೂನತೆಗಳಿರಬಹುದು. ಅದಕ್ಕೆ ಬೇರೆ ಕಾರಣಗಳು ಇರಬಹುದು. ಈ ಇಲಾಖೆಯಲ್ಲಿರತಕ್ಕ ನ್ಯೂನತೆಗಳ್ನನು ಎಚ್ಚರಿಕೆಯಿಂದ ಸರಿಪಡಿಸಬೇಕಾಗಿದೆ. It is like a youth with a reflective mind which is likely to err at every step. ಆದ್ದರಿಂದ ಬಹಳ ಎಚ್ಚರಿಕೆಯಿಂದ ಇರಬೇಕಾಗಿದೆ. ಹಾಗೂ ಸರಿಯಾಗಿ ಆಲೋಚನೆ ಮಾಡಬೇಕಾಗುತ್ತದೆ. ಈ ಇಲಾಖೆಯುಲ್ಲಿ ಇರುವ ನ್ಯೂನತೆಗಳನ್ನು ತೆಗೆದುಹಾಕಲು ಕೆಲವು ಕಾಲ ಹೋಗಬೇಕಾಗುತ್ತದೆ. ಈ ಕೋ-ಆಪರೇಟಿವ್ ಡಿಪಾರ್ಟ್‌ಮೆಂಟಿನಲ್ಲಿ ಒಂದು ಬಿಗುವು ಮತ್ತು ಒಂದು ಸರಿಯಾದ ವ್ಯವಸ್ಥೆಯಿಲ್ಲ. ಆದುದರಿಂದ ಈ ವಿಷಯವನ್ನು ಸಂಪೂರ್ಣವಾಗಿ ಆಲೋಚನೆ ಮಾಡಬೆಕು.

ಇನ್ನು miscellaneous chapter ಬಗ್ಗೆ ಒಂದೆರಡು ವಿಷಯ ಹೇಳಬೇಕಾಗಿದೆ. ಇದು miscellaneous ಆಗಿಹೋಗಿದೆ. ಏತಕ್ಕೆಂದರೆ 74ನೇ ಪುಟದಲ್ಲಿ 163ನೇ ಕ್ಲಾಜಿನಲ್ಲಿ ಈ ರೀತಿ ಇದೆ:

"163. Bar of jurisdiction. (1) No civil court shall have jurisdiction to settle, decide or decide or deal with any question which is by or under this Act required to be settled, decided or dealt with by the Tahsildar, a manager, the Tribunal, the Deputy Commissioner, the Appellate authority, the Mysore Revenue Appellate Tribunal or the Land Commission or the State Government in exercise of their powers of control."

ಅನಂತರ 165ನೇ ಕ್ಲಾಜಿನಲ್ಲಿ ಏನು ಹೇಳಿದೆ ಎಂದರೆ: -

"In all matters connected with this Act, the State Government shall have same authority and control over the Tribunal and the Deputy Commissioner acting under this Act......"

ಇಂಥ ಕಾನೂನುಗಳನ್ನು ಮಾಡಿ natural justiceನ್ನು overlook ಮಾಡಲು ಸಾಧ್ಯವಾಗಿದೆ. Jurisprudence ಪ್ರಕಾರ natural justice ಎನ್ನುವದಕ್ಕೆ ವಿರೋಧವಾಗಿ

ಹೋಗುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಇಂಥ ಕಾನೂನು ಮಾಡಿ ನಾವು ಎಲ್ಲಿ ತಪ್ಪು ಹೆಜ್ಜೆ ಇಡುತ್ತೇವೋ ಏನೋ ಎನ್ನಿಸುತ್ತದೆ. ಆದ್ದರಿಂದ ಯೋಚನೆಮಾಡಿ ಈ ಕಲಮನ್ನು ತಿದ್ದುಪಡಿ ಮಾಡಬೇಕಾದುದು ಅವಶ್ಯ. ಇನ್ನೊಂದು ವಿಚಾರ ಏನೆಂದರೆ, ಕೋರ್ಟುಗಳಲ್ಲಿ ತೀರ್ಮಾನವಾಗುವುದಕ್ಕೆ ಬಹಳ ತಡವಾಗುತ್ತದೆ. ನೂರಾರು ಕೇಸುಗಳು ಕೋರ್ಟಿನಲ್ಲಿ ಪೆಂಡಿಂಗ್ ಇವೆ. ಹೀಗಿರುವಾಗ jurisdiction ವಿಧಿಸುವ ಬಗ್ಗೆ ಯೋಚನೆ ಮಾಡಬೇಕು. ನಾವೇನೋ ಇಲ್ಲಿ ತಪ್ಪು ಮಾಡುತ್ತಿದ್ದೇವೆ ಎಂಬ ಅಭಾಸವಾಗುತ್ತದೆ. ಆದಕಾರಣ ಈ ವಿಚಾರವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಟ್ರೈಬ್ಯೂನಲ್ ಮೇಲೆ ರಾಜ್ಯ ಸರಕಾರ ಅಧಿಕಾರವನ್ನು ಇಟ್ಟುಕೊಳ್ಳುವುದಕ್ಕೆ ನಾನು ಒಪ್ಪುವದಿಲ್ಲ. ಯಾಕೆಂದರೆ ರಾಜ್ಯಾಂಗ ಮತ್ತು ನ್ಯಾಯಾಂಗ ಬೇರೆ ಬೇರೆಯಾಗಿ ಇರಬೇಕು. State Government shall have some authority which you will exercise in your own way which will be published and notified in the Gazette which we do not see at all.

(ಮರಿಯಪ್ಪ, ಪುಟ್ಟಣ್ಣ ಪ್ರಶ್ನೆ ಮಾಡುತ್ತಾರೆ. ಮುಂದುವರಿಯುತ್ತಾ ಕೆಂಚಪ್ಪನವರು)

ಶ್ರೀ ಕೆ. ಕೆಂಚಪ್ಪ – 164ನೇ ಕ್ಲಾಜಿನಲ್ಲಿ ಹೀಗೆ ಹೇಳಿದೆ: –

"If any suit instituted in any civil court involves any issues which are required to be settled, decided or dealt with by any authority competent to settle, decide or deal with such issues under this Act,... the civil court shall stay the suit and refer such issues to such competent authority for determination.

ಇದರ ವಿಚಾರದಲ್ಲಿ ಒಂದು ಅಂಶ ಹೇಳಬೇಕಾಗಿದೆ. ಈ ಆಕ್ಟ್ ಪ್ರಕಾರ ಯಾವುದಾದರೂ ಒಂದು ಇಷ್ಯೂ ಒಂದು ಕೋರ್ಟಿನಲ್ಲಿ ಸ್ಟೇ ಆಗುವುದು ಇದ್ದು ಅದಕ್ಕೆ ಅವಕಾಶವಿದ್ದರೂ ಕೂಡ ಪುನಃ ಅದನ್ನು ಸಿವಿಲ್ ಕೋರ್ಟಿಗೇ ಕಳುಹಿಸುವಷ್ಟು you are making the civil court subordinate.

Supposing it is proved it involves many issues in which one of the issue is to be settled according to the provisions of this Act in a court contemplated in this Act; then the entire suit is to be stayed there until that is setted here. Who can accept this proposition? ಈ proposition ಯಾರು accept ಮಾಡುವುದಕ್ಕೆ ಸಾಧ್ಯ, ಹೇಗೆ ಸಾಧ್ಯ ಸಿವಿಲ್ ಕೋರ್ಟಿನಲ್ಲಿ ಸ್ಟೇ ಮಾಡುವುದೇ, ಬಿಡುವುದೇ, ಸೂಕ್ತವೇ ಅಲ್ಲವೇ ಎಂಬ ಎಲ್ಲಾ ಆರ್ಗ್ಯೂಮೆಂಟ್ ಇರುತ್ತದೆ. ಕೆಲವು ಸಂದರ್ಭದಲ್ಲಿ.

An Amildar can ask Civil Court and say that he is the authority and so the case should be stayed. In some cases, the Deputy Commissioner is also the competent authority to stay cases.

ಡೆಪ್ಯುಟಿ ಕಮೀಷನ್‌ರಿಗೆ ಅಧಿಕಾರವಿದ್ದರೂ ಮನ್ಸೀಫ್ ಕೋರ್ಟಿನ ಸಬ್ ಜಡ್ಜ್ ಸ್ಟೇ ಮಾಡಬಹುದು. ಡಿಸ್ಟ್ರಿಕ್ ಜಡ್ಜ್ ಸ್ಟೇ ಮಾಡಬಹುದು. ಆದ್ದರಿಂದ ಇದು ಯೋಚನೆ ಮಾಡಬೇಕಾದ ಮಾತು. ಇದನ್ನು ಯೋಚನೆಮಾಡಿ ವಕೀಲರು ಹಾಜರು ಆಗಕೂಡದು ಎಂದು ಇದೆ.

157ನೇ ಕ್ಲಾಜಿನಲ್ಲಿ ಹೀಗೆ ಹೇಳಿದೆ:

" no legal practitioner shall be entitled to appear on behalf of any party in any enquiry or proceeding under this Act before the Tribunal or the Deputy Commissioner:"

ಟ್ರಿಬ್ಯೂನಲ್ ಮುಂದೆ ಅಪಿಯರ್ ಆಗುವ ಹಾಗಿಲ್ಲ. ಡೆಪ್ಯೂಟಿ ಕಮೀಷನರ್ ಮುಂದೆ ಅಪಿಯರ್ ಆಗುವ ಹಾಗಿಲ್ಲ. ಇದನ್ನು ಯೋಚನೆ ಮಾಡಬೇಕು. ಒಂದು ವೇಳೆ ಅಪಿಯರ್ ಆಗಬೇಕಾಗಿದ್ದರೆ ಅನುಮತಿ ಪಡೆಯಬೇಕು. ಕೊಟ್ಟರೆ ಕೊಡಬಹುದು, ಇಲ್ಲದೆ ಇದ್ದರೆ ಇಲ್ಲ. ತಿಳಿವಳಿಕೆ ಇಲ್ಲದವರು ಅಪ್ಲಿಕೇಷನ್ ಕೊಟ್ಟರೆ ಕಾನೂನನ್ನೆಲ್ಲಾ ಅವರೇ ಓದಿಕೊಳ್ಳಬೇಕು. ಎಲ್ಲರಿಗೂ ಕಾನೂನಿನ ಪದಗಳು ತಿಳಿಯುವುದಿಲ್ಲ. ಪದಗಳನ್ನು ಇಂಟರ್ ಪ್ರೆಟ್‌ಮಾಡುವುದನ್ನು. ಸರಿಯಾದ ಅರ್ಥ ಕೊಡುವುದನ್ನು ಕಲಿತುಕೊಂಡು ಬರಬೇಕು. ನಿಜವಾಗಿಯೂ ಇದನ್ನು ಸರ್ಕಾರ ಸದ್‌ಭಾವನೆಯಿಂದ ಮಾಡಿದೆಯೇ ಎಂಬ ಶಂಕೆ ಬರುತ್ತಿದೆ. ಇದು ಈ ರೀತಿಯಾಗಿ ಇರಬಾರದು.

ಶ್ರೀ ಕಡಿದಾಳ್ ಮಂಜಪ್ಪ – ಪರ್ಮಿಷನ್ ಕೊಡಬೇಕು ಎಂದು ತಾವು ಹೇಳುತ್ತೀರಾ?

ಶ್ರೀ ಕೆ. ಕೆಂಚಪ್ಪ – ಹೌದು, ಪರ್ಮಿಷನ್ ಕೊಡಲಿಕ್ಕೇ ಬೇಕು. ವಕೀಲರು ಹಾಜರು ಆದರೆ ಅವರ ಇಂಟರೆಸ್ಟ್ safegaurd ಮಾಡುತ್ತಾರೆ.

ಸೆಕ್ಷನ್ 166ರಲ್ಲಿ –

"No suit or other legal proceeding shall lie against any per on in respect of anything which is in good faith done or intended to be done under this Act."

"Whatever be does, if he says that he does it in good faith or that he does it with an intention of doing it with good faith....."

ಏನೂ ಬೇರೆ ಮಾರ್ಗವೇ ಇಲ್ಲ. Belief ಎಂದು ಅಂದುಬಿಟ್ಟರೆ ಮುಗಿದೇ ಹೋಯಿತು. In good faith ಮಾಡಿದ್ದೇನೆ ಎಂದರೆ ಮುಗಿದುಹೋಯಿತು. ಏನು ಬೇಕಾದರೂ ಮಾಡಬಹುದು. ಏನೂ ಕೇಳುವ ಹಾಗೆಯೇ ಇಲ್ಲ. Supposing, a person commits attrocities believing that he is competent to do it under this Act.

* * * * *

**Mr. Speaker.** – I completely agree with you and that is why i have called upon the Leader of the Opposition ot speak.

**Sri. K. S. Suryanarayanarao** – It is now nearly 4-30 P.M.

**Sri. C. J. Muckannappa (Gubbi),** - I rise to a point of order, Sir. You have called the Leader of the Opposition to speak twice. In spire of that, there have been interruptions, Points of information, points of clarification and all that. My friend Sir Suryanarayana Rao wants some information. I cannot understand the attitude of my friend.

**Mr. Speaker. –** If Sri Suryanayarana Rao has made a mistake, Sri Muckannappa has made a double mistake. I will give an opportunity to the Hon'ble Members to speak and when they get their chance to speak and when they get their chance to speak, they may ask for information. What is the use of asking for information in the middle of the speech of an Hon'ble Member? And who should give the information?

**Sri K.S. Suryanarayana Rao.** - I seek clarification from the concerned Minister.

ಶ್ರೀ ಕೆ. ಕೆಂಚಪ್ಪ (ಹಿರಿಯೂರು).- ಸ್ವಾಮಿ, ಈಗ ಸಭೆಯ ಮುಂದೆ ಇರತಕ್ಕ ವಿಚಾರ ಕುರಿತು ಕೆಲವಾರು ವಿಷಯಗಳನ್ನು ಹೇಳಲು ನಾನು ಇಚ್ಛಿಸುತ್ತೇನೆ. ಈಗ ನಾವು ಆಲೋಚಿಸತಕ್ಕ ಪ್ರಕೃತ ಆಹಾರ ಪರಿಸ್ಥಿತಿ ಮತ್ತು ಬರಗಾಲ ಸಂದರ್ಭ, ಈ ವಿಷಯವನ್ನು ನಾನು ತಮ್ಮ ಮುಂದೆ ಇಡುವಾಗ ಇನ್ನೊಂದು ವಿಷಯವನ್ನು ಸಹ ಹೇಳಲು ನಾನು ಬಯಸುತ್ತೇನೆ. ಕೆಲವಾರು ದಿವಸಗಳ ಹಿಂದೆ ಕೆಲವು ಡಿಸ್ಟ್ರಿಕ್ಟುಗಳ ಕೆಲವೊಂದು ಭಾಗದಲ್ಲಿ ಮಳೆ ಬಾರದೆ ಕಷ್ಟದ ಪರಿಸ್ಥಿತಿ ಉದ್ಭವಿಸಿದ್ದನ್ನು ಇದೇ ಅಸೆಂಬ್ಲಿಯಲ್ಲಿ ಒಂದು ಅಡಜರ್ನಮೆಂಟ್ ಮೋಶನ್ ತಂದು ಸರಕಾರದ ಗಮನಕ್ಕೆ ತಂದದ್ದಾಯಿತು. ಆ ನಿಲುವಳಿ ಸೂಚನೆಗೆ 30 ಜನ ಸದಸ್ಯರುಗಳಿಗೆ ವೇಲ್ಲಟ್ಟು ರುಜು ಮಾಡಿದ್ದಾರೆ. ಆಹಾರ ಪರಿಸ್ಥಿತಿ ಮತ್ತು ಬರಗಾಲದ ಬಗ್ಗೆ ನಾಲ್ಕನೆಯ ತಾರೀಖಿನ ದಿನ ಚರ್ಚೆ ಮಾಡುವಾಗ ಆ ವಿಚಾರವಾಗಿ ಮಾತಾಡಬಹುದು ಎಂದು ನಮಗೆ ತಿಳಿಸಿದ್ದಾರೆ. ಆಹಾರದ ಪರಿಸ್ಥಿತಿ ಮತ್ತು ಬರಗಾಲದ ಪರಿಸ್ಥಿತಿ ಹಾಗೂ ಮಳೆಬಾರದೆ ಉಂಟಾಗಿರತಕ್ಕ ಪರಿಸ್ಥಿತಿ ಇವು ಬೇರೆ ಬೇರೆ ವಿಷಯಗಳನ್ನು ಇಂದು ಆಲೋಚನೆ ಮಾಡಬೇಕಾಗಿದೆ. ಆಹಾರದ

ಪರಿಸ್ಥಿತಿಯನ್ನು ತೆಗೆದುಕೊಂಡರೆ ಆಹಾರ ಪದಾರ್ಥಗಳ ಧಾರಣೆ ಜಾಸ್ತಿಯಾಗಿದೆ. ಮಳೆ ಬಾರದೆ ಇದ್ದುದರಿಂದ ಕೆಲವು ಸ್ಥಳಗಳಲ್ಲಿ ಆಹಾರ ಧಾನ್ಯಗಳ ಬೆಳೆ ನಷ್ಟವಾಗಿದೆ. ಮಾನ್ಯ ಮುಖ್ಯಮಂತ್ರಿಗಳು ಇದನ್ನು ಕುರಿತು ವಿಶದವಾಗಿ ಹೇಳಲಿಲ್ಲ. ಅವರ ವಾದಸರಣೆಯನ್ನು ನೋಡಿದರೆ ಮಳೆ ಸ್ವಲ್ಪ ಕಡಿಮೆ ಆಗಿದೆ; ಆದಕಾರಣ ಬೆಳೆ ಕಡಿಮೆ ಬರುವುದು ಎಂದು ಅರ್ಥವಾಗುತ್ತದೆ. ಇನ್ನು ಮಳೆಬರುವುದು ಆಶಾದಾಯಕವಾಗಿಲ್ಲ. ಫೇರ್ ಪ್ರೈಸ್ ಡಿಪೋಗಳನ್ನು ತೆಗೆದು ಅನುಕೂಲ ಮಾಡಿಕೊಡುತ್ತಾರೆ ಎಂಬ ಭಾವನೆ ಬಂದಿದೆ. ಧಾರಣೆವಾಸಿ ಹೆಚ್ಚಾಗಿದೆ. ಇದು ಇಂದಿನ ಪ್ರಶ್ನೆಯಲ್ಲ. ಕೆಲವಾರು ವರ್ಷಗಳಿಂದ ಧಾರಣೆವಾಸಿ ಹೆಚ್ಚಾಗುತ್ತಲೇ ಇದೆ. ಆದರೆ ಇದಕ್ಕೆ ಕಾರಣವೇನು ಎಂಬುದನ್ನು ಅವರು ಹೇಳಲಿಲ್ಲ. ನಾನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವುದೇನೆಂದರೆ 1945 ನೆಯ ಇಸವಿಯಿಂದ ಸುಮಾರು 1947–48 ವರೆಗೆ ಮೈಸೂರು ಸಂಸ್ಥಾನದಲ್ಲಿ ಆಹಾರದ ಪರಿಸ್ಥಿತಿಯ ಉತ್ಕಟಾವಸ್ಥೆ ಇತ್ತು. ಈಗ್ಗೆ ಬೆಳೆದಷ್ಟು ಆಗ್ಗೆ ಬೆಳೆದಿಲ್ಲವೆಂದು ಭಾವಿಸಬಾರದು. ಧಾರಣೆವಾಸಿ ನೋಡಿದರೆ ಈಗ ತುಂಬ ಹೆಚ್ಚಾಗಿದೆ. ಧಾರಣೆವಾಸಿ ಇದೊಂದು ಕಷ್ಟಕ್ಕೆ ಕಾರಣ, ಅದನ್ನು ಹೇಗೆ ಎದುರಿಸಬೇಕು ಎಂಬ ಪ್ರಶ್ನೆ ಈಗ ಉದ್ಭವಿಸುವದಿಲ್ಲ. ಅದರ ಬಗ್ಗೆ ಆಲೋಚನೆ ಮಾಡುವ ಸ್ಥಿತಿಯಲ್ಲಿ ಸರಕಾರದವರು ಇಲ್ಲ. ಯಾಕೆಂದರೆ ಮುಂಗಾರಿ ಮಳೆ ಕೆಲವೊಂದು ಜಿಲ್ಲೆಗಳಲ್ಲಿ ಆಗದೇ ಇರಬಹುದು. ಆದರೆ ಬೇರೆ ಕಡೆ ಮುಂಗಾರು ಮಳೆ ಬಂದಿದೆ. ಆದರೆ ಮಳೆ ಬರುವ ಪೂರ್ವದಲ್ಲಿ ಬಿತ್ತುವದಕ್ಕೆ ಅವಕಾಶವಿರಲಿಲ್ಲ. ಬಿತ್ತಿದ ಮೇಲೆ ಮಳೆಹೋಗಿಬಿಟ್ಟಿತ್ತು. ಹಿಂಗಾರು ಮಳೆಬರಲಿಲ್ಲ, ಹೀಗಾಗಿ ಮುಂಗಾರು ಮಳೆ ಉಪಯೋಗವಾಗಲಿಲ್ಲ. ಮತ್ತು ಹಿಂಗಾರುಮಳೆ ಬರಲಿಲ್ಲ. ಈ ರೀತಿಯಾಗಿ ಮಳೆ ಬಾರದೆ ಇದ್ದದ್ದರ ಮೂಲಕ ಧಾರಣೆವಾಸಿ ಹೆಚ್ಚಾಗಿದೆ. ಬೆಳೆ ಸರಿಯಾಗಿ ಬಾರದೇ ಇದ್ದುದರಿಂದ ತುಂಬ ಕಷ್ಟವಾಗಿದೆ. ಪರಿಹಾರ ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿದೆ. ಆಹಾರದ ಪರಿಸ್ಥಿತಿ ಎಷ್ಟು ಉತ್ಕಟವಾಗಿದೆ ಎಂಬುದನ್ನು ಸರಕಾರ ತಿಳಿಸಬೇಕು. ನಾವೆಲ್ಲರೂ ಒಕ್ಕಲಿಗರಾಗಿರುವದರಿಂದ ಈ ವಿಷಯ ನಮಗೆ ಚೆನ್ನಾಗಿ ಗೊತ್ತಿದೆ. ಮಳೆ ಬಂದರೆ ಸ್ವಲ್ಪ ಸುಧಾರಿಸುತ್ತದೆ. ಆದರೆ ಎಷ್ಟು ಮಳೆ ಆಗಿದೆ ಎಂಬುದನ್ನು ಆಲೋಚನೆ ಮಾಡಬೇಕು. ನಮ್ಮ ಮೊಳಕಾಲ್ಮುರು ತಾಲ್ಲೂಕದಲ್ಲಿ ಎರೆಭೂಮಿ ಇಲ್ಲ. ಮುಂಗಾರು ಮಳೆ ಬಾರದೆ ಆಗುವುದಿಲ್ಲ. ಹಿಂಗಾರು ಮಳೆ ಆಗಬೇಕು. ಇಂಥ ಸ್ಥಿತಿಯಲ್ಲಿ ನಾವು ಏನು ಮಾಡಬೇಕು? ಇದೇ ರೀತಿ ಇಡೀ ಜಿಲ್ಲೆಯಬಗ್ಗೆ ಆಲೋಚನೆ ಮಾಡಬೆಕು.

ಈಗ ನಾವು ಕಠಿಣವಾದ ಪರಿಸ್ಥಿತಿಯುಲ್ಲಿ ಇದೇ ವೊರೆ ತಾವು ಅನ್ಯಥಾಭಾವಿಸಬಾರದು. ಇಷ್ಟು ಕಠಿಣವಾದ ಸ್ಥಿತಿಯಲ್ಲಿ ಮೈಸೂರು ಸಂಸ್ಥಾನ ಹಿಂದೆ ಇರಲಿಲ್ಲ. ಪಂಚ ವಾರ್ಷಿಕ ಯೋಜನೆಗಳಿಗಾಗಿ ದುಡ್ಡಿನ ಚಲಾವಣೆ ಹೀಗೆ ಆಗಿರುವ ದಶೆಯಿಂದ ಧಾನ್ಯದ ಬೆಲೆ ಹೆಚ್ಚಾಗಿದೆ ಎನ್ನುವುದು ತಪ್ಪಾದೀತು ಎಂದು ಭಾವಿಸಕೂಡದು. ಅದಕ್ಕೂ ಕಾರಣ ಇದೆ. The nation has got its own work to do. ನಾನಾವಿಧವಾಗಿ ಗಾಂಧಿ ಭಕ್ತರು ಸಮಾಜವಾದಿ ಸರ್ಕಾರದವರು ಬೇಕಾದಷ್ಟು ತೆರಿಗೆ ಹಾಕುತ್ತಿದ್ದಾರೆ.

ಪ್ರತಿಯೊಂದು ವಿಧದಲ್ಲೂ ಹೆಚ್ಚಿಗೆ ಧಾರಣೆವಾಸಿ ಮಾಡುತ್ತಿದ್ದಾರೆ; ಆಹಾರ ಪರಿಸ್ಥಿತಿ ಹೆಚ್ಚಿಗೆ ಉತ್ಕಟವಾಗುತ್ತಿದೆ. ಪರಿಸ್ಥಿತಿ ಏನಾಗುತ್ತದೆ. ಎಂಬುದನ್ನು ಆಲೋಚನೆ ಮಾಡಬೇಕು. ಪಂಡಿತರೆಂದು ಕೊಂಡಿರುವವರು ಅದರ ಪರಿಹಾರಾರ್ಥವಾಗಿ ಏನು ಮಾಡಬೇಕು ಎಂದು ತಿಳಿದುಕೊಳ್ಳುತ್ತಾರೆ. ಮೊನ್ನೆ ತಾನೆ ಮಳೆ ಬಾರದ್ದರಿಂದ ಆಹಾರದ ಪರಿಸ್ಥಿತಿ ಕೆಟ್ಟು ಹೋಗಿದೆ ಎಂದು ಹೇಳಿದರೆ ಆಗುವುದಿಲ್ಲ. ಮಾಡಬಾರದ ಪಾಪ ಮಾಡಿದರೆ ಕಾಶಿಗೆ ಹೋಗಿ ಸ್ನಾನ ಮಾಡಿದರೆ ಪಾಪ ಪೂರ್ಣವಾಗಿ ಹೋಗುತ್ತದೆ ಎಂದು ಹೇಳುತ್ತಾರೆ. ಮಳೆ ಬಾರದ್ದರಿಂದ ಆಹಾರದ ಪರಿಸ್ಥಿತಿ ಕೆಟ್ಟು ಹೋಗಿದೆ ಎಂದು ಹೇಳುವುದು ನಿಜವಲ್ಲ. ಆಹಾರದ ಬೆಲೆ ಹೆಚ್ಚಾಗುವುದಕ್ಕೆ ಸರ್ಕಾರದವರು ಹೆಚ್ಚಿನ ಪ್ರಮಾಣದಲ್ಲಿ ಹಾಕಿರತಕ್ಕ ತೆರಿಗೆಗಳೇ ಕಾರಣವಾಗಿದೆ. ಮಾಡಿದ ಪಾಪವನ್ನು ಸುಧಾರಿಸುವುದಕ್ಕೆ ಏನು ಮಾಡಬೇಕು ಎಂಬುದನ್ನು ನೋಡಬೇಕು. ಮಳೆ ಬಾರದ್ದರಿಂದ ಕೆಲವಾರು ಕಡೆಗಳಲ್ಲಿ ಧಾರಣೆವಾಸಿಗಳು ಜಾಸ್ತಿಯಾಗಿವೆ ಎಂಬುದನ್ನು ನಾನು ಒಪ್ಪುವುದಿಲ್ಲ. ನಮ್ಮ ದೇಶ ಮೊದಲಿನಿಂದಲೂ ಡಿಫಿಸಿಟ್ ದೇಶ. ಚೆನ್ನಾಗಿ ಮಳೆಯಾದರೂ ದವಸ ಧನ್ಯಗಳು ನಮಗೆ ಬೇರೆ ಕಡೆಯಿಂದ ಬರಬೇಕು. 1951ನೆಯ ಇಸ್ವಿಯಲ್ಲಿ ಆಹಾರದ ವಿಚಾರದಲ್ಲಿ ಸ್ವಾವಲಂಬನ ಮಾಡಿಕೊಳ್ಳುತ್ತೇವೆಂದು ಹೇಳಿದಿರಿ. ಪ್ಲಾನ್ ಮಾಡುವವರು ಲೆಕ್ಕಾಚಾರ ಸರಿಯಾಗಿ ಹಾಕಿಲ್ಲ ಎಂಬುದನ್ನು ತಾವೂ ಒಪ್ಪಿಕೊಳ್ಳಬೇಕು ಎಲ್ಲರೂ ಒಪ್ಪಿಕೊಳ್ಳಬೇಕು. ಬುಕ್ಕಿನಲ್ಲಿರುವ ಫಿಗರ್ಸ್ ಮತ್ತು ಫ್ಯಾಕ್ಟ್ಸ್ ನಿಜ ಎನ್ನುವ ನಂಬಿಕೆ ನನಗೆ ಇಲ್ಲ. ನಿಮ್ಮ ಬುಕ್ಕಿನಲ್ಲಿರತಕ್ಕ ಅಂಕಿ ಅಂಶಗಳು ಯಾವ ದೃಷ್ಟಿಯಿಂದಲೂ ಸಹ ಸಮರ್ಥನೆ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ ಎನ್ನುವ ವಿಚಾರವನ್ನು ತಮ್ಮ ಗಮನಕ್ಕೆ ತರುತ್ತೇನೆ. ಹಿಂದೆ ಬಂಜರು ಜಮೀನು ಎಷ್ಟಿತ್ತು? ಎಷ್ಟು ಸಾಗುವಳಿಗಾಗಿ ಕೊಟ್ಟಿದ್ದೀರಿ? ಎಷ್ಟು ಬೆಳೆ ಬರುತ್ತದೆ? ಎನ್ನುವ ಅಂಕಿ ಅಂಶಗಳನ್ನು ತೋರಿಸದೆ ಸುಮ್ಮನೆ ಜನಗಳ ಪರಿಸ್ಥಿತಿ ಸುದಾರಿಸೀತು ಎಂದು ಹೇಳಿದರೆ ತಪ್ಪಾಗುತ್ತದೆ. ವ್ಯವಸಾಯಗಾರರಿಗೆ ಗೊತ್ತಿದೆ, ಒಂದು ಬಂಜರು ಜಮೀನು ಸಾಗಿಗೆ ಬಂದು ಎಷ್ಟು ವರ್ಷದ ಮೇಲೆ ಬೆಳೆ ಬರುತ್ತದೆ ಎಂಬುದು. 20 ವರ್ಷದ ಮೇಲೆ ಎಷ್ಟು ಬೆಳೆ ಕೊಡುತ್ತದೆ ಎಂಬುದು ವ್ಯವಸಾಯಗಾರರಿಗೆ ಗೊತ್ತಿದೆ. ಇವೊತ್ತಿನ ದಿವಸ ದುಬಾರಿ ಧಾರಣೆ ಬರಲು ಕಾರಣ inflation ಮತ್ತು ನೀವು ಹಾಕಿರತಕ್ಕ ನಾನಾ ವಿಧವಾದ ತೆರಿಗೆಗಳು. ಆದರೂ ಸಹ ಸರ್ಕಾರದವರು ಒಂದು ರೀತಿಯಲ್ಲಿ ಬ್ಯಾಂಕಿನ ಮೇಲೆ overdraw ಮಾಡುವುದಕ್ಕೆ ಹೊರಟಿದ್ದಾರೆ. ಆಹಾರದ ಪರಿಸ್ಥಿತಿ ಉತ್ಕಟಾವಸ್ಥೆಯಾಗಿ ಧಾರಣೆ ದುಬಾರಿಯಾಗಿದೆ. ಆಹಾರದ ಬೆಳವಣಿಗೆಯ ದೃಷ್ಟಿಯಿಂದ ವಿಚಾರವನ್ನು ಅರಿತು ಮಾತನಾಡಬೇಕಾಗುತ್ತದೆ. ಎಲ್ಲೆಲ್ಲಿ ಎಷ್ಟು ಬೆಳೆದಿದೆ ಎನ್ನುವುದು ಗೊತ್ತಿಲ್ಲ. ನಮ್ಮ ಜಿಲ್ಲೆಯಲ್ಲಿ ಕೆಲವಾರು ಭಾಗಗಳ ವಿಚಾರ ಹೇಳುತ್ತೇನೆ.

"ಶ್ರೀ ಟಿ. ಎಸ್. ಮೂಡಲಗಿರಿಗೌಡ (ಕುಣಿಗಲ್), - On a point of order Sir. ವಿರೋಧ ಪಕ್ಷದ ಲೀಡರು ದೇಶದ ಪರಿಸ್ಥಿತಿ ವಿಷಯ ಮಾತನಾಡುತ್ತಾರೆ ಎಂದು ತಿಳಿದುಕೊಂಡಿದ್ದವು. ಆದರೆ ಎಲ್ಲೆಲ್ಲಿ ಮಳೆ ಬೆಳೆಗಳು ಹೇಗಿವೆ ಎನ್ನುವ

ವಿಷಯ ಸರಿಯಾಗಿ ಗೊತ್ತಿಲ್ಲ ತನ್ನ ಪ್ರದೇಶದ ವಿಷಯ ಮಾತ್ರಗೊತ್ತಿದೆ. ಆ ವಿಷಯ ಮಾತ್ರ ಹೇಳುತ್ತೇನೆ ಎಂದು ಹೇಳುತ್ತಾರೆ. ಅವರು ಸಭೆಯಲ್ಲಿ ಸೀರಿಯಸ್ ಆಗಿ ಮಾತನಾಡುವ ಹಾಗೆ ಕಾಣುವುದಿಲ್ಲ. ಆಪೋಸಿಷನ್ ಲೀಡರಾದವರು ಎಲ್ಲಾ ಡಿಸ್ಟ್ರಿಕ್ಟುಗಳ ವಿಷಯವನ್ನೂ ಸೀರಿಯಸ್ ಆಗಿ ಮಾತನಾಡಬೇಕು. ದೇಶದ ವಿಷಯವನ್ನು ತಿಳಿದುಕೊಂಡು ಮಾತನಾಡಬೇಕು. ಇವರಿಗೆ ದೇಶದ ವಿಷಯ ಗೊತ್ತಿಲ್ಲ. ಆದ್ದರಿಂದ ಇವರಿಗೆ ಟೈಮ್ ಲಿಮಿಟ್ ಮಾಡಿಬೇರೆಯವರಿಗೆ ಅವಕಾಶ ಕೊಡಬೇಕು. ಇದನ್ನು ಅಧ್ಯಕ್ಷರು ದಯವಿಟ್ಟು ಗಮನಿಸಬೇಕು.

ಅಧ್ಯಕ್ಷರು. – ಕಾಲದ ಮಿತಿಯ ವಿಷಯ ಸರಿಯಿದೆ. ತಾವು ಹೇಳಿದ ಪಾಯಿಂಟ್ ಆಫ್ ಆರ್ಡರ್ ಸರಿಯಲ್ಲ. ಕಾಲವನ್ನು ನಿಗದಿಮಾಡಿ ಎಂದು ಹೇಳುತ್ತಿದ್ದೀರಿ. ಒಬ್ಬೊಬ್ಬರಿಗೆ ಈ ವಿಚಾರದಲ್ಲಿ ಮಾತನಾಡಲು 15 ನಿಮಿಷ ಕೊಟ್ಟಿದ್ದೇವೆ ಅಪೋಸಿಷನ್ ಲೀಡರ್ ಆಗಿರುವುದರಿಂದ ಅವರಿಗೆ ಸ್ವಲ್ಪ ಜಾಸ್ತಿಕಾಲ ಕೊಡುತ್ತೇನೆ.

**Sri K. Kenchappa. –** Every member has a right to raise a point of order or make a statement. But I should respectfully submit that he has no right to insult the intelligence of other members. I must submit that there must be some respect shown to others who speak in this House because we are sitting in a responsible body.

ಈ ದೇಶದ ಪರಿಸ್ಥಿತಿಯನ್ನು ಅರಿತುಕೊಂಡು ಮಾತನಾಡಬೇಕಾದದ್ದು ನನ್ನ ಜವಾಬ್ದಾರಿ ಹೌದು. ಆದರೆ ಅದಕ್ಕೆ ಒಂದು ಎಲ್ಲೆಕಟ್ಟು ಇದೆ. ನನಗೆ ಸರ್ಕಾರಕ್ಕೆ ಇದ್ದ ಎಲ್ಲಾ ಅನುಕೂಲಗಳು ಇಲ್ಲದೆ ಇರುವುದರಿಂದ ವರದಿಗಳನ್ನು ತಕ್ಷಣ ತರಿಸಿಕೊಳ್ಳುವುದಕ್ಕೆ ಆಗದೆ ಇರುವುದರಿಂದ ಜವಾಬ್ದಾರಿಯುತವಾಗಿ ಮಾತನಾಡುವಾಗ ನನಗೆ ಎಷ್ಟು ಗೊತ್ತಿದೆಯೋ ಅಷ್ಟು ವಿಷಯದ ಮೇಲೆ ಮಾತನಾಡುತ್ತಿದ್ದೇನೆ. ಕೆಲವಾರು ಸ್ಥಳಗಳಲ್ಲಿ ಕಠಿಣ ಪರಿಸ್ಥಿತಿ ಇದೆ. ಆಹಾರದ ಬೆಲೆ ದುಬಾರಿ ಆಗಿರತಕ್ಕ ಕಾಲದಲ್ಲಿ ಕೈಯಲ್ಲಿ ಮೂರುಕಾಸೂ ಸಹ ಇಲ್ಲದೆ ಇರತಕ್ಕ ರೈತರು ಬೆಳೆಯದೇ ಹೋದರೆ ಏನು ಮಾಡಬೇಕು? ಇಂಥ ಪರಿಸ್ಥಿತಿ ಇದೆ. ಅನೇಕ ಸ್ಥಳಗಳಲ್ಲಿ ಪರಿಹಾರ ದ್ರವ್ಯವನ್ನು ಕೊಟ್ಟಿದ್ದೇವೆ ಮತ್ತು ಪರಿಹಾರ ಕ್ರಮವನ್ನು ತೆಗೆದುಕೊಂಡಿದ್ದೇವೆ ಎಂದು ತಾವು ಹೇಳಬಹುದು. ಮುಂಗಾರು ಮಳೆ ಬರಲಿಲ್ಲ. ಹಿಂಗಾರು ಮಳೆ ಬಂದರೂ ಬೆಳೆ ಆಗುವುದಿಲ್ಲ. ಹಿಂಗಾರು ಮಳೆ ಬಂದರೂ ಬೆಳೆ ಆಗುವುದಿಲ್ಲ. ಕಪ್ಪು ಜಮೀನನ್ನು ಬಿಟ್ಟರೆ, ಹಿರಿಯೂರು, ಚಳ್ಳಕೆರೆ ತಾಲ್ಲೂಕಿನಲ್ಲಿ ಬೇರೆ ಯಾವ ಜಮೀನು ಇಲ್ಲ. ಅದೇ ಪರಿಸ್ಥಿತಿ ಹೊಸದುರ್ಗ ತಾಲ್ಲೂಕಿನಲ್ಲಿದೆ. ಅಲ್ಲಿ ಎರೆ ಜಮೀನು ಬಹಳ ಕಡಿಮೆ. ಈ ರೀತಿಯಲ್ಲಿ ಉತ್ಕಟಾವಸ್ಥೆ ಇರುವಾಗ ಜನರ ಆಶೋತ್ತರಗಳು ಬಹಳವಾಗಿ ನಿಂತು ಹೋಗಿವೆ. ಹೇಗೆ ಬಾಳಬೇಕು?

ಬಡತನ ಅವರನ್ನು ಬಾಧಿಸುತ್ತಾ ಇದೆ. ಅವರು ಹೇಗೆ ಬೆಳೆಯಬೇಕು? ಅವರಿಗೆ ಯಾವರೀತಿ ಪರಿಹಾರವನ್ನು ಒದಗಿಸುತ್ತಾರೆ? ಮಳೆ ಬಂತು ಎಂದು ಇಟ್ಟುಕೊಳ್ಳಿ. ಬಂದರೂ ಬೆಳೆ ಆಗುವುದಿಲ್ಲ. ಇದನ್ನು ತೀವ್ರವಾಗಿ ಆಲೋಚನೆ ಮಾಡಬೇಕಾಗುತ್ತದೆ. ಜಮೀನುಗಳನ್ನು ನೋಡಿದರೆ ಎನಿಸುತ್ತದೆ ನಿಜವಾಗಿಯೂ ಕಷ್ಟಪಟ್ಟರೂ ಸಹ ಬೆಳೆಯುವುದಕ್ಕಾಗುವುದಿಲ್ಲ. ಅಲ್ಲಿ ಮಳೆ ಬರುವುದು ಆರು ಇಂಚು, ಹನ್ನೆರಡು ಇಂಚು. ಚಳ್ಳಕೆರೆ, ಹಿರಿಯೂರು ತಾಲ್ಲೂಕುಗಳಲ್ಲಿ ಮಳೆ ಕಡಿಮೆ ಬೆಳೆಯೂ ಸ್ವಲ್ಪ, ಆ ಪ್ರದೇಶದಲ್ಲಿ ಇತರಕ್ಕ ಕಷ್ಟವನ್ನು ಹೇಳಿಕೊಳ್ಳುವುದಕ್ಕೆ ಆಗುವುದಿಲ್ಲ. ಇಂತಹ ಪರಿಸ್ಥಿತಿ ಹೊಸದುರ್ಗ ತಾಲ್ಲೂಕಿನಲ್ಲಿದೆ ಮತ್ತು ತುಮಕೂರು ಜಿಲ್ಲೆಯಲ್ಲಿದೆ. ನಾವು ಇದನ್ನು ವಿಚಾರಣೆ ಮಾಡಲು ಒಂದು ನಿಲುವಳಿ ಸೂಚನೆ ಕಳುಹಿಸಬೇಕು ಎಂದು ಮಾನ್ಯ ಮಿತ್ರರೊಬ್ಬರು ಹೇಳಿದರು. ಆಹಾರ ಪರಿಸ್ಥಿತಿ ಬಹಳ ಕಠಿಣವಾಗಿರುವುದರ ಜೊತೆಗೆ ಬೆಲೆ ದುಬಾರಿಯಾದ ಆಹಾರ ಪದಾರ್ಥಗಳನ್ನು ಕೊಂಡುಕೊಳ್ಳುವುದಕ್ಕೆ ಶಕ್ತಿ ಉಂಟು ಮಾಡತಕ್ಕ ಕಾರ್ಯಕ್ರಮ ಯಾವುದನ್ನು ಕೈಗೊಳ್ಳುತ್ತಾರೆ ಎನ್ನುವುದನ್ನು ಸರ್ಕಾರದವರು ಹೇಳಲೇಬೇಕಾಗುತ್ತದೆ. ಕೂಲಿಯವರು ಬೇಕಾದಷ್ಟು ಮಂದಿ ಇದ್ದಾರೆ. ದುಬಾರಿ ಆಗಿರತಕ್ಕ ಕಾಲದಲ್ಲಿ ಇನ್ನೂ ಹೆಚ್ಚಿಗೆ ದುಬಾರಿ ಆಗುವುದು ಚೆನ್ನಾಗಿಲ್ಲ. ಡಿಪೋ ಇಟ್ಟರೆ ಅದರಲ್ಲಿ ಅಲ್ಪಸ್ವಲ್ಪ ದೋಷವಿದ್ದರೂ ಅದರಿಂದ ಹೆಚ್ಚಿನ ಉಪಯೋಗವಾಗುತ್ತದೆ. ಈ ದೃಷ್ಟಿಯಿಂದ ಅದನ್ನು ಆಲೋಚನೆ ಮಾಡಬೇಕು. ಮೊನ್ನೆತಾನೆ ಮಳೆ ಬಂದಿದೆ ಆದ್ದರಿಂದ ನಮ್ಮ ಆಹಾರ ಪರಿಸ್ಥಿತಿ ಉತ್ತಮವಾಗಿದೆ ಎಂದು ಹೇಳುವುದು ಸರಿಯಲ್ಲ. ಇದು ಸುಲಭವಾದ ಪ್ರಶ್ನೆಯಲ್ಲ. ವೇಳೆ ಆಗುತ್ತಾ ಬಂದಿದೆ. ಹೇಳುವ ವಿಚಾರ ವಿಪರೀತವಾಗಿದೆ.

ಮಳೆ ಬಾರದ ದೆಶೆಯಿಂದ ಈ ಕಮಿಷನ್ ಬರಲಿಲ್ಲ. ವಾಸ್ತವವಾಗಿ, ಈ ಪರಿಸ್ಥಿತಿ ಉದ್ಭವಿಸುವುದಕ್ಕೆ ಮುಂಚೆಯೇ, ಈ ಕಮಿಷನ್ ಬರುವುದು ಎಂದಿತ್ತು. ಮಳೆಬಾರದೆ, ಪರಿಸ್ಥಿತಿಯನ್ನು ಸರ್ಕಾರದವರು ದೀರ್ಘವಾಗಿ ಆಲೋಚಿಸಬೇಕು. ರೈತರಿಗೆ ಬಹಳ ತೊಂದರೆಯಾಗಿದೆ. ಇನ್ನೂ ಹೆಚ್ಚು ತೊಂದರೆ ಆಗುತ್ತದೆ. ನೌಕರರಿಗಾದರೋ ಸಂಬಳ ನೀಡಬಹುದು. ಮಳೆ ಬಂದಿಲ್ಲವಾದ್ದರಿಂದ, ರೈತರು ಏನುಮಾಡಬೇಕು? ಮಳೆ ಬಾರದ್ದರಿಂದ ಉದ್ಭವವಾಗಿರುವ ಪ್ರಶ್ನೆ ಬಂದಿಲ್ಲವಾದ್ದರಿಂದ, ರೈತರು ಏನುಮಾಡಬೇಕು? ಮಳೆ ಬಾರದ್ದರಿಂದ ಉದ್ಭವವಾಗಿರುವ ಪ್ರಶ್ನೆ ಅಷ್ಟು ಸುಲಭವಾಗಿ ಬಿಡಿಸತಕ್ಕದಲ್ಲ. ಇಲ್ಲಿ ಕುಳಿತುಕೊಂಡು, 15–20 ನಿಮಿಷದಲ್ಲಿ ಈ ಪ್ರಶ್ನೆಯನ್ನು ಬಿಡಿಸುವುದಕ್ಕಾಗುವುದಿಲ್ಲ. ಅಭಿಮಾನಯುತರಾಗಿ ಕೆಲವು ಅಂಶಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಮಾತನಾಡುವ ಪ್ರಶ್ನೆ ಇದಲ್ಲ. ಇದು ದೇಶದ ಪ್ರಶ್ನೆ. ಆದ್ದರಿಂದ ಈ ವಿಚಾರದಲ್ಲಿ ದೀರ್ಘವಾಗಿ ಆಲೋಚನೆ ಮಾಡಬೇಕು. ಸುಮ್ಮನೆ ಸರಿಯಾದ ಪರಿಹಾರ ಕ್ರಮವನ್ನು ತೆಗೆದುಕೊಳ್ಳುತ್ತೇವೆಂದರೆ ಸಾಲದು. ಹೇಳಿದ್ದನ್ನು ಕಾರ್ಯಗತ ಮಾಡುವುದಕ್ಕೆ ಸಿದ್ಧವಿರಬೇಕು.

* * * * *

# ಆಹಾರದ ವಿಚಾರ

**ಶ್ರೀ ಕೆ. ಕೆಂಚಪ್ಪ** (ಹಿರಿಯೂರು):- ಮಾನ್ಯ ಅಧ್ಯಕ್ಷರೆ ಅಹಾರವಾಗಿ ಪ್ರಕೃತಿ ಸಂದರ್ಭವನ್ನು ಕೊಡಬೇಕೆಂದು ಕೆಲವಾರು ಅಭಿಪ್ರಾಯಗಳನ್ನು ಕೋಡಬೇಕೆಂದು ಈ ಸೂಚನೆಯನ್ನು ತಂದಿರುವ ವಿಚಾರದಲ್ಲಿ ನಾವು ನಾಲ್ಕಾರು ಮಾತುಗಳನ್ನಾಡಬೇಕೆಂದು ಒಂದು ವ್ಯವಸ್ಥೆ ಮಾಡಿದೆ. ಈಗ ಮುಖ್ಯವಾಗಿ ಅಹಾರದ ಸಮಸೆಯ ವಿಚಾರವಾಗಿ ಮಾತನ್ನಾಡುತ್ತಾ ಪ್ರಕೃತತದಲ್ಲಿ ಇರುವ ಸಮಸ್ಯೆಯೊಂದಿದೆ ಶಾಶ್ವತವಾಗಿ ಕೆಲವಾರು ಸ್ಥಳಗಳಲ್ಲಿ ಅತಿ ಕಠಿಣವಾದ ಸಮಸ್ಯಗಳು ಉದ್ಭವಿಸುವುದರಿಂದ ಅಲ್ಲಿ ಆ ಸಮಸ್ಯೆ ಒಂದಿದ್ದಾರೆ. ಕೆಲವಾರು ಸ್ಥಳಗಳಲ್ಲಿ ಅತಿ ಕಟಿಣವಾದ ಸಮಸ್ಯಗಳು ಉದ್ಬವಿಸದುವುದರಿಂದ ಅಲ್ಲಿ ಆ ಸಮಸ್ಯೆಗಳನ್ನು ಪರಿಹರಿಸ ಕೆಲವಾರು ವವ್ಯಸ್ಥೆಗಳನ್ನು ಮಾಡವುದೊಂದು ಈ ರೀತಿಯಿಮದೆ ಪಕೃತ ಸಂದರ್ಭಗಳಲ್ಲಿ ಏನು ನಮಗೆ ಬಂದಿದೆಯೆಂಬುದನ್ನು ಅಲೋಚಿಸಬೇಕು ಎಂದು ಹೇಳುತ್ತೇನೆ.

ಈಗ ಕೆಲವಾರು ಸ್ಥಳಗಳಲ್ಲಿ ಮಳೆಯೇ ಬಂದಿಲ್ಲ ಅಹಾರದ ದಾರಣೆವಾಸಿ ಹೆಚ್ಚಿರುವುದು ಒಂದು ಭಾಗ ಮತ್ತು ಐವತ್ತು ಭಾಗ ಮತ್ತು ಇವತ್ತು ಜನರಿಗೆ ಮಾತನಾಡುವವರು ಮಾತನಾಡಲಿ ಅಹಾರದ ಅಭಾವಾಕ್ಕೆ ನನ ಕಾರಣ ಗಳಿವೆ. ನನ್ನ ಭಿಪ್ರಾಯದಿಂದ ನಾನು ಹೇಳುವುದಾದರೆ ದೇಶದಲ್ಲಿ ಮಳಕಾಲ್ಮುರು, ಹಿರಿಯೂರು, ಶಿರಾ, ಪವಗಡ, ಮಧುಗಿರಿ ಮತ್ತು ಕೊರಟಗೆರೆ ತಾಲ್ಲೂಕುಗಳಲ್ಲಿ ತುಂಬ ಕಷ್ಟದಲಿದ್ದೆ ಜನರಿಗೆ ತಕ್ಕ ಏರ್ಪಾಡು ಮಾಡಬೇಕು ಎಂದು ಸುಮಾರು ಒಂಭತ್ತು ತಿಂಗಳಲ್ಲಿ ಅಥವಾ ಹತ್ತನೆ ತಿಂಗಳಲ್ಲಿ ಹೋಗದೆ ಇರುವುದರಿಂದ ಯಾರಾದರೂ ಬಂದು ನೋಡಿ. ವಿರುದ್ಧ ಭಾವನೆಯಿಂದ ಮಾತನಾಡಬೇಡಿ ಎಂದು ಕೂಡ ಹೇಳಿದೆ. ಧಾರಣಿವಾಸಿ ಹೆಚ್ಚಿದರೂ ರೈತರಿಗೆ ಬೆಳೆದವರಿಗೆ ಅನುಕೂಲವಾಗಿದೆಯೇನು? ಜನರಿಗೂ ತೊಂದರೆಯಗಿದೆ ಆದರಿಂದ ಜನರಿಗೆ ಉಪಯೋಗವಾಗುತ್ತದೆ ಎಂದು ಹೇಳುವುದಕ್ಕಾಗುವುದಿಲ್ಲ ಏಕೆಂದರೆ ಒಂದು ವಿಧವಾದ ಅಹಾರ ಪದರ್ಾಥಗಳು ಹೆಚ್ಚಾಗಿ ಬೆಳೆದರೂ ಬೇರೆ ಪದಾರ್ಥಗಳಿಗೆ ಬೆಲೆ ಹೆಚ್ಚಿ ತೊಂದರೆಯಾಗುತ್ತದೆ. ಈ ಸಂಭಂಧದಲ್ಲಿ ಕಾಗದವನ್ನು ಮುಖ್ಯಮಂತ್ರಿಗಳಿಗೆ ಸಂಬಂದಪಟ್ಟ ಇಲಾಖೆಗಳಿಗೆ ಬರೆದುಕಳುಹಿಸಲಾಯ್ತು ಕೆಲವರು ಉತ್ತರ ಕೊಡಲಿಲ್ಲ ಕೆಲವರು ಇದರ ಬಗ್ಗೆ ಕಾರ್ಯಕ್ರಮ ಹೇಗೆ ತೆಗೆದುಕೊಳ್ಳಬೇಕೆಂದು ನನ್ನನ್ನೇಕೇಳಿದ್ದಾರೆ. ಇಂಥ ಆಭಾಸಗಳು ನಮ್ಮ ಸರ್ಕಾರದಲ್ಲಿ ಎಲ್ಲಿಯವರೆಗೆ ಇರುತ್ತವೆಯೋ ಅಲ್ಲಿಯವರಎಗೆ ಖಂಡಿತವಾಗಿ ಪರಿಸ್ಥತಿ ಉತ್ತಮವಾಗುವುದಿಲ್ಲ, ನಕಲಿ ಕುಣಿತ ಕುಣಿಯುಬೇಕೆಂಬ ಮನಸ್ಸು ಬೆಳೆದವುವರೆಗೆ ಖಂಡಿತ ಸಾಕಷ್ಟು ಪ್ರಯೋಜನವಾಗುವುದಿಲ್ಲ ನನಗೆ ಬಂದಿರುವ ಕಾಗದದ ವಿಚಾರ ಹೇಳುತ್ತೇನೆ.

ಇಲ್ಲಿಯವರೆಗೆ ಇವರು ಸರಕಾರ ನೆಡೆಸಿಕೊಂಡು ಬಂದಿರತಕ್ಕ ವಿಧಾನವನ್ನು ನೋಡಿ ನೋಡಿ ನಮಗೆ ಸಕಾಗಿಹೋಗಿದೆ. ಈ ಸಂದರ್ಬದಲ್ಲಿ ಇನ್ನೊಂದು ವಿಷಯವನ್ನು ಹೇಳಬೇಕಾಗಿದೆ. ಬಿಜಾಪುರ ಜಿಲ್ಲೆ ನಾಲ್ಕು ತಾಲ್ಲೂಕುಗಳಲ್ಲಿ ಬರಗಾಲವಿದೆ ಎಂದು ಮುಖ್ಯ ಮಂತ್ರಿಗಳು ಹೇಳಿದ್ದಾರೆ. ಆದರೆ ಸರಕಾರದ ಪ್ರಕಟನೆಯ ಪ್ರಕಾರ ಹಾಗೆ ಬರಗಾಲ ಪರಿಸ್ಥಿತಿಯಿಲ್ಲವೆಂದು ಒಂದುಕಡೆ ಹೇಳಿದ್ದಾರೆ. ಈ ರೀತಿ ವಿರೋಧವಾಗಿರತಕ್ಕ ಹೇಳಿಕೆಗಳನ್ನು ಕೊಡುವುದು ಬಹಳ ವ್ಯಸನವನ್ನುಂಟುಮಾಡುತ್ತದೆ. ಈ ರೀತಿ ಹೇಳುವುದಕ್ಕೆ ಯಾರು ಜವಾಬ್ದಾರರಾಗಿದ್ದಾರೆ? ಮಂತ್ರಿಮಂಡಲದಲ್ಲಿ ಜಾಯಿಂಟ್ ರೆಸ್ಪಾನ್ಸಿಬಿಲಿಟಿ ಇಲ್ಲವೇ? ಈ ಬರಗಾಲ ಪರಿಸ್ಥಿತಿಯ ವಿಚಾರ ಮಂತ್ರಿಗಳಿಗೆ ಕಾಗದ ಬರೆದರೆ ಅದಕ್ಕೆ ಉತ್ತರವೇ ದೊರೆಯುವುದಿಲ್ಲ. ಇನ್ನು ಆಹಾರಧಾನ್ಯಗಳ ಉತ್ಪತ್ತಿ ಮತ್ತು ವ್ಯವಸಾಯಾಭಿವೃದ್ಧಿ ಇವುಗಳ ಬಗ್ಗೆ ತಪ್ಪು ಅಂಕಿಅಂಶಗಳನ್ನು ಜನತೆಯ ಮುಂದೆ ಇಡುತ್ತಾರೆಂದು ಬಹಳ ವ್ಯಸನದಿಂದ ಹೇಳಬೇಕಾಗಿದೆ. ಹೀಗೆ ಆದರೆ ನಾವು ಯಾವ ಅಂಕಿಅಂಶಗಳನ್ನು ನಂಬಿಕೊಂಡು ಬದುಕಬೇಕು? ಜನತೆಗೆ ಕಷ್ಟ ಬಂದರೆ ಅದನ್ನು ಸರಕಾರ ನಿವಾರಣೆ ಮಾಡಬೇಕು. ಈ ದೃಷ್ಟಿಯಿಂದ ಈ ವಿಚಾರವನ್ನು ಸರಕಾರದ ಗಮನಕ್ಕೆ ತರುತ್ತಿದ್ದೇನೆ. ಇಂಥ ತಪ್ಪು ಅಂಕಿಅಂಶಗಳನ್ನು ಏತಕ್ಕಾಗಿ ಒದಗಿಸುತ್ತೀರಿ! ಇಂಥ ತಪ್ಪು ಅಂಕಿಅಂಶಗಳನ್ನು ಒದಗಿಸುವ ಇಲಾಖೆಯನ್ನು ಮುಗಿಸಿಬಿಡುವುದೇ ಒಳ್ಳೆಯದಲ್ಲವೆ! ತಪ್ಪು ಅಂಕಿಅಂಶಗಳನ್ನು ಒದಗಿಸಿ ಕೊಡುತ್ತಿದ್ದರೂ ಸಹ ಇಲಾಖೆಯಲ್ಲಿಯ ಅಧಿಕಾರಿಗಳಿಗೆ ಸಂಬಳಕೊಟ್ಟು ಇಂಥ ಕಷ್ಟವನ್ನು ಜನತೆ ಎಷ್ಟು ದಿವಸ ಅನುಭವಿಸಬೇಕೋ ಎಂಬುದನ್ನು ಹೇಳುವುದಕ್ಕಾಗುವುದಿಲ್ಲ. ಇದನ್ನು ಹೇಳಲು ಬಹಳ ವ್ಯಸನವಾಗುತ್ತದೆ. 'Food Production and Agricultural Development in Mysore State' ಎಂಬ ಒಂದು ಪುಸ್ತಕವನ್ನು ನಮಗೆ ಕೊಟ್ಟಿದ್ದಾರೆ. ಅದರಲ್ಲಿ ಅನೇಕ ತಪ್ಪುಗಳು ಇವೆ. ಈ ಪುಸ್ತಕದಲ್ಲಿರುವ ಅಂಕಿಅಂಶಗಳ ಪ್ರಕಾರ ಇಷ್ಟು ಟನ್ ಆಹಾರಧಾನ್ಯ ಬೆಳೆದಿದ್ದಾರೆ, ಪರಿಸ್ಥಿತಿ ಸಮಾಧಾನಕಾರಕವಾಗಿದೆ ಎಂದು ಅದರಲ್ಲಿ ತೋರಿಸಿದ್ದಾರೆ. 1952 ನೇ ಇಸವಿಯಲ್ಲಿ ಆಹಾರದ ಕೊರತೆ ನೀಗಿಬಿಡುತ್ತದೆಂದು ಹೇಳಿದ್ದರು. ಆದರೆ ಮೊದಲನೆಯ ಪಂಚವಾರ್ಷಿಕ ಯೋಜನೆ ಮುಗಿದು ಈಗಾಗಲೇ ಎರಡನೆಯ ಪಂಚವಾರ್ಷಿಕ ಯೋಜನೆ ನಡೆದಿದೆ. ಆದರೆ ಇನ್ನೂವರೆಗೆ ಆಹಾರದ ಕೊರತೆಯನ್ನು ನೀಗಿಸುವುದು ಆಗಿಲ್ಲ. ಮಾನ್ಯ ಮಂತ್ರಿಗಳಾದ ಶ್ರೀ ಚನ್ನಬಸಪ್ಪನವರು ಅಂಕಿಅಂಶಗಳನ್ನು ಬಹಳ ಧೈರ್ಯವಾಗಿ ಹೇಳಿದ್ದೇ ಹೆಳಿದ್ದು. ಅದರ ಅಂಕಿಅಂಶಗಳನ್ನು ಕೇಳಿ ಕೇಳಿ ಅವರು ನಕ್ಕದ್ದು ನನಗೆ ನೆನಪಿದೆ. ಆದುದರಿಂದ ಇಂಥ ಅಂಕಿ ಅಂಶಗಳನ್ನು ನಂಬುವುದಕ್ಕಾಗುವುದಿಲ್ಲ. ಇಂಥ ಅಂಕಿಅಂಶಗಳನ್ನು ಜನರ ಮುಂದೆ ಇಟ್ಟು ಪರಿಸ್ಥಿತಿ ಸಮಾಧಾನಕರವಾಗಿದೆ ಎಂದು ಹೇಳಿಕೆಯನ್ನು ಕೊಟ್ಟು ರಾಜಿ, ಹಿಂಗಾರಿ ಬೆಳೆಯ ಬಗ್ಗೆ ಆಂದೋಲನ ನಡೆದಿದೆ. ಎಂದು ಏನೇನೋ ಹೇಳಿದರು. ಅಕ್ಕಿಯ ಉತ್ಪತ್ತಿ ಇಷ್ಟು ಸಾವಿರ ಟನ್ ಆಗಿದೆ ಎಂದು ಹೇಳಿದರು ಅವರ ವಿವರ ಈ ರೀತಿ ಇದೆ.

| | ಎಕರೆ ಭೂಮಿಯಲ್ಲಿ | ಟನ್ ಉತ್ಪತ್ತಿ |
|---|---|---|
| ಜೋಳ | 63.14.348 | 10.28.924 |
| ಅಕ್ಕಿ | 22.02.137 | 10.91.307 |
| ರಾಗಿ | 20.16.400 | 5,97,448 |

ಈ ಹೇಳಿಕೆಯು ಅಷ್ಟುತೃಪ್ತಿಕರವಾಗಿಲ್ಲ. ಇಂಥ ಅಂಕಿಗಳನ್ನು ಏತಕ್ಕೆ ಕೋಡಬೇಕು? ಇರತಕ್ಕ ವಾಸ್ತವಾಂಶವನ್ನು ಹೇಳಬೇಕು. ಮೊದಲು ನಮ್ಮ ರಾಜ್ಯ ಸಣ್ಣದಾಗಿತ್ತು ಈಗ ವಿಶಾಲ ಮೈಸೂರು ರಾಜ್ಯ ರಚಿತವಾದಮೇಲೆ ಎರಡುಕೋಟಿ ಜನಸಂಖ್ಯೆಯಾಗಿದೆ. ಸಣ್ಣ ಮೈಸೂರು ರಾಜ್ಯವಿದ್ದಾಗ ಎಷ್ಟು ಅಹಾರದ ಧಾನ್ಯ ಉತ್ಪತ್ತಿಯಾಗುತ್ತಿದ್ದಿತೋ ಅದಕ್ಕಿಂತ ಹೆಚ್ಚಾಗಿ ಈಗ ವಿಶಾಲ ಮೈಸೂರು ರಾಜ್ಯದಲ್ಲಿ ಊತ್ಪತ್ತಿಯಾಗುತ್ತಿಲ್ಲವೇ ಎಂದು ಕೇಳಬೇಕಾಗುತ್ತದೆ. ಹಿಂದಿನ ಲೆಕ್ಕದ ಪ್ರಕಾರ ಹಳೆಯ ಮೈಸೂರು ರಾಜ್ಯದಲ್ಲಿ 65 ಲಕ್ಷ 93 ಸಾವಿರ ಎಕರೆ ಭೂಮಿಯಲ್ಲಿ ಬೆಳೆಯಲಾಗುತ್ತಿದ್ದಿತು. ಈಗ ಎರಡರಷ್ಟು ದೊಡ್ಡದಾದ ವಿಶಾಲ ಮೈಸೂರು ರಾಜ್ಯವಾದಮೇಲೆ 65,57,921 ಎಕರೆ ಭೂಮಿಯಲ್ಲಿ ಬೆಳೆಯಲಾಗುತ್ತಿದೆ ಎಂದು ಹೇಳಲಾಗಿದೆ.

1954-55 ರಲ್ಲಿ 63,99,000 ಎಕರೆ ಜೋಷಳ ಹಾಕಿದ್ದೀರಿ. ಆ ಕಡೆಯಿಂದ ಬಂದಿರತಕ್ಕ ಒಂದು ಕೋಟಿ ಜನರು ಏನೋ ಬೆಳೆಯಲಾಗುತ್ತಿದೆ ಎಂದು ಹೇಳಲಾಗಿದೆ.

ಶ್ರೀ ಕೆ.ಎಫ್. ಪಾಟೀಲ್_ ಇಲ್ಲಿಯತನಕ ತಾವು ಹಳೆಯ ಮೈಸೂರಿನಲ್ಲಿ ಏನೇನುಮಾಡಿದ್ದೀರಿರೆಂಬ ಫಿಗರ್ಸ್‌ನ್ನು ವಿರ್ಮಶೆ ಮಾಡಿದ್ದೇನೆ.

ಶ್ರೀ ಕೆ. ಕೆಂಚಪ್ಪ_ ಈ ರೀತಿ ಅಂಕಿ ಅಂಶ ಹೇಳುವುದರ ಮೂಲಕ ಧಾರಾಕಾರವಾಗಿ ಹೇಳಿ ಮನೆಗೆ ಹೊಗುತ್ತೇವೆ. ಎಂದು ತಿಳಿದು ತಾವು ಅಹಾರದ ಸಮಸ್ಯೆಯ ವಿಷಯದಲ್ಲಿ ಒಂದು ಅಭಿಪ್ರಾಯ ಕೊಟ್ಟಿದ್ದೀರಿ ಅದರ ಪ್ರಕಾರ ಟ್ರಾಕ್ಟರ್ಸ್ ಕೊಡುತ್ತೇವೆ, ಎಂದರೆ ಸುಧಾರಿಸಿದ ರೀತಿಯಲ್ಲಿ ಆಧುನಿಕರೀತಿಯಲ್ಲಿ ವ್ಯವಸಾಯವನ್ನು ಅಭಿವೃದ್ಧಿ ಪಡಿಸುತ್ತೇವೆ ಎನ್ನುವುದನ್ನು ಸಹಿತ ತಾವು ಹೇಳಿದ್ದೀರಿ. ಒಂದಾನೊಂದು ಕಾಲದಲ್ಲಿ ಒಂದು ಪ್ರಶ್ನೆಗೆ ಉತ್ತರ ಕೊಡುವಾಗ ಇಲ್ಲಿಯೇ ಹೀಗೆ ಉತ್ತರ ಕೊಟ್ಟಿದ್ದೀರಿ. ಬಡ್ಜೆಟ್ ಸರ್ವೆ 1958 1601, 3 ಆಕ್ಟ್ ಅದರಲ್ಲಿ ಹೀಗೆ ಬರೆದಿದ್ದೀರಿ – ಆಧುನಿಕ ರೀತಿಯಲ್ಲಿ ಬೇಕಾದಷ್ಟು ವ್ಯವಸ್ಥೆ ಮಾಡಿ ಬಹಳವಾಗಿ ಬೆಳೆಯುತ್ತಾ ಇದ್ದೇವೆ ಬಹಳವಾಗಿ ಸಾಹಸ ಪಟ್ಟಿದ್ದೇವೆ ನಾವು ಪಟ್ಟಷ್ಟು ಸಾಹಸ ಬೇರೆ ಯಾರ ಕೈಯಲ್ಲೂ ಅಗುವುದಿಲ್ಲ ಎಂದು ಹೇಳಿದ್ದೀರಿ ಅದೇರೀತಿ ನಮ್ಮ ಸಾಹಸದ ಮುಂದೆ ಯಾರ ಸಾಹಸವೂ ನಿಲ್ಲುವುದಿಲ್ಲ ಎಂದು ಚೆನ್ನ ಬಸಪ್ಪನವರುಹೇಳಿ ನಮ್ಮನ್ನು ಸಮಾಧಾನ ಪಡಿಸಿದರು. ಅಪ್ರಶ್ನೆಗೆ ಉತ್ತರದಲ್ಲಿ ಮೈಸೂರು ಸಂಸ್ಥಾನದಲ್ಲಿರತಕ್ಕ ಟ್ರ್ಯಾಕ್ಟರುಗಳು ಒಟ್ಟು 187, ಅವುಗಳಲ್ಲಿ ಕೆಲಸ ಮಾಡುವುದು 31. ಕೆಲಸ ಮಾಡದೇ ಇರುವುವು 156. ಅದಕ್ಕೇ ಒಂದು ಫ್ಯಾಕ್ಟರಿ ಎಸ್ಟಾಬ್ಲಿಷ್‌ಮೆಂಟ್ ಈ ರೀತಿ ಆಧುನಿಕ ರೀತಿಯಲ್ಲಿ. ನಮ್ಮ ಜಮೀನುಗಳ ಮೂಲಕ

ಬರೆದಿರುವುದರಿಂದ ಇದು ಎಷ್ಟರಮಟ್ಟಿಗೆ ಸರಿ ಎನ್ನುವ ವಿಚಾರವನ್ನು ತಮ್ಮ ಗಮನಕ್ಕೆ ತರುತ್ತೇನೆ.

ಮೈಸೂರು ಅಗ್ರಿಕಲ್ಚರಲ್ ಕ್ಯಾಲೆಂಡರ್ ಪುಟ 35 ರಲ್ಲಿ ಈ ರೀತಿ ಬರೆದಿದ್ದಾರೆ. Irrigation facilities. there is one big dam Vani Vilas Sagar in Hiriyur Taluk which irrigates nearly 18.000 acre "ಇದಕ್ಕಿಂತ" I use that word 'ಅನ್ಯತ' with extreme consciousness in me ಮತ್ತೊಂದಿಲ್ಲ ಎಂದು ಧಾರಾಳವಾಗಿ ಹೇಳುತ್ತೇನೆ ಅಲ್ಲಿರುವುದು ಅನ್ ಅಥರೈಸ್ಡ್ ಕಲ್ಟಿವೇಷನ್ ಸೇರಿಸಿಕೊಂಡರೂ 11,000 ಎಕರೆ ಅಚ್ಚುಕಟ್ಟು ಸಹ ಆಗುವುದಿಲ್ಲ 1928ರ ಆರ್ಡ್ಕರು ಇನ್ನೂವರೆಗೂ ಜಾರಿಯಲ್ಲಿದೆ. ಬೇಕಾದಷ್ಟು ಯಥೇಚ್ಚವಾಗಿ ನೀರು ಕೊಡುತ್ತೇವೆ ಎಂದು ಎಂಟು ದಿವಸ ನೀರು ನಿಂತಿರಬೇಕು. ನೀರೇ ಇಲ್ಲ. ಬಹಳ ಕಠಿಣ ಪರಿಸ್ಥಿತಿ ಇದೆ. 1928 ರಲ್ಲಿ ಇದೆ. ಇಷ್ಟು ಉತ್ಪ್ರೇಕ್ಷೆಯಿಂದ ಬರೆಯಾಬಾರಾದಗಿತ್ತು ಬರೆದು ಅದನ್ನೇ ಸಮರ್ಥನೆ ಮಾಡುವುದು ಆಮೂಲಕ ನಾವು ದಕ್ಷತೆಯಿಂದ ಕೆಲಸ ಮಾಡಿದ್ದೇವೆ ಎಂದು ಹೇಳುವುದು ಒಳ್ಳೆಯದಲ್ಲ. ಇವತ್ತು ಬಹಳ ಕಠಿಣ ಪರಿಸ್ಥತಿ ಬಂದಿದೆ. ಇಂಥ ಪರಿಸ್ಥಿತಿಯಲ್ಲಿ ರಾಬೀ ಕ್ಯಾಂಪೇನ್, ಹಿಂಗಾರು ಬೆಳೆ ಆಂದೋಲನ ಕಾರ್ಯ ಪ್ರಾರಂಭವಾದ 1958 ರ ಸೆಪ್ಟಂಬರ್ 10 ನೆಯ ತಾರೀಖಿನ ಹಿಂದಿನಿಂದ ಫಿಗರ್ಸ್ ಕೊಟ್ಟಿದ್ದೀರಿ. ಅಲ್ಲಿಂದೀಚೆಗೆ ಏನು ಬೆಳೆಯುತ್ತಾರೋ ಏನೋ ಗೊತ್ತಿಲ್ಲ. 'Fertilisers sufficient for covering the selected area has been obtained and is under distribution ಎಂದು ಹೇಳುತ್ತೀರಿ. 1945 ರಿಂದ 1948 ರ ವರೆಗೆ ಕಾಂಗ್ರೆಸ್ ಸರ್ಕಾರ ಬರುವುದಕ್ಕೆ ಮುಂಚೆ ರಾಗಿ, ಜೋಳ, ಏಳು-ಎಂಟು ಸೇರು, ಅಕ್ಕಿ ಮೂರು-ಮೂರೂವರೆ ಸೇರು ಇದ್ದಾಗ ಟನ್ ಒಂದಕ್ಕೆ ಹಿಂಡಿಯನ್ನು 85 ರೂಪಾಯಿನವರೆಗೂ ಕೊಂಡು ಕೊಂಡು ಸಬ್ಸಿಡೈಸ್ ಮಾಡಿ ಮಾರಾಟ ಮಾಡಿದರು. ಈಗ ತಾವು ಮಾಡಿರುವುದು ಏನು ಎಂಬುದನ್ನು ಓದುತ್ತೇನೆ. ನಿನ್ನೆತಾನೆ ಪುಸ್ತಕ ತೆಗೆದುಕೊಂಡುಬಂದೆ. ಇದರ ಪ್ರಕಾರ Presowing cultivation with improved implements has been done on 9, 79, 36 acres' ಎಂದು ಹೇಳಿದ್ದಾರೆ. ಇದರಿಂದ ಏನೂ ಪ್ರಯೋಜನವಾಗವುದಿಲ್ಲ ಮತ್ತು ಎಂದೇ ಹೇಳುತ್ತಾರೆ. ಎಷ್ಟೋ ಎಕರೆಗೆ ಕೊಟಿದ್ದಾರೆ ಅದೂ ಪ್ರಯೋಜನವಾಗುವುದಿಲ್ಲ ಇಲ್ಲಿ ಹೇಳಿರುವುದು retotal area in 17,32,714 acres pre- treated seeds have been used ಎಂದು. ಅರು ಪಲ್ಲಾದಂತೆ ಲೆಕ್ಕ ಹಾಕಿದರೂ ಕೂಡ 1.03.96.284 ಪಲ್ಲಾ ಬರುತ್ತದೆ. ಇಷ್ಟು ಬೆಳೆಯುತ್ತೀರಾ ಸ್ವಾಮಿ? ಒಂದು ಎಕರಿ ಗೆ ಆರು ಪಲ್ಲಾ ಸರಾಸರಿ ಇಟ್ಟಿದ್ದಾರೆ ಅದರ ಮೇಲೆ ಚಿತ್ರದುರ್ಗದಲ್ಲಿ ಹಬಳ ದಿವಸಗಳಿಂದ ನೇಗಿಲು ಗುಳ, ಪಟ್ಟಿ ವಗ್ಯೆರ ಇಲ್ಲವೆಂದು ಬರೆದು ತಿಳಿಸಿದ್ದಾರೆ. ಆದರೂ ಸಹಿತ ಸರಿಯಾಗಿ ವ್ಯವಸಾಯದ ಉಪಕರಣಗಳು ಇಲ್ಲ. 1958-59 ನೆಯ ಇಸವಿಯಲ್ಲಿ ಇಷ್ಟೆಲ್ಲ ಆದಮೇಲೆ ಸೆಪ್ಟೆಂಬರ್ ತಿಂಗಳಿನಿಂದೀಚೆಗೆ ಆಗಿರುವುದನ್ನು ಮಾತ್ರ ತಮ್ಮ ಲಿಸ್ಟಿನಲ್ಲಿ ಕೊಟ್ಟಿರುವುದು. ಎಷ್ಟು

ಮಾತ್ರ ವ್ಯವಸಾಯಕ್ಕೆ ಸಹಾಯಮಾಡುತ್ತಿದ್ದಾರೆ ಎಂಬುದಕ್ಕೆ ಒಂದೇ ಒಂದು ಉದಾಹರಣೆಯನ್ನು ಕೊಡುತ್ತೇವೆ. ಚಿತ್ರದುರ್ಗ ಜಿಲ್ಲೆಗೆ ಎರಡು ಟರ್ನ್‌ಸೂಪರ್ ಕೊಟ್ಟಿದ್ದಾರೆ. ಇಷ್ಟು ಸಾಕೇ? ಈ ರೀತಿಯಾಗಿ ದೇಶದ ಅಹಾರ ಸಮಸ್ಯೆಯನ್ನು ಬಗೆಹರಿಸುದಕ್ಕೆ ಹೊರಟಿದ್ದಾರೆ. ಈ ರೀತಿಯಾಗಿ ಕೆಲಸಮಾಡುವುದರಿಂದ ನಿಜವಾಗಿಯೂ ದೇಶದ ಅಹಾರ ಸಮಸ್ಯೆಯನ್ನು ಸರ್ಕಾರದವರು ಬಗೆಹರಿಸುತ್ತಾರೆಯೇ ಎನ್ನುವ ವಿಷಯವನ್ನು ತಾವೆಲ್ಲರೂ ಅಲೋಚನೆ ಮಾಡಬೇಕಾಗಿದೆ.

ಇದರ ಮೇಲೆ ಇರುವಾಗ ಏನೇನು ಕೆಲಸ ಮಾಡಬೇಕೆನ್ನುವ ವಿಚಾರದಲ್ಲಿ ಹೀಗೆ ಹೀಗೆ ಮಾಡಬೇಕು ಎನ್ನುವ ವಿಚಾರದಲ್ಲಿ ಮತ್ತೆ ಏಕೆ ಕೇಳಿದರೋ ಗೊತ್ತಾಗಲಿಲ್ಲ ಏನೋ ಒಂದು ಕಾಗದವನ್ನು ಬರೆದಿದ್ದಾರೆ ಅದಕ್ಕೊಂದು ಉತ್ತರವನ್ನು ಬರೆಯೋಣವೆಂದೆ ಹೀಗೆ ಮಾಡಿರಬಹುದು ಅಥವಾ ಹೀಗೆ ಪತ್ರ ವ್ಯವಹಾರದಲ್ಲಿಯೇ ಕಾಲವನ್ನು ಕಳೆಯ ಬಹುದು ಎನ್ನುವ ಉದ್ದೇಶದಿಂದ ಮಾಡಿರಬಹುದು. ಯಾವುದೂ ಸರಿಯಾಗಿ ಗೊತ್ತಾಗುವುದಿಲ್ಲ. ವಿದ್ಯುಚ್ಛಕ್ತಿ ಇಲಾಖೆಯ ಆಡಳಿತವು ಎಂದು ವಿದುಚ್ಛಕ್ತಿ ಬೋರ್ಡಿಗೆ ಹೋಯಿತೋ ಅಂದೆ ಮೈಸೂರು ದೇಶದಲ್ಲಿ ವಿದುಚ್ಛಕ್ತಯ ಬಳಕೆಯಿಂದ ಆಗುತ್ತಿದ್ದ ಅಹಾರದ ಉತ್ಪತ್ತಿ ಕಡಮೆಯಾಯಿತು ಎಂದು ಆಗುತ್ತಿದ್ದ ಅಹಾರದ ಉತ್ಪತ್ತಿ ಕಡಮೆಯಾಯಿತು ಎಂದು ತಿಳಿದುಕೊಂಡಿದ್ದೇನೆ ಅವರು ಇಟ್ಟಿರತಕ್ಕ ಖರ್ಚುಗಳು ಇನ್ನು ಮೇಲೆ ರಾತ್ರಿ ವೇಳೆಯಲ್ಲಿ ಮಾತ್ರವಿದ್ಯುತ್ತನ್ನು ಉಪಯೋಗಿಸಬೇಕು ಆ ರೀತಿ ಮಾಡಲು ಒಪ್ಪಿ ಕೊಂಡರೆ ಮಾತ್ರ ಆ ರೀತಿ ಮಾಡಲು ಒಪ್ಪಿ ಕೊಂಡರೆ ಮಾತ್ರ ವಿದ್ಯುತ್ತನ್ನು ಕೊಡುತ್ತೇವೆ.ಎಂಬುದು ಪಂಪ್ ಸೆಟ್ ಕೊಡುತ್ತೇವೆ ಅದು ಕೊಡುತ್ತೇವೆ. ಇದುಕೊಡುತ್ತೇವೆ ಎಂದು ಹೇಳುತ್ತಾರೆ ರಾತ್ರಿಯವೇಳೆಯಲ್ಲಿ ವಿದ್ಯುತ್ತನ್ನು ಉಪಯೋಗಿಸಿ ನೀರು ಹಾಯಿಸಿಕೊಂಡು ವ್ಯವಸಾಯ ಮಾಡಿ ಎಂದು ಅನುಭವವಿರುವವರು ಮಾತನಾಡುವ ಮಾತುಗಳೇ ಸ್ವಾಮಿ. ಬೋರ್ಡಿನಲ್ಲಿ ಎಷ್ಟು ಜನ ವ್ಯವಸಾಯದಲ್ಲಿ ಅನುಭವ ಹೊಂದಿದವರಿದ್ದಾರೆ ಈ ಇಲಾಖೆಯ ಅಧಿಕಾರವರ್ಗವನ್ನು ಕೇಳುವಹಾಗೆಯೇ ಇಲ್ಲ. ಬೇಕಾದವರಿಗೆ ಬೇಕಾದಷ್ಟು ವಿದ್ಯುತ್ತನ್ನು ಕೊಡುವಾಗ ಎಷ್ಟು ನಿರ್ಬಂಧಗಳನ್ನು ಹಾಕುತ್ತಿದ್ದಾರೆ. ವಿದ್ಯುತ್‌ಲೈನನ್ನು ಹಾಕಬೇಕಾದರೆ ಒಂದು ಎಚ್.ಪಿ.ಗೆ ಒಂದು ಸಾವಿರ ರೂಪಾಯಿಗಳಿಗೆ ಹಚ್ಚಿಸಿದ್ದಾರೆ. ಎಷ್ಟು ವಿದ್ಯುಚ್ಛಕ್ತಿ ಬೇಕಾಗುತ್ತದೆಂದು ಅರ್ಜಿಗಳು ಬಂದ ನಂತರ ಇಷ್ಟು ಅರ್ಜಿಗಳವರು completion certificate ಕೊಡಬೇಕು ಎಂದಿದೆ. ಹಿಂದೆ 75–90% ವರೆಗೂ completion ಸರ್ಟಿಫೀಕೇಟ್ ಕೊಡಬೇಕಾಗಿತ್ತು ಈಗ ಪೂರ್ಣ ದೊಡ್ಡ ಮನಸ್ಸು ಮಾಡಿ ಶೇಕಡ 70 ರಷ್ಟು ಜನ ಸರ್ಟಿಫಿಕೇಟ್ ಕೊಟ್ಟರೆ ಸಾಕು ಎಂದು ಹೇಳಿದ್ದಾರೆ. ಇದರಿಂದ ವ್ಯವಸಾಯಾಭಿವೃದ್ಧಿಯಾಗುತ್ತದೆಯೇ ಎಂದು ಕೇಳುತ್ತೇನೆ. ಎಲ್ಲಿ ವ್ಯವಸಾಯಾಭಿವೃದ್ಧಿಯಾಗಬೇಕೋ ಅಲ್ಲಿಗೆ ಸರಿಯಾದ ಅನುಕೂಲತೆಗಳನ್ನು ಒದಗಿಸುತ್ತಿಲ್ಲ. ನಮ್ಮಲ್ಲಿ ದೊಡ್ಡ ದೊಡ್ಡ ಪ್ರಾಜೆಕ್ಟುಗಳನ್ನು ಕಟ್ಟುವುದು ನದಿಗಳಿಗೆ ಅಣೆಕಟ್ಟನ್ನು ಕಟ್ಟುವುದು ಇಂಥ ಕೆಲಸಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಾರೆ. Food

Grains Commissioner ಬಂದಿದ್ದಾಗ ತಪ್ಪು ಮಾಡಿದ್ದೇವೆಂದು ಭಾವನೆಯನ್ನು ಹೇಳದೆ ಇದ್ದರೂ ಸಹಿತ small projects, minorprojocts ಇಂಥವನ್ನು ಹೆಚ್ಚಾಗಿ ಇನ್ನಮುಂದೆ ತೆಗೆಕೊಳ್ಳತ್ತೇವೆಂದು ಹೇಳಿದರು. ಪಬ್ಲಿಕ್ ವರ್ಕ್ಸ್ ಇಲಾಖೆಯವರು small irigation works ಬಗ್ಗೆ ತೋರಿಸುತ್ತಿರತಕ್ಕ ಅನಾದರಣೆಯನ್ನು ನಾನು ಎಂದೂ ನೋಡಿರಲಿಲ್ಲ. ಗೌನಹಳ್ಳಿಕೆರೆ ಬೀರೆನಹಳ್ಳಿ ಕೆರೆ ಮತ್ತದಹಳ್ಳಿ ಕೆರೆ ಇವುಗಳು 1955 ನೆಯ ಇಸವಿಯಿಂದ ಇದುವರೆಗೂ ಆಗಿಲ್ಲ. ಮೊದಲು ಮಾಡಿದ್ದ ಅಂದಾಜುಗಳು ಈಗ ಆಗಬೇಕು financial sanction, technical sanction ಅಗಬೇಕು. ಒಟ್ಟುಯಾದಿ ಹೇಳುತ್ತಿರುವುದನ್ನು ನೋಡಿದರೆ ಉದ್ದೇಶ ಪೂರ್ವಕವಾಗಿಯೇ ಹೀಗೆಲ್ಲ ಮಾಡುತ್ತಿದ್ದಾರೆಂದು ಕಾಣುತ್ತದೆ. ನಾನು 1957 ನೆಯ ಇಸವಿಯಿಂದಲೂ ಇದುವರೆಗೂ ನಾನಾ ನಮೂನೆಯ ಕಾಗದಗಳನ್ನು ಬರೆದಿದ್ದೇನೆ. ಎಳ್ಳಷ್ಟೂ ಕೆಲಸ ನಡೆಯುತ್ತಿಲ್ಲ. ಹೀಗಾದರೆ ನಾವು ಏನು ಮಾಡುವುದಕ್ಕೆ ಆಗುತ್ತದೆ. ಪಬ್ಲಿಕ್ ವರ್ಕ್ಸ್ ಇಲಾಖೆಯಲ್ಲಿ ಇಲ್ಲವೇ ಸಡಿಲವಾಗಿದಯೇ ಪ್ರಾಯಶಃ ನಾವು ಹೇಳಿದ ಕೆಲಸಗಳನ್ನು ಮಾಡಿದರೆ ಸಾಕು ಉಳಿದುವನ್ನು ಏನು ಬೇಕಾದರೂ ಮಾಡಿಕೊಳ್ಳಲಿ ಎಂದು ತಿಳಿದು ಕೊಂಡಿದ್ದಾರೆಂದು ಕಾಣುತ್ತದೆ. ನಾನು ಬರೆದಿರುವ ಕಾಗದಗಳ ಮೂಲಕ ಸರ್ಕಾರದಿಂದ ನನಗೆ ಬಂದಿರುವ ಕಾಗದಗಳ ಮೂಲಕ ಈ ಅಂಶಗಳಲ್ಲಿ ಪ್ರತಿಯೊಂದು ಅಕ್ಷರವನ್ನೂ ರುಜುವಾತು ಮಾಡಿಕೊಡುತ್ತೇನೆ, ನಾನು ಪ್ರತಿಯೊಂದುದಾಖಲೆಗಳನ್ನೂ ಇಟ್ಟುಕೊಂಡಿರುವುದರಿಂದ ಇಷ್ಟು ಧೈರ್ಯವಾಗಿ ಹೇಳುತ್ತಿದ್ದೇನೆ. ನನ್ನ ಕ್ಷೇತ್ರವಾದ ಹಿರಿಯೂರು ತಾಲ್ಲೂಕಿನಲ್ಲಿ ಎಷ್ಟು ಕೆಲಸ ಮಾಡಿದ್ದೀರಿ ಯಾವ ಕೆರೆ ಕೆಲಸ ಮಾಡಿದ್ದೀರಿ ಗಾಯತ್ರಿ ಕೆರೆಯನ್ನು ಕಟ್ಟಲು 1938 ರಲ್ಲಿ ಮಂಜೂರು ಮಾಡಿದರು. ಅದರ ಕೆಲಸ ಪ್ರಾರಂಭವಾಗಿ ಈಗ ಮುಗಿಯುವುದಕ್ಕೆ ಬಂದಿದೆ, ತಮ್ಮ ಗತಿಯೂಮುಗಿಯುವುದಕ್ಕೆ ಬಂದಿದೆ ತಮ್ಮ ಗತಿಯೂ ಮುಗಿದುಹೋಯಿತು. ಈ ರೀತಿ ಅನಾದರಣೆಯಿಂದ ಕೆಲಸಮಾಡತಕ್ಕದು ಸರಿಯಲ್ಲ. ಅಲ್ಲಿ ಇಲ್ಲಿ ಬಂದು ಎಲ್ಲ ಕೊಡುತ್ತೇವೆ. ಬೇಕಾದಷ್ಟು ಬೆಳೆಯುತ್ತೇವೆಂದು ಹೇಳುತ್ತಾರೆ ಅದರ ಕಾರ್ಯತಃ ಒಂದೂ ನಡೆಯುತ್ತಿಲ್ಲ ಯೋಜನೆಯ ಅವಧಿಯೊಳಗಾಗಿ ಐದು ಲಕ್ಷ ಟನ ಗಿಂತ ಹೆಚ್ಚಿಗೆ ಮಾಡಬೇಕೆಂದು ಒಂದು ಇಟ್ಟು ಬರೆದಿದ್ದಾರೆ. ಇದು ಏನು ಬರವಣಿಗೆ ಸ್ವಾಮಿ ಅಲ್ಲಿ ಇಲ್ಲಿ ನೋಡಿಕೊಂಡು ಬರೆದಿದ್ದಾರೆ.

ಶ್ರೀ ಎಚ್. ಎಂ.ಚನ್ನ ಬಸಪ್ಪ:- ಏನು ಮಾಡಬೇಕೆಂದು ಹೇಳುತ್ತೀರಿ.

ಶ್ರೀ ಕೆ. ಕೆಂಚಪ್ಪ _ ಏನು ಮಾಡಬೇಕು ಎಂದರೆ ಯಾವಕಾಲಕ್ಕೆ ಯಾವಯಾವ ಕೆಲಸವನ್ನು ಮುಗಿಸ ಬೇಕು ಎಂದು ಇದೆಯೋ ಆ ಕಾಲಕ್ಕೆ ಆಯಾ ಕೆಲಸ ಅಗಲೀ ಯಾರೇ ಅಗಲೀ ಅದಕ್ಕೆ ಜವಾದ್ದಾರರಾದವರನ್ನು ಮನೆಗೆ ಕಳುಹಿಸಲೇಬೇಕು. ಮಂತ್ರಿಗಳಾದರೂ ಸಹಿತ ಖಂಡಿತವಾಗಿ ರಾಜೀನಾಮೆಯನ್ನುಕೊಟ್ಟು ಹೋಗಬೇಕು. ಬರೀ ಭಾಷಣಗಳನ್ನು ಧಾರಾಕಾರವಾಗಿ ಮಾಡುವುದರ ಮೂಲಕ ಯಾವ ಕಾರ್ಯವೂ ನಡೆಲಾರದು. ಇವೊತ್ತಿನ ದಿವಸ ಹಿರಿಯೂರು ತಾಲ್ಲೂಕಿನ ಧರ್ಮಪುರ ಹೋಬಳಿಗೆ

ಬೇರೆಮಾರ್ಗಇಲ್ಲ ಅಲ್ಲಿ ಮಳೆ ಸರಿಯಾಗಿ ಬೀಳುವುದಿಲ್ಲ. ಕೆರೆಇಲ್ಲ. ಝರಿ ಇಲ್ಲ. ಏನೂ ಇಲ್ಲ.

ಶ್ರೀ ಎಚ್.ಎಂ. ಚನ್ನನಸಪ್ಪ:– ಹಿರಿಯೂರು ತಾಲ್ಲೂಕಿನಲ್ಲಿ ವಾಣಿ ವಿಲಾಸ ಸಾಗರ ಸಮೃದ್ಧಿಯಾಗಿದೆ.

ಶ್ರೀ ಕೆ. ಕೆಂಚಪ್ಪ:– ಧರ್ಮಪುರ ಹೋಬಳಿಯ ವಿಷಯ ಹೇಳುತ್ತೀದ್ದೇನೆ. ವಾಣಿ ವಿಲಾಸ ಸಾಗರದ ಕೆಳಗೆ ತರಿಜಮೀನಿದ್ದರೆ. ಧರ್ಮಪುರ ಹೋಬಳಿ ಜನರ ವಿಷಯವೇನು? ಅವರ ಗತಿಯೇನಾಗಬೇಕು, ಸ್ವಾಮೀ?

ಒಂದು ವಿಷಯವನ್ನು ಸರ್ಕಾರದ ಮಂತ್ರಿಗಳು ಯೋಚನೆ ಮಾಡಬೇಕು. ದೊಡ್ಡ ದೊಡ್ಡ ಪ್ರಾಜೆಕ್ಟುಗಳನ್ನು ಕಟ್ಟುವುದಕ್ಕೆ ಹೋಗಿಸಣ್ಣ ಪ್ರಾಜೆಕ್ಟುಗಳನ್ನು ಕಟ್ಟದೆ ದೊಡ್ಡ ಬಂಡಾವಾಳಶಾಹಿಗಳ ಮನೋಭಾವವನ್ನು ತಮ್ಮಲ್ಲಿ ತಾಳಿದ್ದಾರೆ. ಇದರ ಮೂಲಕ socialistic pattern ಎನ್ನತಕ್ಕದ್ದನ್ನು ಸಾಧಿಸಲಾರಿರಿ socialistic pattern has been vulgarized ಎಂದು ಮಾತ್ರ ಹೇಳುತ್ತೇನೆ. ಇನ್ನು ಹೆಚ್ಚು ಹೇಳುವುದಕ್ಕಾಗುವುದಿಲ್ಲ. ದಯಮಾಡಿ ಇಂಥ ನಕಲಿ ಕುಣಿತ ಕುಣಿಯ ಬೇಡಿ. ಇದರ ಬದಲು ನಿಜವಾದ ಆಡಳಿತಮಾಡಿ ಬದುಕು ಮಾಡಿರಿ ಎಂದು ಹೇಳುತ್ತೇನೆ. ಸರ್ಕಾರದಲ್ಲಿ ತಾವು ಯಾವ ಒಂದು ಕಾರ್ಯಕ್ರವನ್ನು ಅಗಲಿ ನಿಗದಿಯಾದ ಕಾಲದಲ್ಲಿ ಇಷ್ಟೇ ದಿವಸದಲ್ಲಿ ಮುಗಿಸುತ್ತೇವೆಂದು ಹೇಳುತ್ತೀರೋ ಅಕಾರ್ಯವನ್ನು ಅಷ್ಟು ಕಾಲದಲ್ಲಿ ಮುಗಿಸದೆ ಹೋದರೆ ಆ ರೀತಿಯಾಗಲು ಜವಾಬಾರರಾದ ಅಧಿಕಾರಿಗಳನ್ನು ಕೆಲಸದಲ್ಲಿಟ್ಟುಕೊಳ್ಳತಕ್ಕದ್ದು ತಪ್ಪು. ಆ ರೀತಿ ಕೆಲಸವಾಗಲು ಬೇಕಾದ ವ್ಯವಸ್ಥೆಯನ್ನು ಮಾಡದಿರುವುದೂ ತಪ್ಪು, ಅಷ್ಟು ವ್ಯವಸ್ಥೆಯನ್ನು ಮಾಡದೆ ಹೋದರೆ ತಾವು ಇರುವುದೂ ತಪ್ಪು.

*   *   *   *   *

# ವಿದ್ಯಾಭ್ಯಾಸಕ್ಕಾಗಿ ಬಂಡವಾಳ?

23ನೇ ಜುಲೈ 1957

ಮಾನ್ಯ ಅಧ್ಯಕ್ಷರೇ, ಈ ಕಹಿ ವಾತಾವರಣದ ನಂತರ 1959-60ನೆಯ ಸಾಲಿನ ವಿದ್ಯಾಭ್ಯಾಸ ಖಾತೆಯ ಮುಂಗಡ ಡಿಮ್ಯಾಂಡಿನ ವಿಚಾರವಾಗಿ ಮಾತನಾಡಬೇಕೆಂದು ನಾನು ನಿಂತಿರುವಾಗ ಮೈಸೂರು ಸಂಸ್ಥಾನದ ವರಮಾನ ಐವತ್ತೈದು ಕೋಟಿ ಅರವತ್ತೆಂಟು ಲಕ್ಷ ತೊಂಭತ್ತೆಂಟು ಸಾವಿರ ರೂಪಾಯಿಗಳಲ್ಲಿ ಹನ್ನೊಂದು ಕೋಟಿ ಮುವತ್ತೆರಡು ಲಕ್ಷ ತೊಂಬತ್ತು ಸಾವಿರದ ಏಳುನೂರು ರೂಪಾಯಿಗಳನ್ನು ವಿದ್ಯಾ ಇಲಾಖೆಗೆ ಮೀಸಲಾಗಿಟ್ಟಿರುವುದು ನಮ್ಮ ವರಮಾನದಲ್ಲಿ 1/5 ನೆಯ ಭಾಗವಾಗುತ್ತದೆ. ಆದಕಾರಣ ಅದು ಶೇಕಡ 20 ರಷ್ಟು ಆಗುತ್ತದೆ. ಇಷ್ಟು ವರಮಾನದಲ್ಲಿ ಇಷ್ಟು ಮಾತ್ರ ವಿದ್ಯಾಭ್ಯಾಸ ಖಾತೆಗೆ ಖರ್ಚು ಮಾಡಿಕೊಂಡಿದ್ದು ನಮ್ಮ ದೇಶದ ವಿದ್ಯಾ ಪ್ರಗತಿಗೆ ಶುಭಸೂಚನೆಯಲ್ಲವೆಂದು ನಾನು ಹೇಳುತ್ತೇನೆ. ನನ್ನ ಅಭಿಪ್ರಾಯದಲ್ಲಿ ಇದು ಬಹಳ ಕಡಿಮೆ. ಇದನ್ನು ಇನ್ನೂ ಬಹಳ ಹೆಚ್ಚಿಗೆ ಮಾಡಬೇಕು. ಇಂತಹ ವರಮಾನದಲ್ಲಿ ಇಷ್ಟು ಕಡಿಮೆ ಖರ್ಚನ್ನು ಮುಂದುವರಿದ ದೇಶದಲ್ಲಿ ಯಾವ ಭಾಗದಲ್ಲೂ ಮಾಡುತ್ತಿಲ್ಲವೆಂದು ನಾನು ಹೇಳುತ್ತೇನೆ. ಮುಂದುವರಿದ ದೇಶಗಳ ಪ್ರಮಾಣಗಳನ್ನು ಹೇಳುವುದಕ್ಕೆ ಹೋಗುವುದಿಲ್ಲ. ಏಕೆಂದರೆ ಕಾಲ ಅತಿಯಾಗುತ್ತದೆ. ಆದ್ದರಿಂದ ನಾನು ಹೇಳುವುದು ಇಷ್ಟೇ. ನಮ್ಮ ಹಿಂದೂಸ್ತಾನದ ಕಾನ್‌ಸ್ಟಿಟ್ಯೂಷನ್‌ನಲ್ಲಿ ಉಲ್ಲೇಖಿಸಿರುವಂತೆ ನಾವು ಉದ್ದೇಶಪಟ್ಟಿರುವಂತೆ, ನಮ್ಮ ಉದ್ದೇಶ ಸಾಧನೆಗಾಗಿ ಯಾವ ಯಾವ ಖಾತೆಗೆ ಎಷ್ಟೆಷ್ಟು ಹಣವನ್ನು ಮೀಸಲಾಗಿಟ್ಟರೆ ಈ ಉದ್ದೇಶ ಸಾಧನೆಯಾಗುತ್ತದೆ ಎನ್ನುವ ವಿಚಾರವನ್ನು ಅನೇಕರು ಹೇಳಿದರು. ನಾನು ಆ ಬಗ್ಗೆ ಎರಡು ಮಾತುಗಳನ್ನು ಹೇಳಬಯಸುತ್ತೇನೆ. ಹಣ ಒದಗಿಸಿದ್ದರಲ್ಲಿ ಎಷ್ಟೆಷ್ಟು ಖರ್ಚು ಮಾಡಿದ್ದಾರೆ, ಎಷ್ಟೆಷ್ಟು ಹಣ ಖರ್ಚಾಗಿಲ್ಲ ಎನ್ನುವುದನ್ನು ಹೇಳಿದ್ದರೆ ಚೆನ್ನಾಗಿತ್ತು, ಅದನ್ನು ಒದಗಿಸಿಲಿಲ್ಲವೆಂದು ದು:ಖದಿಂದ ನಾನು ಹೇಳುತ್ತಿದ್ದೇನೆ. ಇದು ಬಹಳ ಜವಾಬ್ದಾರಿ ಖಾತೆ. ಇದರಿಂದ ದೇಶದ ಪ್ರತಿಯೊಬ್ಬನ ಉತ್ಪಾದನಾ ಶಕ್ತಿ ಅಭಿವೃದ್ಧಿ ಆಗಬೇಕೆಂದಿದೆ. ಇಂತಹ ಸಂದರ್ಭದಲ್ಲಿ ಯಾವ ಯಾವ ಬಾಬಿಗೆ ಎಷ್ಟೆಷ್ಟು ಖರ್ಚು ಮಾಡಬೇಕು, ಯಾವ ಯಾವ ಬಾಬಿಗೆ ಎಷ್ಟೆಷ್ಟು ಉಪಯೋಗ ಮಾಡಬೇಕು, ಕಾಲೇಜುಗಳಲ್ಲಿ ಯಾವ ಯಾವ ನಮೂನೆಯಾದಂಥ ವಿದ್ಯಾಭ್ಯಾಸವನ್ನು ಕಲಿಸಿಕೊಟ್ಟರೆ ಯಾವ ಯಾವ ರೀತಿಯಲ್ಲಿ ದೇಶದ ಉತ್ಪತ್ತಿ ಹೆಚ್ಚು ಮಾಡಬಹುದು. ನಿರುದ್ಯೋಗ ಸಮಸ್ಯೆಯ ಪರಿಹಾರ ಯಾವ ರೀತಿ ಮಾಡಬಹುದು, ಪ್ರತಿಯೊಬ್ಬ ಮನುಷ್ಯನ ಉತ್ಪಾದನಾ ಶಕ್ತಿ ಹೆಚ್ಚಬೇಕೆಂದು ಮುಂತಾಗಿ ನಿರ್ದಿಷ್ಟವಾದ ತೀರ್ಮಾನಗಳನ್ನು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೊಟ್ಟಿದ್ದರೂ ಕೂಡ ಈ ಆಯವ್ಯಯ ಪಟ್ಟಿಯಲ್ಲಿ ಒಂದು ರೀತಿಯಾಗಿ ಏನೋ ಇಷ್ಟಿಷ್ಟು ಹಣವನ್ನು ಕೊಟ್ಟಿದ್ದೇವೆಂದು ಹೇಳಿದ್ದಾರೆಯೇ ಹೊರತು ಇಷ್ಟಿಷ್ಟು ಭಾಗ ಖರ್ಚು ಮಾಡುತ್ತಿದ್ದೇವೆ ಎಂಬುದು ನಮ್ಮ

ಬಜೆಟ್ ಮೆಮೋರಾಂಡಮ್‌ನಲ್ಲಿಲ್ಲ. ಇದು ನನಗೆ ಸಮಾಧಾನಕರವಾಗಿಲ್ಲ. ಹೋದ ವರ್ಷ ಆಯವ್ಯಯದ ಅಂದಾಜಿನಲ್ಲಿ ಸುಮಾರು ನಲವತ್ತಾರು ಲಕ್ಷ ಹತ್ತು ಸಾವಿರ ರೂಪಾಯಿಗಳನ್ನು ಉಳಿತಾಯ ಮಾಡಿಕೊಂಡಿರುವುದಕ್ಕೆ ಯಾರೂ ಈ ಸರ್ಕಾರವನ್ನು ಕ್ಷಮಿಸಲಾರರು ಎಂದು ಹೇಳುತ್ತೇನೆ. ಹೋದವರ್ಷ ಖರ್ಚು ಮಾಡಿದ್ದೇ ಕಡಿಮೆ, ಹಣವನ್ನು ಸರ್ಕಾರದವರು ಒದಗಿಸಿರುವುದೇ ಕಡಿಮೆ. ಇದರಲ್ಲಿ ಮತ್ತೆ ಆ ಹಣವನ್ನು ಉಳಿಸಿಕೊಂಡು ದೇಶಾಭಿವೃದ್ಧಿ ಕಾರ್ಯಗಳಿಗೆ ಮೀಸಲಿಟ್ಟಿರುವುದನ್ನು ಮತ್ತೆ ಆ ಹಣವನ್ನು ಖರ್ಚು ಮಾಡುವ ಬಗ್ಗೆ ಮುಂದಕ್ಕೆ ಯೋಚನೆ ಮಾಡುತ್ತೇವೆಂದು ಹೇಳಿರುವುದನ್ನು ನೋಡಿದರೆ, ದಕ್ಷತೆಯ ಅಭಾವ ನಮ್ಮಲ್ಲಿ ತುಂಬಾ ಕಂಡುಬರುತ್ತಿದೆ. ದೇಶದ ಪ್ರಗತಿಗೆ ಮೂಲವಾಗಿರತಕ್ಕ ಇಂತಹ ಖಾತೆಯ ವಿಚಾರಗಳನ್ನು ಹೀಗೆ ಮಾಡಬಾರದಾಗಿತ್ತೆಂದು ನಾನು ಹೇಳುತ್ತೇನೆ.

ಏಕೆಂದರೆ ನನಗೆ ಈ ವಿಚಾರವನ್ನು ಹೇಳುತ್ತಿರುವಾಗ ಅಷ್ಟೊಂದು ಸಂತೋಷ ಉಂಟಾಗಿ ಈ ರೀತಿ ಹೇಳುತ್ತಿದ್ದೇನೆಂದು ತಾವುಗಳಾರು ಭಾವಿಸಬಾರದು. ಇಷ್ಟೊಂದು ಲೋಪದೋಷಗಳನ್ನು ಹೇಳುವುದರಿಂದ ನನಗೇನೂ ಸಂತೋಷವಾಗುವುದಿಲ್ಲ. ಈ ವಿಚಾರದಲ್ಲಿ ಸರ್ಕಾರದವರು ಯಾವರೀತಿ ವರ್ತಿಸಬೇಕಾಗಿತ್ತೋ ಆ ರೀತಿ ವರ್ತಿಸುತ್ತಿಲ್ಲ. ಈ ದಿವಸ ನೀವು ವರ್ತನೆ ಮಾಡುತ್ತಿರುವ ರೀತಿಯಲ್ಲೇ ಮುಂದಕ್ಕೂ ನಡೆದುಕೊಂಡ ಪಕ್ಷದಲ್ಲಿ ದೇಶದ ಪ್ರಗತಿ ಮತ್ತು ಜನತೆಯ ಅಭಿವೃದ್ಧಿ ಕುಂಠಿತವಾಗುತ್ತದೆ. ಆದುವರಿಂದ ದೇಶದ ಕಲ್ಯಾಣಕ್ಕಾಗಿ ಮೀಸಲಾಗಿಟ್ಟಂಥ ಮೊಬಲಗನ್ನು ಆಯಾಯ ವರ್ಷದಲ್ಲೇ ಖರ್ಚು ಮಾಡಬೇಕಾದುದು ಸರ್ಕಾರದವರ ಆದ್ಯ ಕರ್ತವ್ಯವಾಗಿರುತ್ತೆಂದು ಹೇಳುತ್ತೇನೆ. ಇನ್ನು ಮುಂದಕ್ಕಾದರೂ ಈ ರೀತಿ ಖಂಡಿತ ಮಾಡಬಾರದೆಂದು ಹೇಳುತ್ತೇನೆ. ಈ ದಿವಸ ನಮ್ಮ ದೇಶದಲ್ಲಿ ಇಷ್ಟೊಂದು ವನಸಂಪತ್ತಿದೆ. ಆದರೆ ಇದರ ಅಭಿವೃದ್ಧಿಗೆ ಸಂಬಂಧಪಟ್ಟ ಒಂದು ಕಾಲೇಜೂ ಸಹ ಇಲ್ಲ. ಈ ಭಾಗದಲ್ಲಿ ಏನಾದರೂ ಒಂದು ರಿಸರ್ಚ ಇನ್ಸ್‌ಟಿಟ್ಯೂಟ್ ಮಾಡಿ, ಇನ್‌ವೆಸ್ಟಿಗೇಷನ್ ನಡೆಸಿ ಅರಣ್ಯಗಳನ್ನು ಅಭಿವೃದ್ಧಿಗೆ ತಂದು ಅದರಿಂದ ದೇಶಕ್ಕೊಂದು ಹೆಚ್ಚಿನ ಉತ್ಪತ್ತಿ ಬರುವಂತೆ ಮಾಡುತ್ತೇವೆಂಬ ಬಗ್ಗೆ ತಾವು ಎಲ್ಲೂ ಒಂದಕ್ಷರವನ್ನೂ ಸಹ ಹೇಳಿರುವುದಿಲ್ಲ. ಇನ್ನೂ ನಮ್ಮ ಹಿಂದೂಸ್ತಾನ ಇಂಡಿಜಿನೆಸ್ ಮೆಡಿಸಿನ್‌ಗಳು ಎಂದರೆ, ನಮ್ಮ ದೇಶೀಯ ಔಷಧಿಗಳಿಗೆ ಹೆಸರಾದಂಥ ದೇಶ. ನಮ್ಮ ದೇಶದಲ್ಲಿ ಬೇಕಾದಷ್ಟು ಔಷಧಿಗೆ ಉಪಯೋಗವಾಗತಕ್ಕಂಥ ಗಿಡಮೂಲಿಕೆಯ ಬಳ್ಳಿಗಳು, ಗಿಡಗಳು, ವನಸ್ಪತಿಗಳೂ ಇವೆ. ಅದಕ್ಕೆ ಅಗತ್ಯವಾದಂಥ ಸಾಹಿತ್ಯ ಕೂಡ ನಮ್ಮಲ್ಲಿದೆ. ಇದರ ಬಗ್ಗೆ ಕೂಡ ಇನ್ವೆಸ್ಟಿಗೇಷನ್ ನಡೆಸಲು ಒಂದು ರಿಸರ್ಚ ಇನ್ಸ್‌ಟಿಟ್ಯೂಟಿಲ್ಲ. ಯಾವ ಯಾವ ಗಿಡದಲ್ಲಿ ಏನೇನು ಗುಣವಿದೆ; ಯಾವ ಯಾವ ಗಿಡಗಳು ಏನೇನು ಔಷಧಿಗೆ ಬರುತ್ತವೆ ಎಂಬುದನ್ನು ಕಂಡು ಹಿಡಿಯತಕ್ಕ ಬಗ್ಗೆ ಇಲ್ಲಿಯವರೆಗೂ ಒಂದು ಸರಿಯಾದ ವ್ಯವಸ್ಥೆಯನ್ನು ಮಾಡಿರುವುದಿಲ್ಲ. ಯಾವುದೋ ಒಂದು ಹಿಂದಿನ ಕಾಲದಿಂದಲೂ ನಡೆಮಕೊಂಡು ಬರುತ್ತಿರುವಂಥ ಓಬಿರಾಯನ ಪದ್ಧತಿಯನ್ನೇ ಈಗಲೂ

ಮುಂದುವರಿಸಿಕೊಂಡು ಬರುತ್ತಿದ್ದೀರಿ, ಆದರೆ ಈ ವಿಚಾರವನ್ನು ಈಗಾಗಲೇ ಅನೇಕರು ಹೇಳಿದ್ದಾರೆ. ಆದುದರಿಂದ ನಾನು ಒಬ್ಬರು ಆಡಿದ್ದನ್ನೇ ಪುನಃ ಆಡಲು ನನಗೆ ಮನಸ್ಸಿಲ್ಲ. ಆದರೆ ನಮ್ಮ ದೇಶದಲ್ಲಿ ಅರಣ್ಯ ಸಂಪತ್ತು ವಿಶೇಷವಾಗಿದೆ. ನಮ್ಮ ದೇಶದಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ದೊರೆಯುವಂಥ ಬೊಂಬುಗಳು, ಗಳುಗಳೂ ಇನ್ನಾವ ದೇಶದಲ್ಲಾದರೂ ದೊರೆಯುವ ಹಾಗಿದ್ದರೆ ಅವರು ಎಂಥೆಂಥಾ ದೊಡ್ಡ ಕಾರ್ಖಾನೆಗಳನ್ನು ಸ್ಥಾಪಿಸುತ್ತಿದ್ದರು. ಹಾಗೆ ದೊಡ್ಡ ದೊಡ್ಡ ಕಾಗದದ ಕಾರ್ಖಾನೆಗಳನ್ನು ಸ್ಥಾಪಿಸಿ ವಿಶೇಷವಾಗಿ ಕಾಗದವನ್ನು ತಯಾರಿಸಿ, ಬೇರೆ ದೇಶಗಳಿಗೆ ರವಾನೆ ಮಾಡಿ ದೇಶದ ವರಮಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದುದರ ಜೊತೆಗೆ ಆ ದೇಶ ನಿರುದ್ಯೋಗ ಸಮಸ್ಯೆಯನ್ನೂ ಕೂಡ ಎಷ್ಟೋ ಬಗೆಹರಿಸುವಂತೆ ಮಾಡುತ್ತಿದ್ದರು. ಆದರೆ ಇಲ್ಲಿ ನಮ್ಮ ರಾಜ್ಯದಲ್ಲಿ ಅಂಥಾ ಒಂದು ಅನುಕೂಲವಿದ್ದರೂ ನಮ್ಮ ಸರ್ಕಾರದವರು ಏನೊಂದು ಪ್ರಯತ್ನಗಳನ್ನು ಸಹ –ಹಾದಿಯಲ್ಲಿ ನಡೆಸಿರುವುದಿಲ್ಲ. ಹೀಗೆ ನಮ್ಮ ದೇಶದ ಪ್ರಕೃತಿದತ್ತವಾದ ಅನೇಕ ವಸ್ತುಗಳು ಎಷ್ಟೋ ಇದ್ದಾಗ್ಯೂ ಅವುಗಳನ್ನು ಯಾವರೀತಿ ಉಪಯೋಗ ಮಾಡಬೇಕೆಂಬ ಬಗ್ಗೆ ಯಾವ ಒಂದು ವಿಚಾರವನ್ನಾದರೂ ಮಾಡಿಲ್ಲ. ಖನಿಜಗಳ ವಿಚಾರದಲ್ಲಿ ಅವುಗಳ ವಿಷನ್ ಮತ್ತು ಆ ಲೈನಿನಲ್ಲಿ ಅಗತ್ಯವಾದ ಬೇಕಾದ ಟೆಕ್ನಿಕಲ್ ನಾಲೆಡ್ಜ್ ಜನರಿಗೆ ಎಷ್ಟಿರಬೇಕೋ ಅಷ್ಟೂ ಇಲ್ಲ. ಅದನ್ನು ಒದಗಿಸಲು ಸರ್ಕಾರದವರು ಪ್ರಯತ್ನ ಮಾಡಿಲ್ಲ. ನಮ್ಮ ದೇಶದಲ್ಲಿ ಜನರಿಗೆ ಕಬ್ಬಿಣವನ್ನು ಯಾವ ರೀತಿ ತೆಗೆಯಬೇಕೆಂಬುದನ್ನು ಯಾವ ಪ್ರಮಾಣದಲ್ಲಿ ನಮ್ಮ ದೇಶಕ್ಕೆ ಅಗತ್ಯವಿದೆಯೋ, ಪ್ರಮಾಣದಲ್ಲಿ ಕಲಿಸಲು ಯಾವ ಪ್ರಯತ್ನಗಳನ್ನು ಮಾಡಿರುವುದಿಲ್ಲ. ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ ನಿರುದ್ಯೋಗ ನಿವಾರಣೆಗೋಸ್ಕರ ಎಷ್ಟೋ ಹಣವನ್ನು ಮೀಸಲಾಗಿಟ್ಟಿದ್ದಾರೆಂದು ಹೇಳುತ್ತಿದ್ದಾರೆ. ಆದರೆ ಅದನ್ನು ಯಾವ ರೀತಿ ನಿರುದ್ಯೋಗ ಸಮಸ್ಯೆಯನ್ನು ತಗ್ಗಿಸಲು ಕಾರ್ಯಕ್ರಮ ಕೈಗೊಳ್ಳಬೇಕೆಂದಿದ್ದಾರೆ ಎನ್ನತಕ್ಕ ಬಗ್ಗೆ ಎಲ್ಲಾದರೂ ಒಂದು ಚಕಾರ ಶಬ್ದವನ್ನೇನಾದರೂ ಹೇಳಿದ್ದಾರೆಂಯೇ? ಯಾವ ಯಾವ ವರ್ಗದಲ್ಲಿ ಎಷ್ಟೆಷ್ಟು ನಿರುದ್ಯೋಗಿಗಳಿದ್ದಾರೆಂಬುದನ್ನಾದರೂ ಕಂಡುಹಿಡಿಯುವುದಕ್ಕಾದರೂ ಪ್ರಯತ್ನ ಮಾಡಿದ್ದೀರಾ? ವಿದ್ಯಾವಂತರಲ್ಲಿ ಎಷ್ಟು– ಜನ ನಿರುದ್ಯೋಗಿಗಳಿಗೆ ಈ ದಿವಸ ಉದ್ಯೋಗ ದೊರಕಿದೆ. ನೀವು ಯಾವ ಮಾರ್ಗ ಮಾಡಿದ್ದೀರಿ!– ಅಲ್ಲೊಂದಿಷ್ಟು ಇಲ್ಲೊಂದಿಷ್ಟು ಮಾಡಿರಬಹುದು, ಆದರೆ ಎಕ್ಸ್‌ಪ್ಲೇನೆಟರಿ ನೋಟ್‌ನಲ್ಲಿ ಹೀಗೀಗೆ ಮಾಡುತ್ತೇವೆಂಬುವರ ಬಗ್ಗೆ ಯಾವ ಒಂದು ಸೂಚನೆಯನ್ನು ಕೊಟ್ಟಿಲ್ಲ. ಆ ಮೊಬಲಗನ್ನೆಲ್ಲಾ ನೀವು ಯಾವ ರೀತಿ ಉಪಯೋಗ ಮಾಡುತ್ತೀರಿ; ಈ ವರ್ಷದಲ್ಲಿ ಎಷ್ಟು ಜನ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಒದಗಿಸುತ್ತೀರಿ ಎನ್ನುವ ವಿಷಯಗಳೊಂದನ್ನು ಹೇಳಿಲ್ಲ. – ಮುಗಂಮಿನಲ್ಲಿದೆ. ನಾನು ಹಿಂದೆ.ಹೇಳಿರುವಂತೆ ಈಗಲೂ ಪುನಃ ಅದನ್ನೇ ಹೇಳಬೇಕಾಗಿದೆ – ಹೀಗೆ ಕುರುಡರಂತೆ ಮುಂದುವರಿಯಲು – ಎಲ್ಲಿಯತನಕ ನೀವು ಹೀಗೆ ಕುರುಡು– ಮುಂದುವರಿಯಬೇಕೆಂದಿರುತ್ತೀರೋ ಅಲ್ಲಿಯ ತನಕ ದೇಶಕ್ಕೆ ಅನಾಹುತಗಳು ತಪ್ಪಿದ್ದಲ್ಲ ಎನ್ನುವುದನ್ನು ನಾನು ಖಚಿತವಾಗಿ ಸಾರಿ ಸಾರಿ ಹೇಳುತ್ತೇನೆ. ನೀವು ಇದನ್ನು ಒಂದು

ಕಡೆ ಬರೆದಿಡಿ. ನೀವು ಒಂದು ವಿಚಾರದಲ್ಲಾಗಲಿ ಯಾವುದೊಂದವನ್ನೂ ಖಚಿತವಾಗಿ ಹೇಳದೆ ಎಲ್ಲವನ್ನೂ ಅಂತಿನಲ್ಲಿಟ್ಟು ಕಡೆಗೆ ನಾವೇನು ಮಾಡೋಣ. ಆ - ಲ್ಯಾಪ್ಸ್ ಆಯಿತು ಎಂದು ಕಡೆಗೊಂದು ಹಳೆಯ- ಹಾರಿಬಿಡುತ್ತೀರಿ. ಇದು ಖಂಡಿತ ನ್ಯಾಯವಾದದ್ದಲ್ಲ ಸರಿಯಾದ್ದಲ್ಲ. ಈ ದಿವಸ ನಮ್ಮ ರಾಜ್ಯದಲ್ಲಿ - ಸಾಕಷ್ಟು ಟೆಕ್ನಿಕಲ್ ಕಾಲೇಜುಗಳಿಲ್ಲ. ಪೀಪಲ್‌ಗಳ ಅಭಾವ ಜಾಸ್ತಿಯಾಗುತ್ತಿದೆ. ಎಷ್ಟು ಟೆಕ್ನಿಕಲ್ ಕಾಲೇಜುಗಳನ್ನು ತೆರೆದರೂ ಅಷ್ಟು ಒಳ್ಳೆಯದು. ಇಂಥ ಕಾರ್ಯವನ್ನು ಕೂಡ - ಮಾಡಿಲ್ಲ. ನಮ್ಮ ದೇಶಕ್ಕೆ ಯಾವ ಪ್ರಮಾಣದಲ್ಲಿ ಟೆಕ್ನಿಕಲ್ ಕಾಲೇಜುಗಳಿರಬೇಕೋ ಆ ಪ್ರಮಾಣದಲ್ಲಿಲ್ಲ. ಎಷ್ಟು ಆಸ್ಪತ್ರೆಗಳಿರಬೇಕೋ ಅಷ್ಟು ಆಸ್ಪತ್ರೆಗಳಿಲ್ಲ. ಕಾರಣವೇನು? ಟೆಕ್ನಿಕಲ್ ಪೀಪಲ್ ಆ ಡಾಕ್ಟರು- ಈ ದಿವಸ ಎಷ್ಟೋ ಆಸ್ಪತ್ರೆಗಳಲ್ಲಿ ಡಾಕ್ಟರುಗಳೇ ಇಲ್ಲ. ಉದ್ಯೋಗ ದೊರೆಯದೇನೋ ಅಥವಾ ಸಂಬಳ ಸಾರಿಗೆಗಳು ಕಡಿಮೆಯೆಂತಲೋ ಏನೋ ಬೀದಿಗಳಲ್ಲಿ ಅಲೆದಾಡುತ್ತಿರಬಹುದು. ಆದರೆ ನಾವು ಜನರಿಗೆ ಕೊಡಬೇಕಾದ ವಿದ್ಯೆ ಕೊಡೋಣ. ಅವರು ಬೇರೆ ರಾಜ್ಯಗಳಲ್ಲಾದರೂ ಹೋಗಿ ಎಲ್ಲಿ ಹೆಚ್ಚಿನ ಸಂಬಳ ಸಾರಿಗೆಗಳು ದೊರೆಯುತ್ತವೊ , ಅಲ್ಲಾದರೂ ಅವರ ಜೀವನೋಪಾಯವನ್ನು ನಡೆಸಿಕೊಳ್ಳಲಿ ಈ ಹಿಂದೆ ,ಸಹ ನಮ್ಮ ಮೈಸೂರಿನವರು ಹೊರಗಡೆ ಹೋಗಿ ತ'ಮ್ಮ ಜೀವನ ನಡೆಸಿಕೊಂಡಿದ್ದೊಂದೇ ಅಲ್ಲದೆ ನಮ್ಮ ರಾಜ್ಯಕ್ಕೂ ಸಹ ಕೀರ್ತಿ ಬರುವಂತೆ ಕೆಲಸ ಮಾಡಿರುತ್ತಾರೆ. ನೀವು ನಿಮ್ಮ ಈಗಿನ ಪಾಲಿಸಿಯನ್ನು ಬದಲಾಯಿಸಿಕೊಳ್ಳದಿದ್ದರೆ ನಿಮಗಿದರಿಂದ ಬಹಳ ತೊಂದರೆಯಾಗುತ್ತದೆ. ಇಂಗ್ಲೆಂಡ್ ದೇಶದಲ್ಲಿ ಜನರ ನಿರುದ್ಯೋಗ ನಿವಾರಣೆಯ ಬಗ್ಗೆ ವಿದ್ಯೆ ಕಲಿಸಿ ಅವರು ಹೊರಗಡೆ ಹೋಗಿ ಜೀವನ ನಡೆಸಿಕೊಳ್ಳಲು ಅನುಕೂಲವಾಗತಕ್ಕಂಥ ಒಂದು ವ್ಯವಸ್ಥೆ ಮಾಡಿದ್ದಾರೆ. ಈ ದಿವಸ ನಮ್ಮ ಸರ್ಕಾರದವರು ಇಲ್ಲಿ ಮಧ್ಯಮ ತರಗತಿಯವರಿಗೆ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳಿಗೆ ಅಡ್ಮಿಷನ್ ದೊರಕಿಸಿ ಕೊಡುತ್ತಿರುವ ವಿಚಾರ ನೋಡಿದರೆ ಬಹಳ ನಾಚಿಕೆಗೇಡಾಗಿದೆ. ಈ ವಿಚಾರದಲ್ಲಿ ನಾನು ಸರ್ಕಾರಕ್ಕೆ ಹಿಂದೆ ಒಂದು ಕಾಗದ ಕೂಡ ಬರೆದಿದ್ದೆ. ಅದಕ್ಕೆ ಸರಿಯಾದ ಜವಾಬು ಬರಲಿಲ್ಲ. ಆಗ ನಾನೇ .ಆ ಕಾಲೇಜಿಗೆ ಹೋಗಿ ನನಗೆ ನೀವು ಅಡ್ಮಿಷನ್ ವಿಚಾರದಲ್ಲಿ ನಡೆಸಿರತಕ್ಕ ಕಾಗದ ಪತ್ರಗಳನ್ನೆಲ್ಲಾ ತೋರಿಸಿ ಅವುಗಳನ್ನು ನಾನು ನೋಡಬೇಕಾಗಿದೆ ಎಂದು ಕೇಳಿದ್ದಕ್ಕೆ ಅಲ್ಲಿಯವರು ನಿಮಗೆ ಸರ್ಕಾರಿ ಕಾಗದ ಪತ್ರಗಳಲ್ಲಿರತಕ್ಕ ವ್ಯವಹಾರಗಳನ್ನೆಲ್ಲಾ ನೋಡಲು ಅವಕಾಶ ಕೊಡಲಿಕ್ಕಾಗುವುದಿಲ್ಲ, ರೂಲ್ಸ್ ಒಪ್ಪುವುದಿಲ್ಲವೆಂದು ಹೇಳಿಬಿಟ್ಟರು. ನಿಮಗೆ ಯಾವ ಬಾಬಿನಲ್ಲಿ ಅನ್ಯಾಯವಾಗಿದೆ ಎಂಬುದನ್ನು ತಿಳಿಸಿ ಅದನ್ನು ನಾವು ಪರಿಶೀಲನೆ ಮಾಡುತ್ತೇವೆಂದು ಹೇಳಿದರು. ಈ ಕೆಲಸಗಳನ್ನೆಲ್ಲಾ ನ್ಯಾಯವಾದ ರೀತಿಯಲ್ಲಿ ನಡೆಸುವಂಥಾ ಕಾನೂನುಗಳನ್ನು ನೀವು ಮಾಡಿಲ್ಲ. ನಿಮ್ಮ ಕಾನೂನುಗಳೇ ಸರಿಯಾಗಿಲ್ಲ. ಕಾಲೇಜಿನ ಪ್ರವೇಶಕ್ಕೂ ಕೂಡ ದೇಶಸೇವೆ ಮಾಡಿದವನ ಮಗನಿಗೇ ಮೀಸಲಾಗಿಡಬೇಕು; ಮಲೆನಾಡಿನಲ್ಲಿ ಸೇವೆ ಮಾಡತಕ್ಕವನಿಗೇ ಮೀಸಲಾಗಿಡಬೇಕು_

ಶ್ರೀ ಅಣ್ಣಾರಾವ್ ಗಣಮುಖಿ– ಇಂಜಿನಿಯರಿಂಗ್ ಕಾಲೇಜಿನ ಬಗ್ಗೆ ಅಂಥ ನಿರ್ಬಂಧಗಳೇನೂ ಇರುವುದಿಲ್ಲವಲ್ಲಾ!

ಶ್ರೀ ಕೆ.ಕೆಂಚಪ್ಪ–. ಈಗ ನಾನು ತಾವು ಅಷ್ಟು ಪ್ರೆಸ್ ಮಾಡುವುದಾದರೆ ಆ ಕಂಡೀಷನ್ಗಳೇನೆಂಬುದನ್ನು ಈಗಲೇ ಬೇಕಾದರೂ ಓದಿಬಿಡುತ್ತೇನೆ. ಒಟ್ಟಿನಲ್ಲಿ ಹೇಳುವುದಾದರೆ ಈ ವಿದ್ಯಾಭ್ಯಾಸ ಕ್ರಮದಲ್ಲಿ ಮಧ್ಯಮ ವರ್ಗದ ಜನರಿಗೆ, ಸಾಮಾನ್ಯ ಜನರಿಗೆ ಶಿಕ್ಷಣ ಪಡೆಯಲು ಸರ್ಕಾರದವರು ನಡೆಸುತ್ತಿರುವ ಕಾಲೇಜುಗಳ ನೀತಿ ನೇಮಗಳಲ್ಲಿ ತುಂಬ ದೋಷವಿದೆ.

ಶ್ರೀ ಅಣ್ಣಾರಾವ್ ಗಣಮುಖಿ– ತಾವು ಈ ವಿಚಾರಗಳನ್ನೆಲ್ಲಾ ಮೆಡಿಕಲ್ ಡಿಮ್ಯಾಂಡ್ ಚರ್ಚೆಗೆ ಬಂದಾಗ ಹೇಳಿದ್ದರೆ ಚೆನ್ನಾಗಿತ್ತು. ಆದರೆ ಈ ವಿಚಾರಗಳನ್ನೆಲ್ಲಾ ಈಗ ಹೇಳಿದರೇನು ಪ್ರಯೋಜನ?

ಶ್ರೀ ಕೆ.ಕೆಂಚಪ್ಪ:– ದಯವಿಟ್ಟು ಕ್ಷಮಿಸಬೇಕು. ನಾನೀಗ ಮೆಡಿಕಲ್ ಇಲಾಖೆಯ ವಿಚಾರವನ್ನು ಪ್ರಸ್ತಾಪ ಮಾಡುತ್ತಿಲ್ಲ. ಸರ್ಕಾರದವರು ಟೆಕ್ನಿಕಲ್ ಎಜುಕೇಷನ್ನನ್ನು ಹರಡತಕ್ಕ ವಿಧಾನದಲ್ಲಿ, ಕ್ರಮದಲ್ಲಿ ಏನೇನು ನೀತಿ ನೇಮಗಳನ್ನು ಅನುಸರಿಸಬೇಕಾಗಿತ್ತೋ ಆ ನೀತಿ ನೇಮಗಳನ್ನು ಅನುಸರಿಸಬೇಕಾಗಿತ್ತೋ ಆ ನೀತಿ ನೇಮಗಳನ್ನು ಅನುಸರಿಸುತ್ತಿಲ್ಲವಾದ್ದರಿಂದ ನಿಮ್ಮ ಈಗಿನ ಕಾಲೇಜಿನ ವಿದ್ಯಾಭ್ಯಾಸ ಕ್ರಮವೇನಿದೆ ಅದು ಸರಿಯಾದ್ದಲ್ಲ, ಅದರಲ್ಲಿ ಲೋಪದೋಷಗಳಿವೆ; ಅವುಗಳನ್ನು ನೀವು ಬೇಗ ಸರಿಪಡಿಸಿಕೊಳ್ಳಬೇಕೆಂಬುದನ್ನೀಗ ನಾನು ಹೇಳುತ್ತಿದ್ದೇನೆ.

ಶ್ರೀ ಅಣ್ಣಾರಾವ್ ಗಣಮುಖಿ:– ಆ ಲೋಪದೋಷಗಳಾವುವು ಹೇಳಿ!

ಶ್ರೀ ಕೆ.ಕೆಂಚಪ್ಪ:– ಈಗ ನನಗೆ ಅವಕಾಶವಿಲ್ಲ. ನನಗೆ ಕೊಟ್ಟಿರುವ ಅವಧಿ ತೀರ ಅಲ್ಪ. ನಾನೇ ನಿಮ್ಮ ರೂಮಿಗೆ ಬರುತ್ತೇನೆ. ಆಗ ಘಂಟೆಗಟ್ಟಲೆ ಹೇಳುವೆನು. ಆದರೆ ಒಟ್ಟಿನಲ್ಲಿ ಇಷ್ಟು ಹೇಳುತ್ತೇನೆ. ನಿಮ್ಮ ವಿದ್ಯಾಭ್ಯಾಸ ಕ್ರಮ ಸರಿಯಾಗಿಲ್ಲ. ಇದರಲ್ಲಿ ಅನೇಕ ಲೋಪದೋಷಗಳಿವೆಯೆಂದು ನಾನು ಒಂದು ಸಾರ್ತಿಯಲ್ಲ ಸಾವಿರ ಸಾರ್ತಿ ಸಾರಿ ಸಾರಿ ಹೇಳುತ್ತೇನೆ. ನಾನು ತಮ್ಮ ರೂಮಿಗೆ ಬಂದು ತಿಳಿಸುತ್ತೇನೆ. ಅನಂತರ ತಾವು ಏನೇನು ಕ್ರಮ ಕೈಗೊಂಡಿರುತ್ತೀರಿ, ಎಷ್ಟೆಷ್ಟು ಕಾರ್ಯಸಾಧನೆ ಮಾಡಿರುತ್ತೀರೆಂಬುದನ್ನು ಮುಂದೆ ಬರಲಿರುವ ಬಡ್ಜೆಟ್ ಅಧಿವೇಶನ ಕಾಲದಲ್ಲಿ ಅದನ್ನು ನಾನು ಕೇಳುತ್ತೇನೆ. ಆದರೆ ನಾನೀಗ ತಮ್ಮ ಗಮನಕ್ಕೆ ಒಂದು ವಿಚಾರತರಬೇಕಾಗಿದೆ. ಪ್ರೀ–ಯೂನಿವರ್ಸಿಟಿ ಪರೀಕ್ಷೆಯ ಮ್ಯಾಥ್‌ಮೆಟಿಕ್ಸ್ ಪ್ರಶ್ನೆ ಪತ್ರಿಕೆಯನ್ನು ಸಿಲಿಬಸ್ಸಿಗೆ ಸೇರದಿದ್ದುದರಿಂದ ಆರಿಸಿ ಕೊಟ್ಟದ್ದೀರೆಂಬ ವಿಚಾರದಲ್ಲಿ ಒಂದು ಸ್ಪೆಸಿಫಿಕ್ ಕಾಗದ ಬರೆದಿದೆ.

ಶ್ರೀ ಅಣ್ಣಾರಾವ್ ಗಣಮುಖಿ– ಅದನ್ನು ಸಿಂಡಿಕೇಟಿನವರು ಮಾಡಿದ್ದಾರೆ. ಅದಕ್ಕೆ ನಾವೇನು ಮಾಡಬೇಕಿತ್ತು!

ಶ್ರೀ ಕೆ.ಕೆಂಚಪ್ಪ:- ಕೆಲವು ಸರ್ಕಾರಿ ಕಾಲೇಜುಗಳಿವೆ, ಕೆಲವು ಯೂನಿವರ್ಸಿಟಿ ಕಾಲೇಜುಗಳಿವೆ, ಕೆಲವು aided institutions ಇವೆ. ಇವೆಲ್ಲಕ್ಕೂ controlling authority ಸರ್ಕಾರ.

ನಾನು ವಿಶ್ವವಿದ್ಯಾನಿಲಯದ Pre-university Examination ಪೇಪರು ಕಟುವಾಗಿದೆ ಇಂಥಿಂಥ ಪ್ರಶ್ನೆಗಳು ಕಟುವಾಗಿವೆ, ಮುಂದಿನ ವರ್ಷದಿಂದಲಾದರೂ ಇವನ್ನೆಲ್ಲ ಸರಿಪಡಿಸಬೇಕೆಂದು ಮುಖ್ಯಮಂತ್ರಿಗಳಿಗೂ ಮತ್ತು ವಿದ್ಯಾಶಾಖೆಯ ಮಂತ್ರಿಗಳಿಗೂ ಕಾಗದವನ್ನು ಬರೆದಿದ್ದೆ. ಅದಕ್ಕೆ ಅವರು ನನಗೆ ಒಂದು ಕಾಗದವನ್ನು ಬರೆದಿದ್ದಾರೆ. ಅದನ್ನು ಓದಿಬಿಡುತ್ತೇನೆ. ಅದರಿಂದ ನಿಮಗೆಲ್ಲರಿಗೂ ಅರ್ಥವಾಗುತ್ತದೆ.

'' With reference to your letter No.189 and 191, dated 25th July 1958, addressed to the Chief Minister and the Minister for Education on the subject mentioned above, I am directed to invite yourkind attention to the letter No. Ex. C.E.P. 58-59 10, dated 8th August 1958 from the Controller of Examinations, Mysore University, addressed to you, in which the position has been explained.''

ಇದು ಬಂದಿರುವುದು ವಿಶ್ವವಿದ್ಯಾನಿಲಯದ ಕಂಟ್ರೋಲರ್ ಆಫ್ ಎಗ್ಸಾಮಿನೇಷನ್ಸ್ ಅವರಿಂದ, ಅದರಲ್ಲಿ ಈ ರೀತಿಇದೆ:

" In continuation of the above, I am directed to state that on a similar reference received in this office, the Chairman, Board of Examiners in Mathematics was requested set for Pre-University Examination were beyond the syllabus prescribed for the respective examination. The Chairman, when he met the Vice-Chancellor personnaly, stated that one or two sub-questions were such that they could be considered as coming within the purview of the syllabus or even without, since the teachers were expected to teach those things although specific mention about them in the syllabus had not been made. he also stated that since this was the first year of the examination so for as the Pre-University Examination was concerned, somevery minor discrepancies had occurred. he also promised to send a detailed report in the matter after consulting the Board of Studies and to see that such things would never repeat.

In this connection, it may be brought to your kind notice, that in order to prevent the students from being the victims of certain vagarires which are usual at the transition period, the results were moderated. It may also be clearly stated that all possible measure being taken to safeguard the interests of candidates at the same time not sacrificing academic standards.

Any further information required in this regard will be gladly supplied to you."

ಸ್ವಾಮಿ, ಸಾವಿರಾರು ಹುಡುಗರು ಕೆಟ್ಟುಹೋದರು. ಇಂಥದ್ದಕ್ಕೆ ಸರ್ಕಾರದವರು ದುಡ್ಡು ಕೊಡುತ್ತಾರೆ. ಸರ್ಕಾರಕ್ಕೆ ಹತೋಟಿ ಇದೆ. ಹತೋಟಿ ಇರುವಾಗ, ಇಲ್ಲವೆಂದು ಹೇಳುತ್ತಾರೆ. ನಾನು ಪ್ರತಿಯೊಂದನ್ನೂ ತೋರಿಸುತ್ತೇನೆ. ಈ ರೀತಿಯಾಗಿ ಪರೀಕ್ಷೆಯಲ್ಲಿ ಕಠಿಣವಾದ ಪ್ರಶ್ನೆಗಳನ್ನು ಕೊಟ್ಟು, ಹುಡುಗರು ಫೇಲ್ ಆದರೆ ಇದರ ಒಳಗುಟ್ಟೇನು, ಏನೇನು ನಡೆಯಿತು ಎನ್ನುವು– ಯೋಚನೆ ಮಾಡುತ್ತೀರಾ? ವಿಶ್ವವಿದ್ಯಾಲಯ ಆಡಳಿತ ಸರಿಯಾಗಿಲ್ಲ. ವಿಶ್ವವಿದ್ಯಾನಿಲಯದ.. ಶ್ರೀ ಎಲ್.ಎಸ್. ವೆಂಕಾಜಿರಾವ್ – ಹೇಳಿದ ಹಾಗೆ ಒಂದುತರಹ ಇದೆ ಕೆಲವು ಹಾಗೆ, ಕೆಲವು ಹೀಗೆ, ಕೆಲವಕ್ಕೆ ಸರ್ಕಾರದ ಹತೋಟಿ– ಕೆಲವಕ್ಕೆ ವಿಶ್ವವಿದ್ಯಾನಿಲಯದ ಹತೋಟಿ, – ಅದಕ್ಕೆ ತಕ್ಕಂತೆ ಕಾನೂನನ್ನು ಮಾಡಿದ್ದಾರೆ. –ಸಂಸ್ಥೆಗಳು ಜಾತಿವಾರು ಆಧಾರದಮೇಲೆ ನಡೆಯುತ್ತಿವೆ. ಅವರು ಬೇಕಾದಷ್ಟು ದುಡ್ಡನ್ನೂ ಹೆಚ್ಚಿಗೆ ತೆಗೆದುಕೊಳ್ಳುತ್ತಾರೆ. ನಾನು ಹೇಳುವುದರಲ್ಲಿ ಯಾವುದು ತಾನೇ ನಿಜವಲ್ಲ! ನೀವು ಮಾಡತಕ್ಕ ವಿಧಾನದಿಂದ ದೇಶವನ್ನು ಕಟ್ಟಬೇಕೆಂಬ ಉದ್ದೇಶ ಇಲ್ಲ. ಏಡೆಡ್ ಇನ್ಸ್ಟಿಟ್ಯೂಷನ್ ಒಂದು ಮೆಚ್ಚಿಗೆಯೂ ಇದೆ ಎಂದು ಹೇಳಬಹುದು. ಅಲ್ಲಿ ಸರ್ಕಾರಿ ಇನ್‌ಸ್ಟಿಟ್ಯೂಚನ್‌ಗಳಿಗಿಂತ ವಿದ್ಯಾಭ್ಯಾಸ ಚೆನ್ನಾಗಿ ನಡೆಯುತ್ತಿರಬಹುದು. ಸರ್ಕಾರಿ ಕಾಲೇಜುಗಳಲ್ಲಿ ವಿದ್ಯಾಭ್ಯಾಸದ ಮಟ್ಟ ಕಡಿಮೆಯಾಗುವುದಕ್ಕೆ ಕಾರಣವೇನಿರಬಹುದು? ಇದನ್ನು ಸರ್ಕಾರದವರು ಯೋಚನೆ ಮಾಡಬೇಕು. ಎಷ್ಟೋ ಜನ ಉಪಾಧ್ಯಾಯರುಗಳಲ್ಲಿ ಸರಿಯಾಗಿ ಉಪದೇಶ ಮಾಡುವವರೇ– ವಿದ್ಯೆಯನ್ನು ಹೇಳಿಕೊಡಲು ಸರಿಯಾದ ಜನರನ್ನು ಆರಿಸುತ್ತಿಲ್ಲ. ಹಿಂದೆ ಒಬ್ಬ ಪ್ರೊಫೆಸರನ್ನು – ಮಾಡಬೇಕಾದರೆ ಎಷ್ಟು ಕಷ್ಟಪಡುತ್ತಿದ್ದರು, – ಜನರನ್ನು ತರುತ್ತಿದ್ದರು. ಎಂಥೆಂಥವರನ್ನು ತರುತ್ತಿದ್ದರು! ಶ್ರೀ ಎಸ್. ರಾಧಾಕೃಷ್ಣನ್ ಅವರು ನಮ್ಮ ಪ್ರೊಫೆಸರಾಗಿದ್ದರು. ಮುಖರ್ಜಿಯಂಥಾ ಎಷ್ಟೋ ಜನ ಪ್ರೊಫೆಸರುಗಳಿದ್ದರು. ಇಂದು –ಪ್ರೊಫೆಸರಾಗಿ ಮಾಡಿರುವುದರಿಂದ ವಿದ್ಯಾಭ್ಯಾಸ ತೀರ ಹಿಂದುಳಿದುಬಿಟ್ಟಿದೆ. ಕೆಲವು ಸಂದರ್ಭಗಳಲ್ಲಿ post-graduate ಕೋರ್ಸಿಗೆ ಇಂಗ್ಲೆಂಡ್ ಮುಂತಾದ ಸ್ಥಳಗಳಿಗೆ ಇಂಡಿಯಾ ದೇಶದ ವಿದ್ಯಾರ್ಥಿಗಳನ್ನು ಕಾಲೇಜುಗಳಿಗೆ ಸೇರಿಸಿಕೊಳ್ಳಬೇಕಾದರೆ ತೊಂದರೆಯಾಗುತ್ತಿದೆ ಎಂದು ಕೇಳಿದ್ದೇನೆ. ಆ– ಹಾಗಾಗ ಅವಕಾಶ ಕೊಡಬೇಡಿ. ನಮ್ಮ ವಿಶ್ವವಿದ್ಯಾನಿಲಯಕ್ಕೆ ಕೆಟ್ಟ ಹೆಸರು ಬರುವಂಥ ವಿಚಾರಗಳು ನಡೆಯುತ್ತಿವೆ. ಮೈಸೂರು ದೇಶ ಮತ್ತು ಹಿಂದೂಸ್ಥಾನದಿಂದ ಡಾಕ್ಟರ್ ರೆಡ್ಡಿಯವರೂ

ಮತ್ತು ಇತರರೂ ವ್ಯಾಸಂಗಕ್ಕೆ ಇಂಗ್ಲೆಂಡಿಗೆ ಹೋಗಿ –ಹೆಸರುವಾಸಿಗಳಾದಂಥ, ಮೇಧಾಶಕ್ತಿಯುಳ್ಳ ಜನರು ವಿದ್ಯಾಭ್ಯಾಸ ಮಾಡತಕ್ಕ ಕಾಲ ಹಿಂದೆ ಇತ್ತು. ಈಗ ಹೋದರೆ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳದೆ ಹಿಂದುಮುಮದು ನೋಡುವ ಕಾಲ ಬಂತು.– ಒಂದು ದೇಶಕ್ಕೆ ಸೇರಿದವರಿಗೆ ಈಗ ಕೆಟ್ಟ ಹೆಸರು ಬರುತ್ತಿದೆ ಎಂದು ಹೇಳುವ ಕಾಲ ಬಂತು. ದಯವಿಟ್ಟು ಇದನ್ನು ಆಲೋಚನೆ ಮಾಡಿರಿ.

ಸ್ಕೂಲ್ ಫೀ ಮತ್ತು ಕಾಲೇಜು ಫೀ ವಿಚಾರದಲ್ಲಿ ನಾನು ಕೆಲವು ವಿಷಯಗಳನ್ನು ಹೇಳಬೇಕಾಗಿದೆ. ಹಿಂದೆ ಇದ್ದುದಕ್ಕಿಂತ ಕಾಲೇಜು ಫೀಯನ್ನು ಹೆಚ್ಚಿಗೆ ಮಾಡಿದ್ದಾರೆ. ಅದಕ್ಕೋಸ್ಕರ ಸ್ಟ್ರೈಕ್ ಮಾಡುತ್ತೇವೆ ಎಂದು ವಿದ್ಯಾರ್ಥಿಗಳೆಲ್ಲರೂ ಸ್ಟ್ರೈಕ್ ಮಾಡಿ– ಆಗ ಏನು ನಡೆಯಿತೋ ಏನೋ ಕಾಲೇಜ್ ಫೀಯನ್ನು ಹೆಚ್ಚಿಗೆ ಮಾಡಿಲ್ಲವೆಂದು ಹೇಳಿದೆವು. 1957ನೆಯ ಇಸವಿಗೆ ಹಿಂದೆ ಎಷ್ಟು ಫೀ ಇತ್ತು, 1957–58ರಿಂದೀಚೆಗೆ ಎಷ್ಟು ಮಾಡಿದ್ದಾರೆನ್ನುವುದನ್ನು ಈಗ ತಿಳಿಸುತ್ತೇನೆ. ಅದನ್ನು ನೋಡಿದರೆ ಮಾನ್ಯ ಸದಸ್ಯರಿಗೆಲ್ಲ ಮನವರಿಕೆಯಾದೀತು.

| | prior to 1957 Rs | From 1957-58 Rs |
|---|---|---|
| - (Arts) ......... | 72 | 90 |
| -(Science) ........... | 88 | 90 27Lab.fees |
| -(Commerce)............. | 72 | 90 |
| BA Degree ............... | 96 | 126 |
| BA (Hons) Degree ....... | 120 | 174 |
| BSc Degree ........... | 120 | 126 36 Lab.fees |
| BSc (Hons) Degree | 144 | 144 45Lab.fees |
| MA Degree ............ | 120 | 144 |
| MSc Degree ................. | 120 | 144 45Lab.fees |
| B. Com.Degree............ | 96 | 128 |
| BE Degree................... | 150 | 198 |
| B.Ed. Degree.................. | 80 | 135 |
| M.B.B.S. Degree................. | 200 | 270 |
| Pre-Medical Course.............. | 72 | 120 |
| I year Law (F.L)............. | 90 | 126 |
| II year Law (B.L)............ | 90 | 126 |
| Pre-University (Arts).......... | 90 | |
| Do (Science)...... | 90 | 27 Lab.fees |
| Pre-University ................. (Home Science ) | 90 | |

ನಮ್ಮ ಸರ್ಕಾರ ಹೇಳಿಕೆ ಕೊಡುವಾಗ ಯಾವ ಜವಾಬ್ದಾರಿಯಿಂದ ಫೀ ಹೆಚ್ಚಿಗೆ ಮಾಡಿಲ್ಲವೆಂದು ಹೇಳಿಕೆಯನ್ನು ಕೊಟ್ಟರು! ನೀವು ಎಷ್ಟು ಹಣ ಕೊಡಬೆಕಾಗಿತ್ತೋ ಅದಕ್ಕಿಂತ ಜಾಸ್ತಿಯಾಗಿ ಕೊಡಬೇಕಾಗುವುದಿಲ್ಲ. ಪರೀಕ್ಷೆ ಶುಲ್ಕವನ್ನು ಸಹಿತ ಜಾಸ್ತಿ ಮಾಡಿಲ್ಲವೆಂದು ಹೇಳಿದರು. ಮದರಾಸಿನಲ್ಲಿ ಹೇಗಿದೆಯೋ ಇಲ್ಲಿಯೂ ಹಾಗೆಯೇ ಇದೆ ಎಂದು ಹೇಳಿಕೆ ಕೊಡುತ್ತಾರೆ. ಹೆಚ್ಚಿಗೆ ಮಾಡುತ್ತೇವೆಂದು ಖಡಾಖಂಡಿತವಾಗಿ ಹೇಳಿ. ಹೆಚ್ಚಿಗೆ ಮಾಡಿಯೂ ಮಾಡಿಲ್ಲವೆಂದು ಹೇಳಿಕೆಯನ್ನು ಕೊಡುವುದು ಖಂಡಿತವಾಗಿಯೂ ಒಳ್ಳೆಯದಲ್ಲ.

ಶ್ರೀ ಅಣ್ಣಾರಾವ್ ಗಣಮುಖಿ– ಹೇಳಿಕೆ ಯಾವಾಗ ಕೊಟ್ಟಿದ್ದೇವೆ!

ಶ್ರೀ ಕೆ.ಕೆಂಚಪ್ಪ:– ಹೋದ ವರ್ಷ ಹೇಳಿಕೆ ಕೊಟ್ಟಿದ್ದರು. ನಿಮಗೆ ನಾನು ಹೇಳುತ್ತಿಲ್ಲ. ನಿಮ್ಮಂಥವರು ಬರುತ್ತಾರೆ, ಹೋಗುತ್ತಾರೆ, ನಾನು ಮೈಸೂರು ಸರ್ಕಾರಕ್ಕೆ ಹೇಳುತ್ತಿದ್ದೇನೆ. ಕಾಂಗ್ರೆಸ್ ಸರ್ಕಾರಕ್ಕೆ ಹೇಳುತ್ತಿದ್ದೇನೆ. ಮೆಡಿಕಲ್ ಕಲಾಜ್ ಹೆಣ್ಣುಮಕ್ಕಳಿಗೆ ಒಂದು ಹಾಸ್ಟೆಲ್ ಇದುವರೆಗು ಮಾಡಿಲ್ಲ. ಗಂಡುಹುಡುಗರಿಗಾದರೆ ಎಲ್ಲಾದರೂ ಕಾಲೇಜ್ ಹಾಸ್ಟಲಿನಲ್ಲಿ ಸೇರಿಸಬಹುದು. ಹೆಣ್ಣುಮಕ್ಕಳಿಗಿರುವ ಈ ತೊಂದರೆಯನ್ನು ನಿವಾರಣೆ ಮಾಡಬೇಕಾಗಿದೆ.

ಶ್ರೀ ಅಣ್ಣಾರಾವ್ ಗಣಮುಖಿ:– ಮೆಡಿಕಲ್ ಡಿಮ್ಯಾಂಡ್ ಬಂದಾಗ ಅದರ ಮೇಲೆ ಇದನ್ನೆಲ್ಲಾ ಹೇಳಬಹುದು.

ಶ್ರೀ ಕೆ.ಕೆಂಚಪ್ಪ:– ಇಲ್ಲಿಯೂ ಹೇಳಬಹುದು. M.B.B.S. ನಮ್ಮ ಮೈಸೂರು ವಿಶ್ವವಿದ್ಯಾನಿಲಯಕ್ಕೆ affiliate ಆಗಿಲ್ಲವೇ? ಆದ್ದರಿಂದಲೇ ನಾನು ಹೇಳುತ್ತಿರುವುದು,ಜಾಗ್ರತೆಯಾಗಿ ಈ ಲೋಪವನ್ನು ಮನಗಂಡು ಪರಿಹರಿಸಬೇಕಾಗಿದೆ.

ಶ್ರೀ ಅಣ್ಣಾರಾವ್ ಗಣಮುಖಿ:– ಇಲ್ಲಿ ಒಂದು ಹಾಸ್ಟೆಲ್ ಕಟ್ಟುವುದಕ್ಕೆ ಪ್ರಾರಂಭ ಮಾಡಿದ್ದೇವೆ.

ಶ್ರೀ ಕೆ.ಕೆಂಚಪ್ಪ:– ಇನ್ನೊಂದು ವಿಷಯ. ಇಲ್ಲಿ Improvement of libraries ಗೆಂದು III ನೆಯ ಪುಟದಲ್ಲಿ ಒದಗಿಸಿಲ್ಲ. ಆದರೆ, ಸಂಸ್ಕೃತಿ ಪ್ರಚಾರ ಇನ್ನೂ ಇಟ್ಟುಕೊಂಡಿದ್ದೀರಿ, ಇದು ಅನಾವಶ್ಯಕ. ಇದನ್ನು ವಜಾಮಾಡಿಬಿಡಬೇಕಾಗಿತ್ತು. Publication of popular literature ಗೆಂದು 50,000 ರೂಪಾಯಿಗಳನ್ನು ಕೊಟ್ಟಿದ್ದೀರಿ. ಅದೇನು Popular literature ನಿಮ್ಮ ಮನಸ್ಸಿನಲ್ಲಿದೆಯೋ ನಮಗೆ ಗೊತ್ತಿಲ್ಲ Literary and Cultural Development ಗೆಂದು 25,000 ರೂಪಾಯಿ ಕಾಣಿಸಿದ್ದೀರಿ. ಇದಕ್ಕೆ ಕೊಡುವುದು ಒಳ್ಳೆಯದಲ್ಲ. ಏಕೆಂದರೆ ಇಂಥ ಖರ್ಚಿಗಾಗಿ ಇದನ್ನು ವಿನಿಯೋಗಿಸುತ್ತೇವೆ, ಇದರಿಂದ ದೇಶಕ್ಕೆ ಇಂಥ ಉಪಯೋಗವಾಗುತ್ತದೆಂದು ಹೇಳುವುದಾದರೆ ಒಪ್ಪಿಕೊಳ್ಳಬಹುದು. ಅದು ಬಿಟ್ಟು ಈ ಹಣದಿಂದ ಮುದುಕರಿಗೆ ವಯಸ್ಸಾದವರಿಗೆಲ್ಲಾ ವಿದ್ಯೆ ಹೇಳಿಕೊಡುತ್ತೇವೆನ್ನುವುದರಿಂದ ದೇಶಕ್ಕೆ ಏನು ಪ್ರಯೋಜನವಾದೀತು? Dance ಮತ್ತು Drama Academy ಗೆ ಗ್ರಾಂಟ್ ಎಂದು 26,000 ರೂಪಾಯಿಗಳನ್ನು ಕೊಟ್ಟಿದ್ದೀರಿ. ಇಷ್ಟೇಕೆ ಇದಕ್ಕೆ? ಇದು ಬೇಕಾಗಿಲ್ಲ.

ಶ್ರೀ ಬಿ.ಬಸವಲಿಂಗಪ್ಪ:- ತಮಗೆ ನಾಟಕ -ನೃತ್ಯಗಳಲ್ಲಿ ಅಭಿರುಚಿ ಇಲ್ಲವೇ?

ಶ್ರೀ ಕೆ.ಕೆಂಚಪ್ಪ:- ನನ್ನ ಅಭಿಪ್ರಾಯ ನಾನು ಹೇಳುತ್ತಿದ್ದೇನೆ.

**Sri J.B.Mallaradhya:-** That is his individual opinon. You cannot object to it.

ಶ್ರೀ ಕೆ.ಕೆಂಚಪ್ಪ:- ಇನ್ನೊಂದು ದೊಡ್ಡ ಖರ್ಚು ಬಂದರೆ, Grant to State Audult Education Council ಗೆಂದು 4,75,000 ರೂಪಾಯಿಗಳನ್ನು ಕೊಟ್ಟಿದೆ. ಎಷ್ಟು ಜನ ಅಲ್ಲಿ ಓದುತ್ತಿದ್ದಾರೆ, ಎಷ್ಟು ಜನರಿಗೆ ಶಿಕ್ಷಣ ಕೊಟ್ಟಿದ್ದಾರೆ ಎಂಬ ಯಾವುದಾದರೂ ಅಂಕಿಅಂಶ ನಿಮ್ಮಲ್ಲಿದೆಯೇ? ನಾನು ಬಹಳ ದಿವಸಗಳಿಂದ ನೋಡುತ್ತಿದ್ದೇನೆ; ಇದು ಪ್ರಾರಂಭವಾಗಿ 15-20 ವರ್ಷಗಳಾಗಿವೆ. ಇದರಲ್ಲಿರುವಷ್ಟು ಹಣದ ದುರ್ವ್ಯಯ, ಸ್ವಜನ ಪಕ್ಷಪಾತ ಇನ್ನೆಲ್ಲಿಯೂ ಇಲ್ಲ. ಅದರಲ್ಲಿರುವ ಕಮಿಟಿಯ ಮೆಂಬರುಗಳು ಯಾವ ರಾಜಕೀಯ ಗುಂಪಿಗೆ ಸೇರಿದ್ದಾರೆ ಹೇಳಿ? ಇಂಥದಕ್ಕೆ 118ನೆಯ ಪುಟದಲ್ಲಿ ಬೇರೆ 68,000 ರೂಪಾಯಿಗಳನ್ನು ಕೊಟ್ಟಿದ್ದೀರಿ.

ಸ್ಟೇಡಿಯಂ ಕಟ್ಟಲಿಕ್ಕೆಂದು ಒಂದು ಲಕ್ಷ ರೂಪಾಯಿ ಕೊಟ್ಟಿದ್ದೀರಿ. ದೇಶದ ಮಕ್ಕಳ ದೇಹ ದಾರ್ಢ್ಯವನ್ನು ಜಾಸ್ತಿ ಮಾಡುವುದಕ್ಕೆ ಇಂಡಿಯಾ ಸರ್ಕಾರದವರು ಹಣ ಕೊಡುತ್ತೇವೆಂದು ಹೇಳಿದರೆ, ಅದಕ್ಕೇನಾದರೂ ಇದುವರೆಗೂ ಮಾಡಿದ್ದೀರಾ? ಏನೂ ಇಲ್ಲ. ಈ ಬಗ್ಗೆ ಏನೋ ಒಂದು ರೀತಿ ಮಾಡುತ್ತೇವೆಂದು ಹೇಳಿ ಅದನ್ನು ಜ.ಂ.ಒ.ಅ.ಂ.ಗೆ ಕೊಟ್ಟಿದ್ದೀರಿ?

ಶ್ರೀ ಅಣ್ಣಾರಾವ್ ಗಣಮುಖಿ:- ಅವರಿಗೆ ಕೊಟ್ಟಿಲ್ಲ.

ಶ್ರೀ ಕೆ.ಕೆಂಚಪ್ಪ :- ಕೊಡದೇ ಇದ್ದಮೇಲೆ ಬರುವದುದ್ದನ್ನೇಕೆ ಕಳೆದುಕೊಂಡಿರಿ? ನೀವೇಕೆ Physical Culture Instituti ಅನ್ನು ಪ್ರಾರಂಭ ಮಾಡಲಿಲ್ಲ? ಹೈಸ್ಕೂಲ್ ಉಪಾದ್ಯಾಯರುಗಳು ಬಂದು ಶಿಕ್ಷಣ ಪಡೆದುಕೊಂಡು ಹೋದರಲ್ಲ ಅವರಿಗೆಲ್ಲಿ ನಿಮ್ಮ ಉತ್ತೇಜನ? ನಮ್ಮ ದಕ್ಷಿಣ ಭಾರತದಲ್ಲಿ Physical Culture ಗೆ ಅಷ್ಟೊಂದು ಉತ್ತೇಜನ ಕೊಡುವವರಿಲ್ಲ, ನೀವು ಕೊಡತಕ್ಕ ಉತ್ತೇಜನ ಬಹಳ ಕಡಿಮೆಯೆಂದು ನಾನು ಧಾರಾಳವಾಗಿ ಹೇಳುತ್ತೇನೆ. ಅಂಥಾದ್ದರಲ್ಲಿ ಬಂದದ್ದನ್ನು ಬಿಟ್ಟುಬಿಟ್ಟು ನಮ್ಮ ಮಕ್ಕಳಿಗೆ ಹೇಳಿಕೊಡುವುದಕ್ಕೆ ಇದ್ದ ಅವಕಾಶವನ್ನು ಇಲ್ಲದಂತೆ ಮಾಡಿದ್ದೀರಲ್ಲ? ನಮ್ಮ ಸಂಸ್ಥಾನದಲ್ಲಿ Sports Activitiesಗೆ Physical culture ಗೆ ತಾವು ಕೊಡುತ್ತಿರುವ ಹಣ ತೀರಾ ಕಡಮೆ. ಅಂಥ School ಗಳಿಗಂತೂ ಕಡಮೆಯೆಂದು ಹೇಳಬೇಕಾಗಿಲ್ಲ. ಇದರಿಂದಾಗಿ ನಮ್ಮ ಮಕ್ಕಳ ವಿದ್ಯಾಭ್ಯಾಸ, ಮಕ್ಕಳ ದೇಹದಾರ್ಢ್ಯ ಉತ್ತಮವಾಗುವುದಿಲ್ಲ. ಸುವ್ಯವಸ್ಥೆಯಿಂದ ತಾವೂ ಏನೂ ಮಾಡಿಲ್ಲ. ಹೋದವರ್ಷ ಶ್ರೀ ಮಲ್ಲಾರಾಧ್ಯರೂ ಮತ್ತು ನಾನೂ ಅಷ್ಟು ಹೇಳಿದರೂ ನಿರ್ದಿಷ್ಟವಾಗಿ ಯಾವ ಕಾರ್ಯಕ್ರಮ ತೆಗೆದುಕೊಂಡಿದ್ದೀರಿ! ಎಲ್ಲಿ ಮಾಡಿದ್ದೀರಿ ತೋರಿಸಿಕೊಡಿ. ಅಂಥ ಒಂದು ಸಂಸ್ಥೆ, ಅದಕ್ಕೆ ಸರಿಯಾದ ಒಂದು ವ್ಯವಸ್ಥೆ, ಅದನ್ನು ಹೇಗೆ ಯಶಸ್ವಿಯಾಗಿ ನಡೆಸಿಕೊಂಡು ಹೋಗಬೇಕು ಎಂಬುದನ್ನೇನಾದರೂ ಯೋಚನೆ ಮಾಡಿದ್ದೀರಾ? Football Club Association

ಎಂದು ಏನೋ ಮಾಡಿಬಿಟ್ಟಿರಿ. ಅಷ್ಟೇ; ಅಲ್ಲಿಗೇ ಮುಗಿದುಹೋಯಿತು. ಅದನ್ನು control ಮಾಡುವ ವ್ಯವಸ್ಥೆಯೇನಾದರೂ ಮಾಡಿದ್ದೀರಾ?

ಆಮೇಲೆ ಹಾಸ್ಟಲ್ ಬಿಲ್ಡಿಂಗ್‌ಗಳಿಗೆಂದು ಹತ್ತು ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದೀರಿ. ಎರಡು ಕೋಟಿ ಜನರಿರುವ ಸಂಸ್ಥಾನಕ್ಕೆ ಹತ್ತು ಲಕ್ಷ ರೂಪಾಯಿಗಳನ್ನು ಒದಗಿಸಿದರೆ ಯಾವ ಮೂಲೆಗೆ ಸಾಕು? ಯಾವ ಪ್ರೋಗ್ರಂ ಪ್ರಕಾರ ನೀವು ಹಾಸ್ಟಲುಗಳನ್ನು ಕಟ್ಟಿಸುವವರಾಗಿದ್ದೀರಿ?

Social Welfare Work by College and High School Student ಎಂಬ ಬಾಬಿಗೆ 10,000 ರೂಪಾಯಿಗಳನ್ನು ಕೊಟ್ಟಿದ್ದೀರಿ. ಇದರ ವಿಷಯದಲ್ಲಿ ನನಗೆ ಹೆಚ್ಚಿಗೆ ಅನುಭವ ಇಲ್ಲ. ಒಳ್ಳೆಯದೋ ಕೆಟ್ಟದ್ದೋ ಹೇಳಲಾರೆ. ನಾನು ನೋಡಿದ್ದರಲ್ಲಿ ಇದು ಸರಿಯಾದ ರೀತಿಯಲ್ಲಿ ಖರ್ಚಾಗಿರುವ ಸಂದರ್ಭಗಳು ನನಗೆ ಕಂಡು ಬಂದಿಲ್ಲ. ಅಷ್ಟು ಮಾತ್ರ ನಾನು ಹೇಳಬಯಸುತ್ತೇನೆ.

Grants to Bharathi Scouts and Guides Association ಗೆಂದು 4,500 ರೂಪಾಯಿಗಳನ್ನು ಕೊಟ್ಟಿದ್ದಾರೆ. ಇದರ ಕಾರ್ಯಚಟುವಟಿಕೆಗಳೇನೋ ನನಗೆ ಗೊತ್ತಿಲ್ಲ. ಹಾಗೆಯೇ Seminars and Refresher Courses for Teachers and Head Master ಗೆ 85,000 ರೂಪಾಯಿಗಳನ್ನು ಕೊಟ್ಟಿದ್ದೀರಿ. ಯಾವ ಸ್ಕೀಮ್ ಇದೆ ಈ ಬಗ್ಗೆ? – ಮಾಡುತ್ತಿದ್ದೀರಿ, ದಯವಿಟ್ಟು ಹೇಳಿ. ನಾವು –ಸಭೆಯ ಮೆಂಬರುಗಳಾಗಿದ್ದೂ ಸರ್ಕಾರದವರು ಪ್ರತಿಯೊಂದು ಕಾಸನ್ನೂ ಸರಿಯಾಗಿ ಖರ್ಚು ಮಾಡುತ್ತಿದ್ದಾರೆಯೇ ಇಲ್ಲವೇ ಎಂದು ತಿಳಿದುಕೊಳ್ಳುವುದು ನಮ್ಮ ಕರ್ತವ್ಯ.

ಆಮೇಲೆ, play ground ಗಳನ್ನು ಉತ್ತಮ ಹಾಗೂ ಹೊಸ play ground ಗಳನ್ನು ಏರ್ಪಡಿಸುವುದಕ್ಕೆ ತಾವು ಕೊಟ್ಟಿರುವುದು 'NIL'!! ನಿಜವಾಗಿ ಹೇಳಿ. ತಾವುನಿಜವಾಗಿಯೂ ವಿದ್ಯಾರ್ಥಿಗಳ ಆಟಪಾಠಗಳಿಗೆ Sports..._ಎಳ್ಳಷ್ಟಾದರೂ ಕುತೂಹಲವುಳ್ಳವರಾಗಿದ್ದೀರಾ! ಒಂದಾನೊಂದು ಕಾಲದಲ್ಲಿ ನನಗೆ ಒಬ್ಬರು ಹೇಳುತ್ತಿದ್ದುದು ಈ ಸಮಯದಲ್ಲಿ ಜ್ಞಾಪಕಕ್ಕೆ ಬರುತ್ತದೆ. Exercise—ತೆಗೆದುಕೊಳ್ಳುವವರಿಗೆ ಬುದ್ಧಿ ಕಡಿಮೆಯಾಗುತ್ತದೆ ಎಂದು. ನಮ್ಮ ಋಷಿಗಳು ಹಿಂದೆಲ್ಲಾ _ ಇದ್ದರಲ್ಲಾ, ಅವರಿಗೆಲ್ಲರಿಗೂ ಬುದ್ಧಿ ಕಡಮೆಯಾಗಿತ್ತೇ_ ಹಾಗಾದರೆ, ಸ್ವಾಮಿ ವಿವೇಕಾನಂದರು "A sound—mind in a sound body" ಎಂದು ಹೇಳಿದ್ದು ಸರಿಯಲ್ಲವೇ? ನಾನು ಇದನ್ನು ಸಂಕಟದಿಂದ ಹೇಳುತ್ತಿದ್ದೇನೆ, ಇದನ್ನು ಕನಿಷ್ಠ ರೀತಿಯಿಂದ ಕಾಣುತ್ತಿದ್ದಾರೆ; ಹಾಗೆ ಕಾಣಬಾರದಾಗಿತ್ತು. ನಾನು ಒಬ್ಬ ಸ್ಪೋರ್ಟ್ಸ್‌ಮನ್ ಆಗಿದ್ದೆ. ಎಸ್.ಎಸ್.ಸುಬ್ಬರಾಯರು ನಮ್ಮ ಪ್ರಿನ್ಸಿಪಾಲರಾಗಿದ್ದಾಗ 1927ನೆಯ ಇಸವಿಯಲ್ಲಿ ಕಾಲೇಜಿಗೆ ಕಪ್‌ಬಂದಾಗ ನನ್ನನ್ನು ರೂಮಿಗೆ ಕರೆದು ನೀನೊಬ್ಬನಾದರು ಇದ್ದೀಯಲ್ಲಾ ಎಂದು ಹೇಳಿ ಕಪ್ ಕೊಟ್ಟರು. ದೇಶದ ಪ್ರಗತಿ, ಕಲ್ಯಾಣ ಸಾಧಿಸಬೇಕು. ವೆಲ್‌ಫೇರ್ ಸ್ಟೇಟ್ ನಿರ್ಮಿಸಬೇಕು ಎಂದು ದೊಡ್ಡ ದೊಡ್ಡ ಪದಗಳನ್ನು ಹೇಳುತ್ತಾ ಮಹಾತ್ಮಗಾಂಧಿಯವರ ಶಿಷ್ಯರಾಗಿ ಮೂರುಕಾಸಿನ ಪ್ರಯೋಜನವೂ ಇಲ್ಲದಂತೆ ಮಾಡಬಾರದು. ಫಿಸಿಕಲ್ ಕಲ್ಚರ್‌ಗೆ ಸರಿಯಾದ ಅವಕಾಶ ಕಲ್ಪಿಸಬೇಕು.

ಭಾರತ ಸೇವಾದಳ, ನಾನು ಡಿಸ್ಟ್ರಿಕ್ಟ್ ಬೋರ್ಡ ಪ್ರೆಸಿಡೆಂಟ್ ಆಗಿದ್ದಾಗ ಈ ಸಂಸ್ಥೆಗೆ ಗ್ರಾಂಟ್ ಕೊಡಬೇಕೆಂಬ ಪ್ರಶ್ನೆ ಬಂತು. ದೊಡ್ಡ ದೊಡ್ಡ ಸಮಾರಂಭಗಳಾದಾಗ ಊಟಕ್ಕೆ ಬಡಿಸುವುದು, ಯಾರಾದರೂ ದೊಡ್ಡವರು ಬಂದಾಗ ಕೋಲು ಹಿಡಿದುಕೊಂಡು ಹೋಗುವುದು· ಇದು ಸೇವಾದಳದವರು ಮಾಡುವ ಕೆಲಸ. ಈ ರೀತಿಯಲ್ಲಿ ಕೆಲಸ ಮಾಡುವ ಸಂಸ್ಥೆಗಳಿಗೆ ನಿಮ್ಮ ಪಕ್ಷದ ದೃಷ್ಟಿಯಿಂದ ಖರ್ಚು ಹಾಕಿ ಬೆಳವಣಿಗೆ ಮಾಡುತ್ತಾ ಹೋದರೆ ನಿಮ್ಮ ಪಕ್ಷ ಉದ್ಧಾರವಾಗುವುದಿಲ್ಲ. ನ್ಯಾಯ, ಧರ್ಮ ಎನ್ನುವುದು ಎಲ್ಲಾ ಘಟ್ಟದಲ್ಲೂ ಇದೆ. ಯಾವುದೇ ಕೆಲಸ ಮಾಡಿದರೂ ಅದರಿಂದ ದೇಶಕ್ಕೆ ಉಪಕಾರವಗುವಂತಿರಬೇಕು.

ಕೊನೆಯದಾಗಿ ಒಂದು ವಿಚಾರ, ಈಗ ಫಿಜಿಕಲ್ – ಆದ ಕೈಯಿಲ್ಲದ, ಕಾಲಿಲ್ಲದ, ವ್ಯಕ್ತಿಗಳನ್ನು ಕುಂಟರು, ಕುರುಡರು, ಮೂಕರು ಮುಂತಾದ ವ್ಯಕ್ತಿಗಳಿರುತ್ತಾರೆ. ಅವರುಗಳಿಗೆ ಸಂಪಾದನಾ ಶಕ್ತಿಯನ್ನುಂಟು ಮಾಡಲು ಏನೇನು ವ್ಯವಸ್ಥೆ ಮಾಡಿರುತ್ತೀರಿ? ಅದನ್ನು ಮಾಡಬೇಡವೆ? ಈ ಪೃಥ್ವಿಯಲ್ಲಿ ಯಾವ ಮುಂದುವರಿದ ದೇಶದಲ್ಲಾಗಲಿ ಇದನ್ನು ಮಾಡದೆ ಬಿಟ್ಟಿದ್ದಾರೆಯೇ ಎಂಬುದನ್ನು ಯೋಚನೆ ಮಾಡಿ. ಇದರಲ್ಲಿ ಒಂದು ನಿಯಮವಿದೆ, ಒಂದು ಧರ್ಮ ದೃಷ್ಟಿಯಿದೆ. ಏನೋ ಒಂದು ಮುಗಾಮಿಯಾಗಿ, ಮಕ್ಕಿಕಾಮಕ್ಕಿ ಹಿಂದೆ ಮಾಡುತ್ತಿದ್ದರು, ನಾವೂ ಮಾಡುತ್ತೇವೆ ಎಂದು ಮಾಡಬಾರದು. 2,222 ಪ್ರೈಮರಿ ಸ್ಕೂಲುಗಳನ್ನು ಕೊಟ್ಟರೆ ಮುಗಿಯಿತೆಂದು ಬರೆದುಕೊಂಡಿರುವುದರಲ್ಲಿ ವಿವೇಕವೇನಿದೆ? ಯಾವ ರೀತಿ ಅಳತೆ ಮಡಿದಿರಿ? ಯಾವ ರೀತಿಯಲ್ಲಿ ಲೆಕ್ಕಮಾಡಿ ಮೈಲಿಗೊಂದು ಸ್ಕೂಲು ಮಡುತ್ತೇವೆ, ಒಂದು ಮೈಲಿಯೊಳಗೆ ಪ್ರತಿಯೊಬ್ಬ ಸಂಸ್ಥಾನದ 11 ವರ್ಷದೊಳಗಿರುವ ವಿದ್ಯಾರ್ಥಿಗೂ ಸ್ಕೂಲು ಸ್ಥಾಪಿಸುತ್ತೇವೆ ಎಂದು ಹೇಳಿದಿರಿ! ತಮ್ಮ ವಿವರಣೆಯಲ್ಲಿ ಇಷ್ಟು ವರ್ಷಗಳಲ್ಲಿ ಇಷ್ಟು ಶಾಲೆ ತೆರೆಯುತ್ತೇವೆ, ರಾಜ್ಯಾಂಗದ ಸೂಚನೆ ಪ್ರಕಾರ ಏರ್ಪಾಡು ಮಾಡುತ್ತೇವೆ ಎಂದು ಎಲ್ಲೂ ಹೇಳಿಲ್ಲ. ಆದ್ದರಿಂದ ವಿರುದ್ಧಪಕ್ಷದಲ್ಲಿರುವ ನಾನು ಎಚ್ಚರಿಕೆ ಕೊಡಬೇಕಾದದ್ದು ಕರ್ತವ್ಯವೆಂದು ಇದನ್ನೆಲ್ಲಾ ಹೇಳಿದ್ದೇನೆಯೇ ಹೊರತು ನಿಮ್ಮಮೇಲೆ ದ್ವೇಷಕ್ಕಾಗಲಿ ಅಥವಾ ಯಾರೊಬ್ಬರನ್ನಾಗಲಿ ಟೀಕೆ ಮಾಡಬೇಕೆಂದಾಗಲಿ ಹೇಳಲಿಲ್ಲ. ಯಾರೂ ಬೇರೇನೂ ಅರ್ಥಮಾಡಿಕೊಳ್ಳಬಾರದು, ಇದೆಲ್ಲವನ್ನೂ ಸಂಕಟದಿಂದ ಹೇಳುವುದು, ದೇಶದ ಬಗ್ಗೆ ನಮಗೂ ಕೂಡ ಹೆಚ್ಚಿಗೆ ಇಲ್ಲವೆಂದರೂ ನಿಮ್ಮಷ್ಟಾದರೂ ಅಭಿಮಾನವಿದೆ. ದಯವಿಟ್ಟು ಮುಂದೆ ಈಗಿನಂತೆ ಮಾಡಬೇಡಿ. ಪ್ರಗತಿ ಕುಂಠಿತವಾಗಿರುವ ಈ ದೇಶದಲ್ಲಿ ಜಾಗ್ರತೆಯಾಗಿ ದೇಶವು ಮುಂದುವರಿಯಬೇಕು ಎಂದು ಇಷ್ಟೆಲ್ಲಾ ಹೇಳುತ್ತಿದ್ದೇವೆ. ನಾವು ಹೇಳಿದಂತೆ ವ್ಯವಸ್ಥೆ ಮಾಡದಿದ್ದಲ್ಲಿ ದೇಶದಲ್ಲಿ ಪ್ರಗತಿಯಾಗುವುದಿಲ್ಲ. ಇಂಕಿಲಾಬ್ ಜಿಂದಾಬಾದ್ ಎಂದು ಹೇಳಿದಾಗಕೂಡ ಜಾಗ್ರತೆಯಾಗಿ ಮುಂದುವರಿಯಬೇಕೆಂದೇ ಹೇಳಿದ್ದೇವೆ. ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಉಲ್ಲೇಖಿತವಾಗಿರುವ ಡೈರೆಕ್ಟಿವ್ ಪ್ರಿನ್ಸಿಪಲ್ಸ್ ಮತ್ತು ಹೇಳಿರುವ ವಿಚಾರಗಳಿಗೆ ಎಳ್ಳಷ್ಟೂ ಗಮನಕೊಡದೆ ತಿಲಾಂಜಲಿ ಕೊಟ್ಟರೆ ಏನೇ ಆಗಲಿ ಈ ಬಡ್ಜೆಟ್ಟನ್ನು ಒಪ್ಪುವುದಕ್ಕೆ ಸಾಧ್ಯವಿಲ್ಲ.

* * * * *

# ಕಾಲೇಜು ಸ್ಥಾಪನೆ ಮತ್ತು ಜಾತಿ ಸೋಂಕು!

23 ಜುಲೈ 1957

ಶ್ರೀ ಕೆ.ಕೆಂಚಪ್ಪ (ಹಿರಿಯೂರು):- ತಾವು ಎಷ್ಟಾದರೂ ಕಾಲಾವಕಾಶ ಕೊಡಿ, ಸ್ವಾಮಿ.

**Mr. SPEAKER :-** I do not want to restrict the time in the case of the Leader of the Opposition. In other cases I would like to fix time. It will be ten minutes each.

ಶ್ರೀ .ಕೆ.ಕೆಂಚಪ್ಪ:- ಮಾನ್ಯ ಅಧ್ಯಕ್ಷರೇ, ಈ ವಿದ್ಯಾಭ್ಯಾಸದ ವಿಚಾರವಾಗಿ ಕೇಳಿರತಕ್ಕ ಮೊಬಲಗನ್ನು ಮಂಜೂರು ಮಡುವುದಕ್ಕೆ ಈ ಅಸೆಂಬ್ಲಿಯಲ್ಲಿ ಈಗ ಚರ್ಚೆ ಉದ್ಭವಿಸಿದೆ. ಈ ಡಿಮ್ಯಾಂಡ್ ಪ್ರಕಾರ 10 ಕೋಟಿ 66 ಲಕ್ಷ ಚಿಲ್ಲರೆ ರೂಪಾಯಿಗಳನ್ನು ವಿದ್ಯಾಭ್ಯಾಸಕ್ಕೆ ಕೊಡಬೇಕೆಂದು ಕೇಳಲಾಗಿದೆ. ನಾವು ಮೈಸೂರು ಸಂಸ್ಥಾನದ ಒಟ್ಟು ಉತ್ಪನ್ನವನ್ನು ನೋಡಿದರೆ 50 ಕೋಟಿ 92 ಲಕ್ಷ ಸಾವಿರ ಚಿಲ್ಲರೆ ರೂಪಾಯಿಗಳ ಉತ್ಪನ್ನ ಇದೆ. ವಿದ್ಯಾಭ್ಯಾಸಕ್ಕೆ ಮೀಸಲಾಗಿಡತಕ್ಕ ದುಡ್ಡು ಈ ಉತ್ಪನ್ನದಲ್ಲಿ 1/5 ಭಾಗವಾಗುತ್ತದೆ ಅಥವಾ ಶೇಕಡ 21 ಆಗುತ್ತದೆ. ನಮ್ಮ ಮಾನ್ಯ ಹಣಕಾಸಿನ ಸಚಿವರು ಮೊನ್ನೆ ತಾನೆ ಮಾತನಾಡುವಾಗ " The Expenditure of the State on Education is on the inrease and has now reached a figure of Rs. 11,07,82,000. This represents nearly 30% of the net revenues of the State." ಎಂದು ಹೇಳಿದರು. ನನ್ನ ಲೆಕ್ಕಾಚಾರದ ಪ್ರಕಾರ ಇದು ಅಷ್ಟು ಸರಿಯಾಗುವುದಿಲ್ಲ ಎಂದು ನನ್ನ ಅಭಿಪ್ರಾಯ. ಏಕೆಂದರೆ ಇನ್ನೂ ಒಂದು ಸಾರಿ ಹೇಳುತ್ತೇನೆ. ನಮಗೆ ಕೇಳಿರತಕ್ಕ ಡಿಮ್ಯಾಂಡ್ 10 ಕೋಟಿ 55 ಲಕ್ಷ ಚಿಲ್ಲರೆ ರೂಪಾಯಿ, ಮತ್ತು ನಮ್ಮ ಉತ್ಪನ್ನ 50,92,52,000 ರೂಪಾಯಿ. ಮೆಮೋರ್‍ಯಾಂಡಂ ಪೇಜ್ 1 ರಲ್ಲಿ ಇದು ಇದೆ. ಆದ್ದರಿಂದ ನಾವು ಖರ್ಚು ಮಾಡುವುದಕ್ಕೆ ಹೊರಟಿರತಕ್ಕ ಮೊಬಲಗು ಸುಮಾರು ಶೇಕಡ 21 ರಷ್ಟಾಗುತ್ತದೆ ಎಂದು ಮನವಿ ಮಾಡಿಕೊಳ್ಳುತ್ತೇನೆ. ಶೇಕಡ 21 ರಷ್ಟು ಎಂದರೆ 10 ಕೋಟಿ 55 ಲಕ್ಷ ರೂಪಾಯಿ. ನಮ್ಮ ಸಂಸ್ಥಾನದ ವಿದ್ಯಾಭ್ಯಾಸಕ್ಕೆ ಎಷ್ಟು ಬೇಕೋ ಅಷ್ಟನ್ನು ಒದಗಿಸಿಲ್ಲ.ಅಲ್ಲದೇ ನಮ್ಮ ಸಂಸ್ಥಾನಕ್ಕೆ ಬೇಕಾಗುವಷ್ಟು ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಸಹಿತ ಕಳೆದ 5 ವರ್ಷಗಳಿಂದಲೂ ಮಾಡಿಲ್ಲ. ಅದರಲ್ಲೂ ಈ ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರದಲ್ಲಿ ಅಂತೂ ತುಂಬ ಅಲಕ್ಷ್ಯವಾಗಿದೆ ಎಂಬ ಅಭಿಪ್ರಾಯವನ್ನು ನಾನು ಕೊಡುವವನಿದ್ದೇನೆ. ಹೀಗೆ ಕೊಡುವಾಗ ಮೊದಲನೆಯದಾಗಿ ನಾನು ವಿಶ್ವವಿದ್ಯಾನಿಲಯದ ವಿಚಾರ ಮತ್ತು ಸೆಕೆಂಡರಿ ವಿದ್ಯಾಭ್ಯಾಸದ ವಿಚಾರವನ್ನು ತೆಗೆದುಕೊಂಡು ಅನಂತರ ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರ ಹೇಳುವವನಿದ್ದೇನೆ. ಏಕೆಂದರೆ ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರ ಬಹಳ ಮುಖ್ಯವಾದದ್ದು. ಇದರ ವಿಚಾರದಲ್ಲಿ ನಾವು ಉಪೇಕ್ಷೆ ಮಾಡುವಂತೆ

ಇಲ್ಲ. ನಮ್ಮ ರಾಜ್ಯ ಶಾಸನದ 45 ನೆಯ ವಿಧಿಯ ಪ್ರಕಾರ ಹತ್ತು ವರ್ಷಗಳೊಳಗಾಗಿ 14 ವರ್ಷದ ವಯಸ್ಸಿನ ಪ್ರತಿಯೊಬ್ಬನಿಗೂ ವಿದ್ಯಾಭ್ಯಾಸದ ಸೌಕರ್ಯವನ್ನು ಒದಗಿಸತಕ್ಕದ್ದು. ಪ್ರತಿಯೊಂದು ಸಂಸ್ಥಾನದ ಕರ್ತವ್ಯ ಎಂದು ಆ ಆರ್ಟಿಕಲ್‌ನಲ್ಲಿ ಹೇಳಿದೆ. ಮತ್ತು ನಾವು ನಮ್ಮ ಮೈಸೂರು ಸಂಸ್ಥಾನದಲ್ಲೂ ಸಹಿತ ಎಲಿಮೆಂಟರಿ ಎಜ್ಯುಕೇಷನ್ ಆಕ್ಟ್‌ನ್ನು 1.7.1941ನೆ ಇಸವಿಯಲ್ಲಿ ಜಾರಿಗೆ ತಂದಿದ್ದೇವೆ. ಅದರ ಪ್ರಕಾರವೂ ಸಹ ಸೆಕ್ಷನ್ 25 ರ ಮೇರೆಗೆ ಯಾವ ಯಾವ ಭಾಗದಲ್ಲಿ ಕಡ್ಡಾಯ ವಿದ್ಯಾಭ್ಯಾಸವನ್ನು ಇಟ್ಟುಕೊಂಡಿದೆಯೋ ಅಲ್ಲಿ ಕಡ್ಡಾಯ ವಿದ್ಯಾಭ್ಯಾಸ ಕೊಡಬೇಕು ಸಮತ್ತು ಸೆಕ್ಷನ್ 32 ರ ಪ್ರಕಾರ ಮೈಸೂರು ಸಂಸ್ಥಾನದ ಕೆಲವಾರು ಭಾಗಗಳಲ್ಲಿ ಸ್ವಲ್ಪ ಸ್ವಲ್ಪ ಕಡ್ಡಾಯ ವಿದ್ಯಾಭ್ಯಾಸ ಎಂದರೆ ಅದನ್ನು ಡಿಫೈನ್ ಮಾಡಿದ್ದಾರೆ. ಅದೇನೆಂದರೆ ಒಂದು ಸಾರಿ ವಿದ್ಯಾರ್ಥಿ ಸ್ಕೂಲಿಗೆ ಬಂದರೆ ಅವನು 14 ವರ್ಷ ಮೀರುವವರೆಗೂ ಆ ಸ್ಕೂಲು ಬಿಡುವ ಹಾಗಿಲ್ಲ ಎಂಬ ಒಂದು ವ್ಯವಸ್ಥೆಯನ್ನು ಆ 32 ನೇ ಸೆಕ್ಷನ್‌ನಲ್ಲಿ ಕೊಟ್ಟಿದ್ದಾರೆ. ಇಲ್ಲೂ ಸಹಿತ 10 ವರ್ಷಗಳೊಳಗಾಗಿ ಪ್ರತಿಯೊಂದು ಊರಿನಲ್ಲೂ ಪ್ರಾಥಮಿಕ ಶಾಲೆಗಳು ಇರಲಿಕ್ಕೇ ಬೇಕು ಎಂದು ಹೇಳಿ ಸೆಕ್ಷನ್ 25–32ರ ಪ್ರಕಾರ ಉಲ್ಲೇಖಿಸಲ್ಪಟ್ಟಿದೆ. ಆ ಆಕ್ಟು 1–7–1941 ರಲ್ಲಿ ಜಾರಿಗೆ ಬಂದು ಈಗ 10 ವರ್ಷದ ಅವಧಿ ಮುಗಿದುಹೋಗಿದ್ದರೂ ಸಹ ಮತ್ತು ಅದು ಈಗಲೂ ಜಾರಿಯಲ್ಲಿದ್ದರೂ ಕೂಡ, ಇದುವರೆಗೂ ಕಡ್ಡಾಯ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ನಮ್ಮ ಸಂಸ್ಥಾನದಲ್ಲಿ ತೆಗೆದುಕೊಂಡು ಬರಲಿಲ್ಲ ಮತ್ತು ಆ ವಿಚಾರದಲ್ಲಿ ತುಂಬ ಉಪೇಕ್ಷೆಯಾಗಿದೆ. ನಾನು ಈ ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರ ಕೊನೆಗೆ ಹೇಳುತ್ತೇನೆ ಎಂದು ಹೇಳಿದೆ. ಈಗ ನಾನು ಮೊದಲು ವಿಶ್ವವಿದ್ಯಾನಿಲಯದ ವಿಚಾರವಾಗಿ ಕೆಲವಾರು ಅಭಿಪ್ರಾಯಗಳನ್ನು ಕೊಡುತ್ತೇನೆ. ನಾನು ನನಗೆ ಕೊಟ್ಟಿರುವ ಕಾಲದ ಅವಧಿಯಲ್ಲೇ ಮುಗಿಸಬೇಕೆಂದು ಮನಸ್ಸು ಮಾಡಿಕೊಂಡಿದ್ದೇನೆ. ವಿಶ್ವವಿದ್ಯಾನಿಲಯಕ್ಕೆ ಈ ಬಡ್ಜೆಟ್‌ನಲ್ಲಿ ಮೀಸಲಾಗಿರತಕ್ಕ ಮೊಬಲಗು 1,04,46,600 ರೂಪಾಯಿಗಳು, ಎಂದರೆ ಇದು ನಮ್ಮ ಈ ಬಾಬಿನಲ್ಲಿ ಖರ್ಚಿಗೆ ಮೀಸಲಾಗಿಟ್ಟಿರತಕ್ಕ ಮೊಬಲValidationನಲ್ಲಿ ಹತ್ತರಲ್ಲಿ ಒಂದು ಭಾಗವಾಗುತ್ತದೆ ಅಥವಾ ಶೇಕಡ 10ರಷ್ಟಾಗುತ್ತದೆ. ಈ ಮೊಬಲಗಿನಲ್ಲಿ 56 ಲಕ್ಷ ರೂಪಾಯಿಗಳನ್ನು ಮೈಸೂರು ಸಂಸ್ಥಾನಕ್ಕೆ ಮೀಸಲಾಗಿಟ್ಟಿದ್ದಾರೆ. ಕರ್ಣಾಟಕ ವಿಶ್ವವಿದ್ಯಾನಿಲಯಕ್ಕೆ ಏಳು ಲಕ್ಷ ರೂಪಾಯಿ ಮಾತ್ರ ಇಟ್ಟಿದೆ. ಇದರಲ್ಲಿ ಹತ್ತು ಸಾವಿರ ರೂಪಾಯಿಗಳನ್ನು ಕಟ್ಟಡಕ್ಕೋಸ್ಕರ ಮೀಸಲಾಗಿಟ್ಟಿದೆ. ಇದನ್ನು ನೋಡಿದರೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ತುಂಬ ಹೆಚ್ಚಿಗೆ ಕೊಟ್ಟು ಕರ್ನಾಟಕದಲ್ಲಿರುವ ವಿಶ್ವವಿದ್ಯಾನಿಲಯಕ್ಕೆ ಕಡಮೆ ಹಣವನ್ನು ಕೊಡುವ ಹಾಗೆ ಕಾಣಿಸುತ್ತದೆ. ಅದು ನಮ್ಮ ಮೈಸೂರು ಸಂಸ್ಥಾನಕ್ಕೆ ಈಗತಾನೇ ಸೇರಿರುವುದರಿಂದ ಅಲ್ಲಿ ವಿಶ್ವವಿದ್ಯಾನಿಲಯ ವಿದ್ಯಾಭ್ಯಾಸವು ಹೆಚ್ಚಿಗೆ ಅಭಿವೃದ್ಧಿಗೆ ಬಂದಿದೆಯೋ ಇಲ್ಲವೋ ಎನ್ನುವ ವಿಷಯ. ನನಗೆ ತಿಳಿದಮಟ್ಟಿಗೆ, ನಮ್ಮ ಗಮನಕ್ಕೆ ಅಷ್ಟಾಗಿ ಬಂದಿಲ್ಲ. ಅಲ್ಲಿನ ವಿದ್ಯಾಭ್ಯಾಸ ಮೈಸೂರು ವಿಶ್ವವಿದ್ಯಾನಿಲಯಕ್ಕಿಂತ ಕಡಮೆ ಇರಬಹುದೋ ಏನೋ. ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರದಲ್ಲಿ, ಬೊಂಬಾಯಿ

ಪ್ರಾಂತದಲ್ಲಿ ನಮಗಿಂತ ಮುಂದೆ ಹೋಗಿದ್ದಾರೆಂದು ಅಂಕಿಅಂಶಗಳಿಂದ ಕೆಲವು ಭಾಗ ಕಂಡುಬರುತ್ತದೆ. ಪ್ರಾಥಮಿಕ ಶಾಲೆಗಳ ವಿಚಾರದಲ್ಲಿ ಹಿಂದಿನ ಬೊಂಬಾಯಿ ಪ್ರಾಂತ ಮೈಸೂರಿಗಿಂತ ಖಂಡಿತವಾಗಿಯೂ ಹಿಂದೆ ಬಿದ್ದಿತ್ತು. ಆದರೆ ಸ್ವಾತಂತ್ರ್ಯ ಬಂದ ನಂತರ ಬೊಂಬಾಯಿ ಪ್ರಾಂತದವರು ತುಂಬ ಪ್ರಗತಿದಾಯಕವಾದ ಕಾರ್ಯಗಳನ್ನು ಮಾಡಿ, ಪ್ರಾಥಮಿಕ ವಿದ್ಯಾಭ್ಯಾಸದ ವಿಚಾರದಲ್ಲಿ ಬಹಳವಾಗಿ ಅಭಿವೃದ್ಧಿ ಮಾಡಿದ್ದಾರೆ. ಆದರೆ ನನಗೆ ಕಂಡುಬಂದಿರುವ ಪ್ರಕಾರ ಕರ್ಣಾಟಕ ವಿಶ್ವವಿದ್ಯಾನಿಲಯವು ಅಷ್ಟು ಅಭಿವೃದ್ಧಿಯಾಗಿರಲಿಕ್ಕಿಲ್ಲ. ಆದುದರಿಂದ ಅಲ್ಲಿಗೆ ಉತ್ತೇಜನವನ್ನು ಕೊಡತಕ್ಕದ್ದು ನಮ್ಮ ಕರ್ತವ್ಯವೆಂದು ನನಗನಿಸುತ್ತದೆ.

ಇನ್ನು ವಿಶ್ವವಿದ್ಯಾನಿಲಯದ ವಿಚಾರದಲ್ಲಿ ಕೆಲವಾರು ವಿಷಯಗಳನ್ನು ನಾವು ಆಲೋಚನೆ ಮಾಡಬೇಕಾಗಿದೆ, ಮತ್ತು ನಮ್ಮ ಗಮನಕ್ಕೆ ತೆಗೆದುಕೊಳ್ಳಬೇಕಾಗಿ ಬಂದಿದೆ. ಕೆಲವು ವಿಶ್ವವಿದ್ಯಾನಿಲಯಗಳು ಜಾತಿವಾರು ಪದ್ಧತಿಯ ಮೇಲೆ ಸ್ಥಾಪಿತವಾದುವು ಎನ್ನುವಹಾಗೆ ಕಾಣಿಸುತ್ತದೆ. ಇದಕ್ಕೆ ನಿದರ್ಶನಗಳನ್ನು ಹೇಳಬೇಕೆಂದರೆ, ಬೆಂಗಳೂರು ನಗರ ಕಾರ್ಪೋರೇಷನಲ್ಲಿರುವ ಸೆಂಟ್‌ಜೋಸೆಫ್ಸ್ ಕಾಲೇಜಿದೆ. ಅದೂ ಸಹ ವಿಶ್ವವಿದ್ಯಾನಿಲಯಕ್ಕೆ ಅಫಿಲಿಯೇಟ್ ಆಗಿದೆ. ಅವರ ಕರಿಕ್ಯುಲಂ ನೋಡಿದ್ದೇನೆ. ಕಾರ್ಯಕ್ರಮವ'ನ್ನು ನೋಡಿದ್ದೇನೆ. ಆ ಕಾಲೇಜಿಗೆ ವಿದ್ಯಾರ್ಥಿಗಳನ್ನು ಸೇರಿಸಬೇಕಾದರೆ, ಮೊದಲು ಕ್ಯಾಥೋಲಿಕ್ ಕ್ರಿಶ್ಚಿಯನ್ನಿಗೆ ಸ್ಥಾನ ಕೊಡಬೇಕು. ಅವರಿಗೆ ಕೊಟ್ಟು ಉಳಿದ ಸ್ಥಾನಗಳನ್ನು ಬೇರೆಯವರಿಗೆ ಕೊಡಬೇಕು ಎಂಬ ಕಾರ್ಯಕ್ರಮವಿದೆ. ಹೀಗೆಯೇ ಇನ್ನೂ ಅನೇಕವಿವೆ. ನಾನು ಅವುಗಳನ್ನೆಲ್ಲ ಹೇಳುತ್ತಹೋದರೆ ಕಾಲವಿಳಂಬವಾಗುತ್ತದೆಯಾದುದರಿಂದ ಹೇಳುವುದಿಲ್ಲ. ಅನೇಕ ಖಾಸಗೀ ಕಾಲೇಜುಗಳು ಜಾತೀಯ ಸಂಬಂಧವಾದ ಆಸಕ್ತಿಯಿಂದಿವೆ. ಅವುಗಳಿಗೆ ಈ ರೀತಿ ಇರಲು ಉತ್ತೇಜನ ಕೊಡುತ್ತ ಹೋದರೆ ನಮ್ಮ ಹಿಂದೂಸ್ಥಾನ ಶಾಸನದ ನಿಯಮಗಳಿಗೆ ವಿರೋಧವಾಗಿ ನಾವು ನಡೆದುಕೊಂಡ ಹಾಗಾಗುತ್ತದೆ. ಕೆಲವು ಕಾಲೇಜುಗಳಲ್ಲಿ, ಬಹಳ ಹೆಚ್ಚಿನ ಪ್ರಮಾಣದಲ್ಲಿ ಬ್ರಾಹ್ಮಣ ಉಪಾಧ್ಯಾಯರೇ ಇದ್ದಾರೆ; ಕೆಲವು ಕಡೆ ಲಿಂಗಾಯಿತ ಉಪಾಧ್ಯಾಯರೇ ಹೆಚ್ಚಾಗಿದ್ದಾರೆ. ಹೀಗೆ ನಾನಾ ನಮೂನೆಯಾಗಿ ಇದ್ದಾರೆ. ನಾನು ಇದನ್ನು ಏಕೆ ಹೇಳುತ್ತಿದ್ದೇನೆಂದರೆ ಕಾಲೇಜುಗಳು ಒಂದು ವೇಳೆ ಸ್ಥಾಪಿತವಾಗುವುದಾದರೆ, ಅವುಗಳಲ್ಲಿ ಸಹಿತ ಯಾವ ವಿಧದಿಂದಲೂ ಜಾತಿವಾರು ಸೋಂಕು ಇರಕೂಡದು ಎಂದು ಹೇಳುತ್ತೇನೆ. ಈ ದೃಷ್ಟಿಯಿಂದ ನಾನು ಮಾನ್ಯ ಮಂತ್ರಿಗಳಲ್ಲಿ ನಿವೇದನೆ ಮಾಡಿಕೊಳ್ಳುವುದೇನೆಂದರೆ ಈ ರೀತಿ ಜಾತಿವಾರು ಪದ್ಧತಿ ಎಲ್ಲೆಲ್ಲಿದೆ ಅದನ್ನು ಮೊದಲು ತೆಗೆದುಹಾಕಬೇಕು. ನಾನು ಇನ್ನೂ ಒಂದು ಹೆಜ್ಜೆ ಮುಂದೆಹೋಗುವುದಾದರೆ, aided institutions ಇರುವುದು ಬೇಡ ಎಂದು ಹೇಳುತ್ತೇನೆ. ಏಕೆಂದರೆ, ಸರ್ಕಾರದವರು ಇವೊತ್ತಿನ ದಿವಸ ಕೊಡತಕ್ಕ ಮೊಬಲಗು, ಆ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಂದ ಬರತಕ್ಕ ಫೀ ವರಮಾನ ಮತ್ತು ಅಲ್ಲಿ ನಡೆದುಕೊಂಡುಬರತಕ್ಕ ವಿಧಾನ ಇವುಗಳನ್ನು ನೋಡಿದರೆ, ಅಲ್ಪಸ್ವಲ್ಪ ಸ್ವಂತ ಕಾಲೇಜುಗಳಿಂದ ಅವರಿಗೇ ಖರ್ಚು ಹಾಕಿಕೊಂಡು

ವಿದ್ಯಾರ್ಥಿಗಳಿಂದ ಬರಬೇಕಾದ ಶುಲ್ಕದಲ್ಲಿ ಹೆಚ್ಚಿಗೆ ತೆಗೆದುಕೊಂಡು, ಇನ್ನೂ ನಾನಾ ನಮೂನೆಯಾಗಿ ಉತ್ಪತ್ತಿ ಮಾಡಿ, ಸರ್ಕಾರದ ಖರ್ಚೇ ಹೆಚ್ಚಾಗಿರತಕ್ಕ ಸಂದರ್ಭ ಕಂಡುಬರುತ್ತದೆ. ಅಂಥ ವ್ಯವಸ್ಥೆ ಇರುವಾಗ ನಾವುಗಳು ಈ ಕಾಲೇಜುಗಳನ್ನು ಸ್ವಂತವಾಗಿ ಉಳಿಯಲು ಏಕೆ ಬಿಡಬೇಕು? ಸರ್ಕಾರದವರೇ ಏಕೆ ಇವನ್ನು ತೆಗೆದುಕೊಂಡು ಒಂದು ನೀತಿ ನಿಯಮಕ್ಕೆ ಅನುಸಾರವಾಗಿ ಇವುಗಳನ್ನು ನಡೆಸಬಾರದು ಎನ್ನತಕ್ಕ ಒಂದು ಪ್ರಶ್ನೆ ಇದರಲ್ಲಿ ಉದ್ಭವಿಸುತ್ತದೆ. ಇದನ್ನು ಸಹಿತ ಸರ್ಕಾರದವರ ಅವಗಾಹನೆಗೆ ತಂದಿದೇನೆ.

ಕೆಲವು ಟೆಕ್ನಿಕಲ್ ಕಾಲೇಜುಗಳಿವೆ. ನಾವು ಟೆಕ್ನಿಕಲ್ ಕಾಲೇಜುಗಳ ವಿಚಾರದಲ್ಲಿ ತುಂಬ ಉಪೇಕ್ಷೆಯಿಂದಿದ್ದೇವೆಂದರೆ ತಪ್ಪಾಗಲಾರದು. ಕೆಲವು ಟೆಕ್ನಿಕಲ್ ಕಾಲೇಜುಗಳಲ್ಲಿ ಸರಿಯಾದ ಸಲಕರಣೆಗಳಿಲ್ಲ. ಸಲಕರಣೆಗಳನ್ನು ಒದಗಿಸಲು ಸರಿಯಾದ ವ್ಯವಸ್ಥೆ ಮಾಡುತ್ತಿಲ್ಲ. ಸಲಕರಣೆಗಳಿಲ್ಲದಿದ್ದರೆ ಟೆಕ್ನಿಕಲ್ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುವುದಕ್ಕೆ ತುಂಬ ಕಷ್ಟವಾಗುತ್ತದೆ. ಇದು ಎಲ್ಲರಿಗೂ ಗೊತ್ತಿರತಕ್ಕ ವಿಚಾರ. ಇನ್ನೊಂದು ವಿಚಾರವನ್ನು ಹೇಳುತ್ತೇನೆ. ಸ್ವಲ್ಪ ದಿವಸಗಳಲ್ಲಿ ಹುಬ್ಬಳ್ಳಿಯಲ್ಲಿ ಒಂದು ಮೆಡಿಕಲ್ ಕಾಲೇಜು ಸ್ಥಾಪನೆಯಾಗುವುದಿದೆ. ನಾನು ಅತಿ ವಿನಯದಿಂದ ಕೇಳುತ್ತೇನೆ. ಆ ಕಾಲೇಜಿನಲ್ಲಿ ಎಷ್ಟರಮಟ್ಟಿಗೆ ಸರಿಯಾದ ವಿದ್ಯಾಭ್ಯಾಸ ಮಾಡುವುದಕ್ಕೆ ಸಲಕರಣೆಗಳಿವೆ. ಎಷು ಜನ ಸ್ಪೆಷಲೈಸ್ಡ್ ಡಾಕ್ಟರುಗಳಿದ್ದಾರೆ. ಎಷ್ಟು ಆಸ್ಪತ್ರೆಗಳಿವೆ, ಅಥವ ಅಲ್ಲಿನ ಆಸ್ಪತ್ರೆಗಳಲ್ಲಿರತಕ್ಕ ಸಲಕರಣೆಗಳನ್ನು ಉಪಯೋಗಿಸಿ ಕೆಲವಾರು ಅಭ್ಯಾಸಗಳನ್ನು ಮಾಡಿಸುತ್ತೀರಾ ಅಥವಾ ಕಾಲೇಜಿಗೇ ಸ್ವಂತವಾಗಿ ಸಲಕರಣೆಗಳನ್ನು ಒದಗಿಸುತ್ತೀರಾ ಎಂದು ಕೇಳುತ್ತೇನೆ. ಈ ಪ್ರಶ್ನೆಗಳು ಸಹಿತ ಉದ್ಭವಿಸುತ್ತವೆ. ಈ ದೃಷ್ಟಿಯಿಂದ ನೋಡಿದರೆ, ಒಂದು ಕಾಲೇಜನ್ನು ಸ್ಥಾಪನೆ ಮಾಡುವಾಗ ಅದು ಸಮರ್ಪಕವಾಗಿ ಕೆಲಸ ಮಾಡಲು ಯಾವಯಾವ ಸಲಕರಣೆಗಳು ಬೇಕು, ಯಾವ ಪ್ರಮಾಣದಲ್ಲಿ ಬೇಕು, ಎಷ್ಟರಮಟ್ಟಿಗೆ ಅದನ್ನು ಆಗಮಾಡಬೇಕು ಎನ್ನುವ ವಿಚಾರವನ್ನು ಯೋಚನೆ ಮಾಡುತ್ತಿಲ್ಲವೆಂದು ನನ್ನ ಗಮನಕ್ಕೆ ಬರುತ್ತದೆ. ಆದುದರಿಂದ ತಾವು ದಯವಿಟ್ಟು ಈ ವಿಚಾರವಾಗಿ ಉಪೇಕ್ಷೆಯಿಂದ ಇರಬಾರದು. ಏಕೆಂದರೆ ಒಂದು ಕಾಲೇಜನ್ನು ಸ್ಥಾಪನೆ ಮಾಡಿದರೆ ಅದು ಸ್ವಪರಿಪೂರ್ಣವಾಗಿರಬೇಕು. ಸ್ವಪರಿಪೂರ್ಣವಾಗಿಲ್ಲದೆ ಇರುವ ಕಾಲೇಜುಗಳಿಂದ ಬಂದಿರತಕ್ಕವರ ವಿದ್ಯಾಭ್ಯಾಸ ಅಷ್ಟು ಸಮರ್ಪಕವಾಗಿರುವುದಿಲ್ಲ; ಅವರಿಗೆ ಎಲ್ಲ ವಿಚಾರವೂ ಸರಿಯಾಗಿ ಗೊತ್ತಾಗಿರುವುದಿಲ್ಲ. ನಾನು ಈ ವಿಷಯವನ್ನು ಮೆಡಿಕಲ್ ಕಾಲೇಜುಗಳ ಬಗ್ಗೆ ಮಾತ್ರ ಹೇಳುತ್ತಿಲ್ಲ. ಈಗ ಮೂರು ವರ್ಷದ ಕೆಳಗೆ ಮಾಡರ್ನ್ ರೆವ್ಯೂನಲ್ಲಿ ಒಮದು ವಿಷಯವನ್ನು ಓದಿದೆ. ಅದನ್ನು ಸಭೆಯ ಗಮನಕ್ಕೆ ತರಬಯಸುತ್ತೇನೆ. ನಮ್ಮ ಹಿಂದೂಸ್ತಾನದ ವಿದ್ಯಾರ್ಥಿಗಳು ಪರದೇಶಕ್ಕೆ ವಿದ್ಯಾಭ್ಯಾಸ ಮಾಡುವುದಕ್ಕೆ ಹೋದರೆ, ಬಹಳ ಹಿಂಜರಿದು ಅವರಿಗೆ ಸ್ಥಳ ಕೊಡತಕ್ಕ ಪದ್ಧತಿ ಪರದೇಶಗಳಲ್ಲಿದೆ ಎಂದು ಓದಿದ್ದೇನೆ. ಇದನ್ನು ಏಕೆ ಹೇಳಿದೆನೆಂದರೆ, ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ಸ್ಟ್ಯಾಂಡರ್ಡ್ ಬಹಳ ಕಡಮೆ ಇದೆ. ಆದುದರಿಂದ ನಾವು ವಿದ್ಯಾಭ್ಯಾಸದ ಅಂತಸ್ತನ್ನು ಹೆಚ್ಚಿಗೆ ಮಾಡಬೇಕು ಎಂದು ನಿಜವಾದ ಅಭಿಪ್ರಾಯವಿದ್ದ

ಭಾಗದಲ್ಲಿ ಯಾವುದೇ ಒಂದು ವ್ಯವಸ್ಥೆಯನ್ನು ಮಾಡಿದರೂ ಸಹ, ಅದನ್ನು ಕ್ರಮವಾಗಿ, ವ್ಯವಸ್ಥಿತವಾಗಿ ಮತ್ತು ಸಂಪೂರ್ಣವಾಗಿ ಮಾಡಿ, ಅದಕ್ಕೆ ಬೇಕಾಗತಕ್ಕ ಪ್ರತಿಯೊಂದು ಸಲಕರಣೆಗಳನ್ನು ಒದಗಿಸದೆ ಹೋದರೆ ಖಂಡಿತವಾಗಿ ವಿದ್ಯಾಭ್ಯಾಸ ಸರಿಯಾಗಿ ಆಗುವುದಿಲ್ಲ. ಪ್ರೊಫೆಸರುಗಳಾದರೂ ಸಹಿತ, ಎಷ್ಟರಮಟ್ಟಿಗೆ ನಮ್ಮಲ್ಲಿದ್ದಾರೆಂದು ಆಲೋಚನೆ ಮಾಡಬೇಕಾಗಿ ಬರುತ್ತದೆ. ಈ ವಿಚಾರವನ್ನು ತಮ್ಮಲ್ಲಿ ಹೇಳುವಾಗ ಒಂದು ವಿಷಾದವಾದ ಪ್ರಕರಣ ಹೇಳಬೇಕಾಗುತ್ತದೆ. ಕೆಲವು ಕಾಲೇಜುಗಳಲ್ಲಿ ಎಷ್ಟು ಪ್ರೊಫೆಸರುಗಳಿರಬೇಕೋ, ಎಷ್ಟು tutors ಇರಬೇಕೋ, ಎಷ್ಟು lecturers ಇರಬೇಕೋ ಅಷ್ಟು ಇರುವುದಿಲ್ಲ. ಚಿತ್ರದುರ್ಗ ಕಾಲೇಜಿನಲ್ಲಿ, ಈಗ್ಗೆ ಒಂದು ವರ್ಷದ ಕೆಳಗೆ ಉಪಾಧ್ಯಾಯರೇ ಇಲ್ಲದೆ ಸತ್ಯಾಗ್ರಹ ನಡೆಯಿತು. ಅಲ್ಲಿ ಸತ್ಯಾಗ್ರಹ ನಡೆಯಿತು. ಅಲ್ಲಿ ಸತ್ಯಾಗ್ರಹ ನಡೆದು, ಪರೀಕ್ಷೆ ಸಮೀಪಿಸಿದರೂ ಪಾಠ ಹೇಳತಕ್ಕವರೇ ಇಲ್ಲದೆ ಇತ್ತು. ಈ ರೀತಿಯಾಗಿ ಆಗಿ ದೇಶದಲ್ಲಿ ವಿಶ್ವವಿದ್ಯಾನಿಲಯದ ವ್ಯವಸ್ಥೆಯನ್ನು ಬಹಳ ಕನಿಷ್ಠವಾಗಿ ಜನರು ಕಾಣುವ ರೀತಿಯಲ್ಲಿ ನಾವು ನಡೆದುಕೊಂಡು ಬಂದಿದ್ದೇವೆ. ಇದರ ವಿಚಾರದಲ್ಲಿ ಏನೇ ಕಷ್ಟವಿರಲಿ, ಪಾಠಗಳನ್ನು ಹೇಳಿಕೊಡಲು ಬೇಕಾಗುವ ಸಲಕರಣೆಗಳನ್ನು ತಾವು ಸರಿಯಾಗಿ ಒದಗಿಸದೆಹೋದರೆ, ಮತ್ತು ಆಗಿಂದಾಗ್ಗೆ ಬದಲಾವಣೆ ಮಾಡುವುದಕ್ಕೆ ಅಲ್ಲಿನ ಪ್ರೊಫೆಸರುಗಳಿಗೇ, ಲೆಕ್ಚರರುಗಳಿಗೇ ಅಥವಾ ಸೂಪರಿಂಟೆಂಡೆಂಟರಿಗೇ ಜವಾಬ್ದಾರಿಯನ್ನು ಗೊತ್ತುಮಾಡದೆ ಹೋದರೆ, ನಮ್ಮ ವಿದ್ಯಾಭ್ಯಾಸದ ,ಣಚಿಟಿಜಚಿಡಿಜ ಎನ್ನತಕ್ಕದ್ದು ಎಂದಿಗೂ ಉತ್ತಮವಾಗಲಾರದೆಂಬ ಅಭಿಪ್ರಾಯವನ್ನು ಹೇಳುತ್ತಿದ್ದೇವೆ.

ಕೆಲವು ಟೆಕ್ನಿಕಲ್ ಕಾಲೇಜುಗಳಲ್ಲಿ ಬಹಳ ಅನ್ಯಾಯಗಳು ನಡೆಯುತ್ತಿವೆ. ಅದನ್ನು ನಾವು ಎಷ್ಟು ಎಮದು ಹೇಳುವ ಹಾಗಿಲ್ಲ. ಕೆಲವು ಕಾಲೇಜುಗಳಲ್ಲಿ ಅಡ್ಮಿಷನ್‌ಗೆ ಹೋದರೆ ಬೇಕಾದಷ್ಟು ವ್ಯಾಪಾರ ನಡೆಯುತ್ತದೆ. ಈ ರೀತಿ ಬಹಳ ವರ್ಷಗಳಿಂದ ನಡೆಯುತ್ತಿದೆ. ಬೆಂಗಳೂರಿನಲ್ಲಿರುವಮೆಡಿಕಲ್ ಕಾಲೇಜನ್ನು ತೆಗೆದುಕೊಂಡರೆ ಅಲ್ಲಿ ಈ ರೀತಿ ಮಾಡುವುದಕ್ಕೆ ಸರ್ಕಾರದವರೇ ಅನುಮತಿ ಕೊಟ್ಟಹಾಗೆ ಇದೆ. ಆ ಕಾಲೇಜಿನಲ್ಲಿ ಶೇಕಡ 50ರಷ್ಟು ಸೀಟುಗಳಿಗೆ ಮೂರು ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳಬಹುದೆಂದೂ, ಉಳಿದ ಸೀಟುಗಳನ್ನು ಬೇರೆಯವರಿಗೆ ಕೊಡಬೇಕೆಂದೂ ನಿಗದಿಮಾಡಿದ ಹಾಗೆ ಕಾಣುತ್ತದೆ.

ವಿದ್ಯಾಭ್ಯಾಸದ ವಿಚಾರದಲ್ಲಿ ಒಂದು ಸರಿಯಾದ ಪದ್ಧತಿಯು ಇದ್ದು ಕಾಲೇಜುಗಳಿಗೆ ಪ್ರವೇಸ ದೊರಕುವ ವಿಷಯವಾಗಿ ಸಮಾನವಾದ ಅನುಕೂಲತೆಯನ್ನು ಒದಗಿಸುವಂತೆ ಇರಬೇಕು. ಮೂರು ಸಾವಿರ ರೂಪಾಯಿ ಕೊಟ್ಟರೆ ಆಡ್ಮಿಷನ್ ದೊರಕುವ ಹಾಗಾದರೆ ಯೋಗ್ಯತೆಯು ಇಲ್ಲದ ವಿದ್ಯಾರ್ಥಿಗಳು ಹಣದ ಬಲದಿಂದ ಕಾಲೇಜಿನಲ್ಲಿ ಪ್ರವೇಶವನ್ನು ದೊರಕಿಸಿಕೊಳ್ಳುವರು. ಯೋಗ್ಯತೆಯುಳ್ಳ ವಿದ್ಯಾರ್ಥಿಗಳಿಗೆ ಪ್ರವೇಶವೇ ದೊರಕುವುದಿಲ್ಲ. ನಾಲ್ಕೈದು ಸಾವಿರ ರೂಪಾಯಿ ಕೊಡತಕ್ಕಂಥವರಿಗೆ ಕಾಲೇಜಿನಲ್ಲಿ ಸೀಟು ಕೊಡಬೇಕೆಂಬ ಪದ್ಧತಿಯು ಹಾಗಿಬಂದಿದೆ. ಮಂಗಳೂರು ಕಾಲೇಜಿನಲ್ಲಿ ಅನಿಷ್ಟ

ಪದ್ಧತಿಯು ಇದೆ ಎಂದು ಕೇಳಿದ್ದೇನೆ. ಯೋಗ್ಯತೆಯ ಮೇಲೆ ಸೀಟು ಕೊಡತಕ್ಕಂಥ ಪದ್ಧತಿಯು ಇರಬೇಕು. ನಮ್ಮ ಕಾನ್ಸ್ಟಿಟ್ಯೂಷನ್ನಿನಲ್ಲಿ ಸಹ ಪ್ರತಿಯೊಬ್ಬರಿಗೂ ಸಮಾನವಾದ ಅವಕಾಶವು ಇರಬೇಕೆಂದು ಇದೆ. ಆದುದರಿಂದ ಎಲ್ಲರಿಗೂ ಸಮಾನವಾದ ಅವಕಾಶವಿರಬೇಕು. ಇಲ್ಲವಾದರೆ ಈ ಪದ್ಧತಿಯು ಒಂದು ಉಚ್ಚ ನೀತಿಗೆ ವಿರೋಧವಾಗುತ್ತದೆ. ಧರ್ಮದ ದೃಷ್ಟಿಯಿಂದ ಈ ಪದ್ಧತಿಯನ್ನು ತಡೆಗಟ್ಟಬೇಕು. ನಾನು ಪದೇಪದೇ ಉಪಯೋಗಿಸುವ ಪದಗಳನ್ನು ಪುನಃ ಹೇಳಬೇಕಾಗುತ್ತದೆ. Double thinking and double action ಆಗಕೂಡದು. ಸರಕಾರದವರು ಇಂಥ ಸಂಸ್ಥೆಗಳನ್ನು ವಹಿಸಿಕೊಳ್ಳಬೇಕು. ಇಲ್ಲವಾದರೆ ಸೂಕ್ತ ಹತೋಟಿ ಹೊಂದಿರಬೇಕು. ನಮ್ಮ ದೇಶದಲ್ಲಿ casteless society ಮತ್ತು classless society ಸ್ಥಾಪನೆ ಮಾಡುವ ಉದ್ದೇಶವನ್ನು ಇಟ್ಟುಕೊಂಡಿದ್ದೇವೆ. ಹಾಸ್ಟೆಲುಗಳಿಗೋಸ್ಕರ ಕೊಡತಕ್ಕಂಥ ಗ್ರಾಂಟುಗಳ ಲಿಸ್ಟು ನೋಡಿದರೆ ನಿಮ್ನ ವರ್ಗದವರ ಸಲುವಾಗಿ ಒಂದು ದೊಡ್ಡ ಲಿಸ್ಟು ಇದೆ. ಒಡ್ಡರು, ಕುರುಬರು, ಚಲವಾದಿದ ಮಾದಿಗರು, ಹರಿಜನರು, ಲಂಬಾನಿಗರು ಇವರಿಗಾಗಿ ಬೇರೆಬೇರೆ ಹಾಸ್ಟೆಲುಗಳು ಇವೆ. ಸರಕಾರದವರು ಇಷ್ಟು ಹಣವನ್ನು ಖರ್ಚು ಮಾಡಿದರೂ ಅಸ್ಪ್ರಶ್ಯತ ನಿವಾರಣೆಯು ಆಗುವುದಿಲ್ಲ. ಅಸ್ಪೃಶ್ಯತಾ ನಿವಾರಣೇ ಮಾಡಲಾಗುತ್ತಿದೆ ಎಂದು ಹೇಳಿದರೂ ಅಸ್ಪೃಶ್ಯತೆಯು ಹೆಚ್ಚು ಆಗುತ್ತಾ ಇದೆ. ಹರಿಜನರಿಗೆ, ನಿಮ್ನವರ್ಗದವರಿಗೆ ಎಷ್ಟು ಬೇಕೋ ಅಷ್ಟು ಹೆಚ್ಚಾಗಿ ಸೌಕರ್ಯ ಒದಗಿಸಿ ಕೊಡಬಹುದು. ಆದರೆ ಬೇರೆಬೇರೆ ಜಾತಿಯವರಿಗೆ ಬೇರೆ ಬೇರೆ ಹಾಸ್ಟೆಲುಗಳನ್ನು ವಸತಿ ಸೌಕರ್ಯವನ್ನು ಒದಗಿಸಿಕೊಟ್ಟರೆ ಅಸ್ಪೃಶ್ಯತಾ ನಿವಾರಣೆಗೆ ಸಹಾಯಕವಾಗುವುದಿಲ್ಲ. ಕೆಲವು ದಿವಸಗಳ ಹಿಂಥೆ ಇದನ್ನು ನಮ್ಮ ರಾಷ್ಟ್ರಾಧ್ಯಕ್ಷರಿಗೆ ಬರೆದು ಕೇಳಿದ್ದೇನೆ. ಹಿಂದುಳಿದವರ್ಗದ ಕಮೀಷನರಾದ ಶ್ರೀ ಎಲ್.ಎಂ.ಶ್ರೀಕಾಂತರವರು ನಮ್ಮ ಸಂಸ್ಥಾನಕ್ಕೆ ಬಂದಾಗ ಈ ಪ್ರಶ್ನೆಯನ್ನು ನಾನು ಎತ್ತಿದಾಗ ಹಿಂದುಳಿದವರ್ಗದ ಸ್ಪೆಷಲ್ ಆಫೀಸರರು ಸಹ ಇದ್ದರು. ಈ ರೀತಿಯಾಗಿ ಬೇರೆಬೇರೆ ಜಾತಿಯವರಿಗೆ ಬೇರೆಬೇರೆ ಹಾಸ್ಟೆಲುಗಳನ್ನು ಮಾಡುವುದರಿಂದ ಅಸ್ಪೃಶ್ಯತಾ ನಿವಾರಣೆಗೆ ಸಹಾಯಕವಾಗುವುದಿಲ್ಲ. ತದ್ವಿರುದ್ಧವಾಗಿ ಅಸ್ಪೃಶ್ಯತೆಗೆ ಹೆಚ್ಚಾಗಿ ಸಹಾಯಕವಾಗುತ್ತದೆ ಎಂದು ನಾನು ಹೇಳಿದ್ದೇನೆ. ಹೀಗೆ ನಮಗೆ ಯಾರೂ ತಿಳಿಯಪಡಿಸಿಲ್ಲವೆಂದು ಅವರು ಹೇಳಿದರು. ನಮ್ಮ ರಾಜ್ಯದಲ್ಲಿರುವ ಪಾಲಿಸಿ ಕಮಿಟಿಯ ಅಧ್ಯಕ್ಷರು ನಮ್ಮ ಮುಖ್ಯಮಂತ್ರಿಗಳು ಆಗಿದ್ದಾರೆ. ಈ ವಿಚಾರದಲ್ಲಿ ಪಾಲಿಸಿ ಕಮಿಟಿಯವರು ಏನು ನಿಗದಿ ಮಾಡಿದ್ದಾರೆಂದು ಕೇಳಿದರೆ ಅವರು ಏನೂ ಉತ್ತರ ಕೊಡಲಿಲ್ಲ. ನಿಮ್ನವರ್ಗದವರಿಗೆ ಪ್ರತ್ಯೇಕ ಹಾಸ್ಟೆಲು ಸ್ಥಾಪಿಸಿರುವುದರಿಂದ ಅಸ್ಪೃಶ್ಯತೆ ಹೋಗುವುದಿಲ್ಲ. ಹೀಗೆ ಮಾಡಿದರೆ ಅಸ್ಪೃಶ್ಯತೆ ನಿವಾರಣೆ ಮಾಡುವುದು ಬೂಟಾಟಿಕೆ ಆಗುವುದು ಎಂದು ಸ್ಪಷ್ಟವಾಗಿ ಹೇಳಬೇಕಾಗಿದೆ. ನಿಮ್ನವರ್ಗದವರ ವಿದ್ಯಾಭ್ಯಾಸದ ಸಲುವಾಗಿ ಎರಡರಷ್ಟು ಖರ್ಚು ಮಾಡಬಹುದು. ಈ ಪದ್ಧತಿಯನ್ನು ಎಲ್ಲಿಯವರೆಗೆ ಜಾರಿಯಲ್ಲಿ ಇಟ್ಟುಕೊಂಡು ಬರುತ್ತೀರೋ ಅಲ್ಲಿಯವರೆಗೆ ಅಸ್ಪೃಶ್ಯತಾ ನಿವಾರಣೆಯಾಗುವುದಿಲ್ಲ. ಜಾತಿ ಜಾತಿಗಳೊಳಗಿನ ಅಂತರವು ದೊಡ್ಡದು

ಆಗುತ್ತಾ ಹೋಗುತ್ತದೆ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ವ್ಯತ್ಯಾಸ ಕಾಣುತ್ತದೆ. ಇದನ್ನು ಸರ್ಕಾರವರು ತೀವ್ರವಾಗಿ ಆಲೋಚನೆಮಾಡಿ ಜಾಗ್ರತೆಯಾಗಿ ತೀರ್ಮಾನಕ್ಕೆ ಬರಬೇಕು. ಹರಿಜನರ ವಿದ್ಯಾಭ್ಯಾಸಕ್ಕೆ ಇಂಡಿಯಾ ಸರ್ಕಾರದವರು ಹಣದ ಸಹಾಯ ಮಾಡುತ್ತಿದ್ದಾರೆ. ಆದುದರಿಂದ ಇದನ್ನು ಬಹಳ ಎಚ್ಚರದಿಂದ ಆಲೋಚನೆ ಮಾಡಬೇಕಾಗಿದೆ.

ಕಾಲೇಜುಗಳು ಹೆಚ್ಚಾಗುತ್ತಾ ಇವೆ. ಆದರೆ ಕಾಲೇಜುಗಳಲ್ಲಿ ಲೆಕ್ಚರರ್ಸ್, ಟ್ಯೂಟರ್ಸ್, ಪ್ರೊಫೆಸರ್ಸ್ ಇವರ ಸಂಖ್ಯೆ ಹೆಚ್ಚುತ್ತಿಲ್ಲ. ಉಪಾಧ್ಯಾಯರುಗಳ ಸಂಖ್ಯೆ ಕಡಮೆಯಾಗುತ್ತಾ ಇದೆ. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಿದ್ದರೂ ಅದೇ ಪ್ರಮಾಣದಲ್ಲಿ ಉಪಾಧ್ಯಾಯರು ಪ್ರೊಫೆಸರ್ಸ್, ಲೆಕ್ಚರರ್ಸ್, ಟ್ಯೂಟರ್ಸ್ ಇವರ ಸಂಖ್ಯೆ ಹೆಚ್ಚು ಮಾಡುವುದಕ್ಕೆ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಇದರಿಂದ ವಿದ್ಯಾಭ್ಯಾಸದ ಮಟ್ಟವು ಬಹಳ ಕಡಮೆಯಾಗುತ್ತಿದೆ. ಆದಕಾರಣ ಈ ವಿಚಾರವನ್ನು ಆಲೋಚನೆ ಮಾಡಬೇಕಾಗಿದೆ.

ಸೆಕೆಂಡರಿ ಎಜ್ಯುಕೇಷನ್ನಿನ ಸಲುವಾಗಿ ಮೀಸಲಾಗಿ ಇಟ್ಟಿರತಕ್ಕಂಥ ಹಣವು 1,15,87,600 ರೂಪಾಯಿ ಆಗಿದೆ. ಯೂನಿವರ್ಸಿಟಿ ವಿದ್ಯಾಭ್ಯಾಸಕ್ಕಾಗಿ ಕೊಡತಕ್ಕ ಹಣವು ಒಟ್ಟು ಹಣದ ಹತ್ತರಲ್ಲಿ ಒಂದು •ಪಾಲು ಎಂದರೆ ಶೇಕಡಾ ಹತ್ತರಷ್ಟು ಆಗುತ್ತದೆ. ಇದರಿಂದ ಯೂನಿವರ್ಸಿಟಿ ವಿದ್ಯಾಭ್ಯಾಸದ ಮಟ್ಟವು ಕಡಮೆಯಾಗಿದೆ. Laboratory equipment ಉತ್ತಮಪಡಿಸಲು ಆಗುವುದಿಲ್ಲ. ಹಿಂದಕ್ಕೆ 1916ರಲ್ಲಿ ಎಷ್ಟು ಹಣ ಕೊಡುತ್ತಿದ್ದರೋ ಅಷ್ಟೇ ಹಣವನ್ನು ಈಗಲೂ ಸಹ ಕೊಡಲಾಗುತ್ತಿದೆ. ಆ ಕಾಲದಲ್ಲಿ equipment ಸಲುವಾಗಿ ಎಷ್ಟು ಖರ್ಚು ಬರುತ್ತಿತ್ತೋ ಅಷ್ಟು ಹಣ ಗೊತ್ತುಮಾಡಲಾಗಿದೆ. ಆದರೆ ಈಗ ಅದೇ equipment ಅನ್ನು ಕೊಂಡುಕೊಳ್ಳಬೇಕಾದರೆ ಬೆಲೆ ವಿಪರೀತವಾಗಿ ಜಾಸ್ತಿಯಾಗಿಬಿಟ್ಟಿದೆ. ಈಗ ಕೊಡುತ್ತಿರುವ ಹಣ ಸಾಕಾಗುವುದಿಲ್ಲ. ಇಂದಿಗೂ ಅದನ್ನೇ ಮುಂದುವರಿಸಿಕೊಂಡು ಬಂದರೆ ಸಾಮಾನುಗಳನ್ನು ಕೊಂಡುಕೊಳ್ಳಲು ಆಗುವುದಿಲ್ಲ. ಹೀಗಾಗುವುದರಿಂದ ಪ್ರಾಕ್ಟಿಕಲ್ ಕ್ಲಾಸಸ್ ಸರಿಯಾಗಿ ನಡೆಸಲು ಆಗುವುದಿಲ್ಲ. ಇದರಂತೆಯೇ ಹೈಸ್ಕೂಲುಗಳಲ್ಲಿಯೂ ಕೂಡ ಪ್ರಾಕ್ಟಿಕಲ್ಸ್ ಸಲುವಾಗಿ ಸರಿಯಾದ equipment ಇರುವುದಿಲ್ಲ. ಮುನಿಸಿಪಲ್ ಹೈಸ್ಕೂಲು ಆಗಲಿ, ಜಿಲ್ಲಾ ಬೋರ್ಡ್ ಹೈಸ್ಕೂಲ್ ಆಗಲಿ, ಬೇರೆ ಯಾವುದೇ ಹೈಸ್ಕೂಲ್ ಆಗಲಿ ಅಲ್ಲಿ Laboratory equipment for practical classes ಸರಿಯಾಗಿಲ್ಲ. ನಾನು ಆರು ವರ್ಷ ಜಿಲ್ಲಾಬೋರ್ಡ್ ಅಧ್ಯಕ್ಷನಾಗಿ ಐದು ಶಾಲೆಗಳನ್ನು ನಡೆಸಿ ಬಂದ ಅನುಭವದಿಂದ ಇದನ್ನು ಹೇಳುತ್ತಿದ್ದೇನೆ. ಈಗ ನಿಗದಿ ಮಾಡಿದ ಹಣದ ನಾಲ್ಕರಷ್ಟು ಹಣ ಹೆಚ್ಚಿಗೆ ಕೊಡಬೇಕು. ಈಗ ಮೂರರಲ್ಲಿ ಒಂದು ಭಾಗದಷ್ಟು ಸಹ ಕೊಡುತ್ತಿರುವುದಿಲ್ಲ. ಹೀಗೆ ಕಡಮೆ ಹಣ ದೊರೆಯುತ್ತಿರುವುದರಿಂದ ಸರಿಯಾದ equipment ಇಲ್ಲ ಇದನ್ನು ಬಹಳ ವಿಷಾದದಿಂದ ಹೇಳಬೇಕಾಗಿದೆ. ಉಪಾಧ್ಯಾಯರಿಗೆ ಟ್ರೈನಿಂಗ್ ಕೊಡತಕ್ಕಂಥ ವ್ಯವಸ್ಥೆ ಇರಬೇಕು.

**Mr. SPEAKER:-** Before the Hon'ble Member commences his remarks. I would like to announce that this Demand will be finished

today. We will go tol the next Demand tomorrow. Therefore, I hope that the number of members offering to speak on this Demand will be restricted and also the time of the speeches will be curtailed.

ಶ್ರೀ ಕೆ.ಕೆಂಚಪ್ಪ:– ಸ್ವಾಮಿ, ಟ್ರೈನಿಂಗ್ ವಿಚಾರದಲ್ಲಿ ಒದಗಿಸಿರುವ ಗ್ರಾಂಟುಗಳು ಬಹಳ ಕಡಮೆ. ಇದುವರೆಗೆ ಟ್ರೈನಿಂಗಿಗಾಗಿ ಮಾಡಿರುವ ವ್ಯವಸ್ಥೆ ಬಹಳ ಅಸಮರ್ಪಕವಾಗಿದೆ. ಈ ವರ್ಷ ಬಡ್ಜೆಟ್ಟಿನಲ್ಲಿ ಸ್ಪೆಷಲ್ ಗ್ರಾಂಟು ಎಂದು 45 ಲಕ್ಷದ 93 ಸಾವಿರದ 800 ರೂಪಾಯಿಗಳನ್ನು ಕೊಟ್ಟಿದ್ದಾರೆ. ಅದರಲ್ಲಿ Training Colleges for Men ಎಂಬ ಬಾಬಿಗೆ 77,500 ರೂಪಾಯಿಗಳನ್ನೂ Training Colleges for Women ಎಂಬ ಬಾಬಿಗೆ 28,500 ರೂಪಾಯಿಗಳನ್ನೂ,ಡಿಸ್ಟ್ರಿಕ್ಟ್ ನಾರ್ಮಲ್ ಟ್ರೈನಿಂಗ್ ಸ್ಕೂಲುಗಳಿಗಾಗಿ 90,400 ರೂಪಾಯಿಗಳನ್ನೂ ಒದಗಿಸಿದ್ದಾರೆ. ಈ ನಾರ್ಮಲ್ ಹೈಸ್ಕೂಲುಗಳು ಟ್ರೈನಿಂಗ್ ಆದ ಉಪಾಧ್ಯಾಯರುಗಳನ್ನು ತಯಾರು ಮಾಡುವುವು. ಇಲ್ಲಿ 90 ಮಂದಿ ಮಾತ್ರವಿದ್ದರೆ, ಸಾಕಷ್ಟು ಟ್ರೈನಿಂಗ್ ಆದ ಉಪಾಧ್ಯಾಯರುಗಳನ್ನು ತಯಾರಿಸಲು ಸಾಧ್ಯವಿದೆಯೇ? ಇದರಿಂದ ವಿದ್ಯಾಭ್ಯಾಸ ಕ್ರಮ ತುಂಬ ಹಿಂದೆ ಬಿದ್ದಿದೆ. ಆದ್ದರಿಂದ ಸಾಕಾದಷ್ಟು ಶಕ್ತಿ ನಮ್ಮ ವಿದ್ಯಾರ್ಥಿಗಳಲ್ಲಿ ಇಲ್ಲ ಎನ್ನುವುದಕ್ಕೆ ಮುಖ್ಯ ಕಾರಣಗಳಿವೆ. ಇನ್ನು ಜನಾನ ನಾರ್ಮಲ್ ಸ್ಕೂಲಿಗೆ 21,700 ರೂಪಾಯಿಗಳನ್ನೂ, ಟೀಚರ್ಸ್ ಅಂಡರ್ ಟ್ರೈನಿಂಗ್ ಬಾಬಿಗೆ 5,14,800 ರೂಪಾಯಿಗಳನ್ನೂ ಒದಗಿಸಿದ್ದಾರೆ. ಇವು ಕಣ್ಣಿಗೆ ಕಾಣತಕ್ಕವುಗಳಾಗಿವೆ. ಇದು ಬಹಳ ಕಡಮೆ ಇದೆ. ಇನ್ನು Junior Basic Training College for Primary School Teachers with practising basic school ಗಳಿಗಾಗಿ 4,70,300 ರೂಪಾಯಿಗಳನ್ನೂ Scheme in the Second Five year plan-Training of teachers of basic type ಬಾಬಿಗೆ 4,12,700 ರೂಪಾಯಿಗಳನ್ನೂ, Starting and development of post graduate training in basic education ಬಾಬಿಗೆ 1,01,000 ರೂಪಾಯಿಗಳನ್ನೂ, Special training course for teahcers and deputation for basic education ಬಾಬಿಗೆ 6,35,700 ರೂಪಾಯಿಗಳನ್ನೂ, Pre-basic training at Vidyanagar. ಬಾಬಿಗೆ 3,900 ರೂಪಾಯಿಗಳನ್ನೂ Training of teahers of Multi-purpose High Schools ಬಾಬಿಗೆ 30,000 ರೂಪಾಯಿಗಳನ್ನು ಈ ವರ್ಷದ ಬಡ್ಜೆಟ್ಟಿನಲ್ಲಿ ಒದಗಿಸಿದ್ದಾರೆ. ನಿಜವಾಗಿಯೂ ಇದನ್ನು ಖರ್ಚು ಮಾಡುವ ಉದ್ದೇಶದಿಂದ ಮಾಡಿದ್ದಾರೆಯೇ? ಇದನ್ನು ನಿಜವಾಗಿ ಖರ್ಚು ಮಾಡುತ್ತಾರೆಯೇ? ಏತಕ್ಕೆಂದರೆ ಇದುವರೆಗೂ ನಡೆದುಕೊಂಡು ಬರತಕ್ಕ ಬಾಬುಗಳಿಗೆ ಅಷ್ಟು ಕಡಮೆ ಹಣ ಒದಗಿಸಿ, ಬೇರೆ ಖರ್ಚು ಮಾಡಲು ಸಾಧ್ಯವಾಗದೆ ಇರುವ ಕಡೆ ಲಕ್ಷಾಂತರ ರೂಪಾಯಿಗಳನ್ನು ಕೊಟ್ಟಿದ್ದಾರೆ. ಫೈನಾನ್ಷಿಯಲ್ ಸೆಕ್ರೆಟರಿಯವರು ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿಯಲ್ಲಿ ಮಾಡಿರುವ ರಿಮಾರ್ಕ್ಸ್‌ನ್ನು ತಮ್ಮ ಗಮನಕ್ಕೆ ತರುತ್ತೇನೆ. ಆ ವರದಿಯ 27ನೆಯ ಪುಟದಲ್ಲಿ ಈ ರೀತಿ ಹೇಳಿದ್ದಾರೆ:

" The Finance Secretary observed that large savings occurred in education budget every year because the department asked for grants which could not be utilised. The Director of Public Instruction explained that the savings was due to non-drawal of grants by aided institutions and non-utilisation of grants for equipment due to late sanction.

ನಾನು ಇದಕ್ಕೆ ಏನು ಹೇಳುತ್ತೇನೆಂದರೆ, ಇದುವರೆಗೂ ನಡೆದುಕೊಂಡು ಬಾರದೇ ಇರತಕ್ಕ ವಿಚಾರಗಳಿಗೋಸ್ಕರ ಹೆಚ್ಚಿಗೆ ಗ್ರಾಂಟು ಕೊಡುವ ಮೂಲಕ ಅವರು ಅದನ್ನು ಉಳಿಸಿಕೊಳ್ಳಲಿಕ್ಕೆ ಒಂದು

ಪ್ರಯತ್ನ ಮಾಡಿದ್ದಾರೆ ಅವರು ವಿಪರೀತವಾಗಿ ಉಳಿಕೆ ಮಾಡಬೇಕೆಂಬ ಉದ್ದೇಶದಿಂದ ಭಾರೀ ಬಾಬುಗಳಿಗೇ ಖರ್ಚು ತೋರಿಸುತ್ತಿದ್ದಾರೆಂದು ನನಗನ್ನಿಸುತ್ತದೆ. ನಾನು ಈಗಲೂ ಹೇಳುತ್ತೇನೆ. ಟ್ರೈನಿಂಗ್ ಎನ್ನುವ ಮುಖ್ಯ ಬಾಬಿನಲ್ಲಿ ಇದುವರೆಗೂ ನಡೆಸಿಕೊಂಡು ಬಂದಿರತಕ್ಕ ವ್ಯವಸ್ಥೆಗಳಿಗೆ ಎಷ್ಟೋ ಕಡಿಮೆ ಖರ್ಚು ಮಾಡುತ್ತಾರೆ. ನನಗೆ ಕಾಲಾವಕಾಶ ಇಲ್ಲದಿದ್ದಕ್ಕೋಸ್ಕರ ಮುಖ್ಯಮುಖ್ಯವಾದ ವಿಷಯಗಳನ್ನು ಮಾತ್ರ ಕಳಕಳಿಯಿಂದ ಹೇಳುತ್ತಿದ್ದೇನೆ. ಅಂತೂ ವಿದ್ಯಾಭ್ಯಾಸ ಕ್ರಮದಲ್ಲಿ ನಮ್ಮಲ್ಲಿ ಅನುಸರಿಸಿಕೊಂಡು ಬಂದಿರುವ ನೀತಿ ಖಂಡಿತವಾಗಿಯೂ ಉತ್ತೇಜನದಾಯಕವಾಗಿ ಇಲ್ಲ. ನಮ್ಮ ವಿದ್ಯಾಭ್ಯಾಸದ ಸ್ಟ್ಯಾಂಡರ್ಡ್ ಬಹಳ ಕಡಮೆಯಾಗಿದೆ. ಇನ್ನು ಬಿಲ್ಡಿಂಗ್ ಗ್ರಾಂಟು ವಿಚಾರವಾಗಿ ಸ್ವಲ್ಪ ಪ್ರಸ್ತಾಪ ಮಾಡುತ್ತೇನೆ. ಎಷ್ಟೋ ಸ್ಕೂಲುಗಳಿಗೆ ಎಷ್ಟೋ ಬಿಲ್ಡಿಂಗ್ ಗ್ರಾಂಟು ಕೊಟ್ಟರೂ ಸಹಿತ ಡಿಸ್ಟ್ರಿಕ್ಟ್ ಬೋರ್ಡ್ ಸ್ಕೂಲುಗಳಿಗೆ ಏಕೆ ಗ್ರಾಂಟನ್ನೂ ಇನ್ನೂ ಕೊಟ್ಟಿಲ್ಲ? ಈಗ ಮುನಿಸಿಪಲ್ ಸ್ಕೂಲುಗಳಿಗೆ Lumpsum grant ವಗೈರೆಗಳಿಗೆ 2,73,158 ರೂಪಾಯಿಗಳ ಗ್ರಾಂಟನ್ನು ಒದಗಿಸಿದ್ದಾರೆ. ಡಿಸ್ಟ್ರಿಕ್ಟು ಬೋರ್ಡ್ ಹೈಸ್ಕೂಲುಗಳಿಗೆ ಅಷ್ಟು ಹಣವನ್ನು ಕೊಟ್ಟಿಲ್ಲ. ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲುಗಳಿಗೆ ಕೇವಲ 34,801 ರೂಪಾಯಿಗಳ ಗ್ರಾಂಟನ್ನು ಒದಗಿಸಿದ್ದಾರೆ. ರಾಯರಕೊಪ್ಪಾಳ್ ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲಿಗೆ ಮೂರು ಸಾವಿರ ರೂಪಾಯಿಗಳು, ಗೊರೂರು ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲಿಗೆ ನಾಲ್ಕು ಸಾವಿರ ರೂಪಾಯಿಗಳು, ಶ್ರೀನಿವಾಸಪುರ ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲಿಗೆ ಹತ್ತು ಸಾವಿರರೂಪಾಯಿಗಳು, ನರಸಿಂಹರಾಜಪುರ ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲಿಗೆ 7,801 ರೂಪಾಯಿಗಳು ಮಸತ್ತು ನಾಗವಳ್ಳಿ ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲಿಗೆ ಹತ್ತು ಸಾವಿರ ರೂಪಾಯಿಗಳು– ಹೀಗೆ ಮೊಬಲಗುಗಳನ್ನು ಒದಗಿಸಿದ್ದಾರೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಐದು ಹೈಸ್ಕೂಲುಗಳು ಅತ್ಯುನ್ನತವಾದ ರೀತಿಯಲ್ಲಿ ನಡೆಯುತ್ತಿವೆ. ಅಲ್ಲಿನ ಜನಗಳು ಉದಾರವಾಗಿ 18 ಸಾವಿರ ರೂಪಾಯಿಗಳನ್ನು ಸಹಾಯ ಮಾಡಿದುದರ ದೆಸೆಯಿಂದ ಸ್ಕೂಲುಗಳು ಚೆನ್ನಾಗಿ ನಡೆಯುತ್ತಿವೆ. ನಿಮ್ಮ ಕೋಟಾ ಕೊಡದೇ ಇರಲು ಕಾರಣವೇನು? ಪ್ರೈಮರಿ ವಿದ್ಯಾಭ್ಯಾಸದ ವಿಆರವಾಗಿ ಕೆಲವು ವಿಷಯಗಳನ್ನು ಹೇಳಲು ಕೊನೆಗೆ ಇಟ್ಟುಕೊಂಡಿದ್ದೇನೆ. ಅದನ್ನು ಒಂದೆರಡು ಮಾತುಗಳಲ್ಲಿ ಹೇಳುತ್ತೇನೆ. ನಮ್ಮ ಪ್ರೈಮರಿ ಸ್ಕೂಲುಗಳ ವಿದ್ಯಾಭ್ಯಾಸ ವಿಚಾರದಲ್ಲಿ ನಮ್ಮ ಸರ್ಕಾರದವರಿಗೆ ಆಗಿರತಕ್ಕ

...ಪೇಕ್ಷೆ ಇನ್ನಾವ ಬಾಬಿನಲ್ಲೂ ಆಗಿಲ್ಲ. ವಿದ್ಯಾಭ್ಯಾಸವೇ ದೇಶದ ಪ್ರಗತಿಗೆ ಮೂಲಕಾರಣ. ಮೂಲಕಾರಣವಾಗಿರತಕ್ಕ ಮತ್ತು ಪ್ರಗತಿದಾಯಕ ಕಾರ್ಯವಾಗಿರತಕ್ಕ ಈ ಬಾಬಿಗೆ ಹೆಚ್ಚು ಗಮನ ಕೊಡುತ್ತಾ ಇಲ್ಲ. ದ್ವಿತೀಯ ಪಾಂಚವಾರ್ಷಿಕ ಯೋಜನೆಯಲ್ಲಿ ಪ್ರೈಮರಿ ಸ್ಕೂಲುಗಳನ್ನು ಹೆಚ್ಚಿಗೆ ಮಾಡಲೇ ಇಲ್ಲ. ಕೇವಲ ಏನೂ ಮಾಡಲೇ ಇಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಇರತಕ್ಕ ಸ್ಕೂಲುಗಳನ್ನು ವಜಾ ಮಾಡಿ, ಹೊಸದಾಗಿ ಕಟ್ಟಿರತಕ್ಕ ಸ್ಕೂಲುಗಳನ್ನು ಈಗ ಕೊಟ್ಟಿರಬಹುದೋ ಏನೋ! ಆ ದೃಷ್ಟಿಯಿಮದ ತಮಗೆ ಒಂದು ನಿದರ್ಶನವನ್ನು ಕೊಡುತ್ತೇನೆ. ಅದನ್ನು ಅತಿ ವಿಷಾದದಿಂದ ಹೇಳಬೇಕಾಗಿದೆ. ನಿನ್ನೆ ದಿವಸವೋ ಅಥವಾ ಮೊನ್ನೆ ದಿವಸವೋ ನಮ್ಮ ಸಂಸ್ಥಾನದಲ್ಲಿರತಕ್ಕ 5,897 ಹಳ್ಳಿಗಳ ಪೈಕಿ ಎಷ್ಟು, ಹಳ್ಳಿಗಳಲ್ಲಿ ಸ್ಕೂಲುಗಳಿವೆ, ಎಷ್ಟು ಹಳ್ಳಿಗಳಲ್ಲಿ ಸ್ಕೂಲುಗಳಿಲ್ಲ ಎಂದು ಕೇಳಿದರೆ, ಅಂತಹ ಸ್ಟ್ಯಾಟಿಸ್ಟಿಕ್ಸ್ ಇಲಾಖೆಯಲ್ಲಿ ಇಲ್ಲವೆಂದು ಹೇಳಿದರು. ಆದ್ದರಿಂದ ಈಗ ಇರುವುದಕ್ಕಿಂತ ಇನ್ನೂ ಕನಿಷ್ಠವಾಗಿದೆ ಎಂದು ತಿಳಿದು ಬರುತ್ತದೆ. ಅಂಕಿಅಂಶಗಳು ಬೊಂಬಾಯಿ ಕರ್ಣಾಟಕ ಪ್ರಾಂತದ್ದು ಇದೆ. ಮೈಸೂರು ಸಂಸ್ಥಾನಕ್ಕೆ ಇಲ್ಲವೆಂದು ಹೇಳುತ್ತಾರೆ.

ಅಧ್ಯಕ್ಷರು:- ಹಳೆಯ ಮೈಸೂರು ವಿಷಯ ಎಂದು ಹೇಳಿ. ಇಲ್ಲದಿದ್ದರೆ ಈಗಿನ ಮೈಸೂರು ರಾಜ್ಯಕ್ಕೆ ಸಂಬಂಧಪಟ್ಟಂತೆ ಹೇಳುತ್ತಿದ್ದಾರೆಂದು ಇತರರು ತಿಳಿದುಕೊಳ್ಳುತ್ತಾರೆ. ಈಗ ನೀವು ಮೈಸೂರು ಸಂಸ್ಥಾನ ಎನ್ನುವುದಕ್ಕೆ ಬದಲಾಗಿ ಮೈಸೂರು ರಾಜ್ಯ ಎಂಬುದಾಗಿ ಕರೆಯಿರಿ.

ಶ್ರೀ ಕೆ.ಕೆಂಚಪ್ಪ:- ಆಗಲಿ, ಮೈಸೂರು ರಾಜ್ಯ ಎಂದೇ ಇಟ್ಟುಕೊಳ್ಳೋಣ.

ಈಗ ನಮ್ಮ ರಾಜ್ಯದಲ್ಲಿರತಕ್ಕ ಒಟ್ಟು 27,897 ಹಳ್ಳಿಗಳ ಪೈಕಿ ಎಷ್ಟು ಹಳ್ಳಿಗಳಲ್ಲಿ ಸ್ಕೂಲುಗಳಿವೆ, ಎಷ್ಟು ಹಳ್ಳಿಗಳಲ್ಲಿ ಸ್ಕೂಲುಗಳು ಇಲ್ಲ ಎಂಬುದನ್ನು ಪರಿಶೀಲಿಸಿದರೆ ನಾವು ಹಳ್ಳಿಗಾಡಿನ ಜನರ ವಿಚಾರದಲ್ಲಿ ಎಷ್ಟು ಸದ್ಭಾವನೆಯನ್ನು ಇಟ್ಟುಕೊಂಡಿದ್ದೇವೆ ಎಂಬುದು ಗೊತ್ತಾಗುತ್ತದೆ. ಈಗ ತಾನೆ ಮಂತ್ರಿಗಳು ಹೇಳಿದ ಹಾಗೆ ಸಂಸ್ಥಾನದಲ್ಲಿ ಒಟ್ಟು 22,254 ಪ್ರೈಮರಿ ಸ್ಕೂಲುಗಳಿವೆ. ಇವುಗಳಲ್ಲಿ ಟೌನ್ ಮತ್ತು ಕಾರ್ಪೊರೇಷನ್‌ಗಳಲ್ಲಿರುವ 2/3 ಭಾಗ ಎಂದರೆ 14,886 ಸ್ಕೂಲುಗಳು ಹೋದರೆ ಉಳಿದಿರತಕ್ಕದ್ದು 7,418 ಸ್ಕೂಲುಗಳು ಹಳ್ಳಿಗಳಿಗೆ ಇರುತ್ತವೆ. 1849 ಹಳ್ಳಿಗಳಲ್ಲಿ ಸ್ಕೂಲಗಳು ಇಲ್ಲ ಎಂದು ಹೇಳಬೇಕಾಗಿ ಬರುತ್ತದೆ. ಆದ್ದರಿಂದ ಈಗ ಇನ್ನು 18,479 ಹಳ್ಳಿಗಳಿಗೆ ಸ್ಕೂಲುಗಳನ್ನು ಕೊಡಬೇಕಾಗಿದೆ. 365 ಸ್ಕೂಲುಗಳನ್ನು ಈ ವರ್ಷ ಕೊಡುತ್ತೇವೆಂದು ಮಂತ್ರಿಗಳು ಮೊನ್ನೆ ಹೇಳಿದ್ದಾರೆ. ಇದೇರೀತಿ ಮುಂದುವರಿಸಿಕೊಂಡು ಹೋಗುತ್ತಿದ್ದರೆ ಎಲ್ಲಾ ಹಳ್ಳಿಗಳಲ್ಲೂ ಸ್ಕೂಲು ಬರಬೇಕಾದರೆ ಇನ್ನು 50 ವರ್ಷಗಳಾದರೂ ಬೇಕು. ಈ ಬಡ್ಜೆಟ್ಟಿನಲ್ಲಿ ಹಳ್ಳಿಯ ಪ್ರಾಥಮಿಕ ಶಾಲೆಗಳಿಗೋಸ್ಕರ, ಪ್ರಾಥಮಿಕ ಶಾಲೆಗಲ ಕಟ್ಟಡಕ್ಕೋಸ್ಕರ ಮೂರು ಕಾಸೂ ಸಹ ಪ್ರೊವೈಡ್ ಮಾಡಿರುವ ಹಾಗೆ ಕಂಡುಬರುತ್ತಿಲ್ಲ. ಬಡ್ಜೆಟ್ಟಿನಲ್ಲಿ ಪ್ರೈಮರಿ ಸ್ಕೂಲು. ಮಿಡ್ಲ್ ಸ್ಕೂಲು ಮತ್ತು ಹೈಸ್ಕೂಲ್ ಬಿಲ್ಡಿಂಗಿಗೋಸ್ಕರ

25,36,000 ರೂಪಾಯಿಗಳನ್ನು ಮೀಸಲಾಗಿಟ್ಟಿದ್ದೇವೆಂದು ನಮ್ಮ ಮಾನ್ಯ ಮಂತ್ರಿಗಳು ಹೇಳಿದರು. ಎಲ್ಲಿದೆ? ಕನ್ನಡಕ ಹಾಕಿಕೊಂಡು ಎಲ್ಲಿ ನೋಡಿದರೂ ಈ ಬಡ್ಜೆಟ್ಟಿನಲ್ಲಿ ಆ ವಿವರಗಳು ಸಿಕ್ಕಲಿಲ್ಲ. ಈ ದೃಷ್ಟಿಯಿಂದ ಎಷ್ಟುಮಟ್ಟಿಗೆ ಹಳ್ಳಿಗಳ ಸ್ಕೂಲುಗಳ ವಿಚಾರದಲ್ಲಿ ಸರ್ಕಾರದವರಿಗೆ ಆಸಕ್ತಿ ಇದೆಯೆಂಬುದನ್ನು ಕಳಕಳಿಯಿಂದ ಕೇಳುತ್ತಿದ್ದೇನೆ. ಎಷ್ಟೊಂದು ಟೌನುಗಳಲ್ಲಿ ಖರ್ಚುಮಾಡುತ್ತಿದ್ದಾರೆಯೋ ಅಷ್ಟನ್ನು ಹಳ್ಳಿಗಳ ಸ್ಕೂಲುಗಳಿಗೆ ಖರ್ಚುಮಾಡುತ್ತಾ ಇಲ್ಲ. ಇನ್ನು ಒಂದು ಅಂಶವನ್ನು ತಮಾಷೆಯಾಗಿ ಹೇಳಿದ ಹಾಗಿದೆ. 750 ರೂಪಾಯಿಗಳ ಖರ್ಚಿನಿಂದ ಒಂದು ಸ್ಕೂಲು ಕಟ್ಟಡದ ಸ್ಕೀಮನ್ನು ಮಾಡಿದ್ದೇವೆಂದು ಹೇಳಿದ್ದಾರೆ. ಉಳಿದ ಹಣ ಹಳ್ಳಿಗಾಡಿನ ಜನ ಕೊಡಬೇಕಂತೆ! ಉಡುವುದುಕ್ಕೆ ಬಟ್ಟೆಯಿಲ್ಲ. ತಿನ್ನುವುದಕ್ಕೆ ಊಟವಿಲ್ಲ ಅಂತಹದರ ಮೇಲೆಯೇ ಟ್ಯಾಕ್ಸ್ ಹಾಕಬೇಕೆಂದು ಹೇಳುತ್ತಾರೆ. ಇದು ಎಷ್ಟು ಚೆನ್ನಾಗಿದೆ? ಆದರೆ ಟೌನುಗಳಲ್ಲಿ ಸ್ಕೂಲುಗಳನ್ನು ಸರ್ಕಾರದ ಖರ್ಚಿನಲ್ಲಿ ಕಟ್ಟಬೇಕು, ಹಳ್ಳಿಯಕಡೆ ಸ್ಕೂಲುಗಳ ಅವಶ್ಯಕತೆಗೆ ಮೂರು ಕಾಸು ಖರ್ಚು ಮಾಡಬಾರದು, ಎನ್ನುವುದು ಯಾವನ್ಯಾಯ! 750 ರೂಪಾಯಿಗಳನ್ನು ಖರ್ಚು ಮಾಡಿ ಒಂದು ಸ್ಕೂಲು ಕಟ್ಟಡ ಕಟ್ಟಬೇಕೆಂಬ ಸಲಹೆಯನ್ನು ಮಾಡಿದ್ದಾರೆಯೇ? ಏನೋ ಒಂದು ಕಣ್ಣು ಒರೆಸುವ ರೀತಿಯಲ್ಲಿ ಮಾಡಿದ್ದಾರೆಂದು ಕಾಣುತ್ತದೆ.

ಇನ್ನು ಉಪಾಧ್ಯಾಯರ ಸಂಬಳಸಾರಿಗೆಗಳ ವಿಚಾರವಾಗಿ ಪೇಸ್ಟ್ರಕ್ಚರ್ ಕಮಿಟಿಯವರು ಒಂದು ವರದಿಯನ್ನು ಕೊಟ್ಟಿದ್ದಾರೆ. ಅದನ್ನು ಓದುವುದಕ್ಕೆ ನನಗೆ ವೇಳೆಯಿಲ್ಲ. ಆದರೆ ಒಂದು ವಿಚಾರವನ್ನು ಹೇಳುತ್ತೇನೆ. ಈ ವರ್ಷ ರಿವಿಷನ್ ಆಫ್ ಪೇ ಬಗ್ಗೆ 87 ಲಕ್ಷ ರೂಪಾಯಿಗಳನ್ನು ಲಂಪ್‌ಸಮ್ ಆಗಿ ಎಲಿಮೆಂಟರಿ ಸ್ಕೂಲುಗಳ ಉಪಾಧ್ಯಾಯರಿಗೆ ಇಟ್ಟುಕೊಂಡಿದ್ದಾರೆ. ಮೀಸಲಾಗಿಟ್ಟಿರುವುದು ಬಹಳ ಕಡಮೆ ಅದನ್ನಾದರೂ ಅವರಿಗೆ ಕೊಡುವುದರ ಮೂಲಕ ಸಮಾಧಾನಪಡಿಸಿ, ಪ್ರೈಮರಿ ಸ್ಕೂಲುಗಳ ಉಪಾಧ್ಯಾಯರು ಈ ವಿಷಯದಲ್ಲಿ ತುಂಬ ಅಸಮಾಧಾನವಾಗಿದ್ದಾರೆ. ಮನಸ್ಸಿಟ್ಟು ಪಾಠ ಹೇಳುವ ಸ್ಥಿತಿಯಲ್ಲಿಲ್ಲ. ಅವರಿಗೆ ಈ ದುಡ್ಡನ್ನು ಈ ವರ್ಷವೇ ಪೂರ್ತಿಯಾಗಿ ಕೊಟ್ಟುಬಿಡಿ. ಈಗಿನ ವಿದ್ಯಾಭ್ಯಾಸ ಕ್ರಮವನ್ನು ನಾನು ಒಪ್ಪುವುದಕ್ಕಾಗುವುದಿಲ್ಲ. ಒಣಟುಣು- ರಿಣಾಠಿಥಿಜ ಹೈಸ್ಕೂಲುಗಳಲ್ಲಿ ಶಿಕ್ಷಣ ಸಮರ್ಪಕವಾಗಿದೆ. ಸೆಕೆಂಡರಿ ಸ್ಕೂಲು ಸ್ಟ್ಯಾಂಡರ್ಡ ಮುಗಿದುಹೋದ ಮೇಲೆ ಸ್ವಾವಲಂಬನ ಪದ್ಧತಿಯಿಂದ ಜೀವನ ಮಾಡಲು ಸಾಧ್ಯವಾಗದೆ ಇರುವ ರೀತಿಯಲ್ಲಿ ಮಾಡುತ್ತಿದ್ದಾರೆ. ಸೆಕೆಂಡರಿ ಎಜುಕೇಷನ್ ಆದಮೇಲೆ ಟೆಕ್ನಿಕಲ್ ಕಾಲೇಜಿಗೆ ಹೋಗಲು ಅವರಿಗೆ ಅಷ್ಟಾಗಿ ಅರ್ಹತೆ ಇರುವುದಿಲ್ಲ. ಅಂತಹ ವ್ಯವಸ್ಥೆ ಮಾಡಿದ್ದಾರೆ. ಅದನ್ನು ಸಮರ್ಪಕವಾಗಿ ಮಾಡಿ ದೇಶವು ಉನ್ನತ ಸ್ಥಿತಿಗೆ ಬರುವಹಾಗೆ ಮಾಡಿ. ಬಡ್ಜೆಟ್ಟಿನಲ್ಲಿ ಅನಾವಶ್ಯಕ ಬಾಬುಗಳು ಬೇಕಾದಷ್ಟಿವೆ. ಉದಾಹರಣೆಗೆ ಸಂಸ್ಕೃತಿ ಪ್ರಚಾರ, ಸಮಾಜ ಕಲ್ಯಾಣ ಕೇಂದ್ರಕ್ಕಾಗಿ 5 ಲಕ್ಷ ರೂಪಾಯಿಗಳನ್ನು ಒದಗಿಸಿದ್ದಾರೆ. ಇನ್ನು ವಯಸ್ಕರ ವಿದ್ಯಾಭ್ಯಾಸ, ಸೇವಾದಳ ಮುಂತಾದವು ಎಷ್ಟೋ ಇವೆ. ಅವೆಲ್ಲಾ ಏತಕ್ಕೋ? ನನಗೆ ಗೊತ್ತಾಗುವುದಿಲ್ಲ. ಮುಖ್ಯವಾಗಿ ಅವುಗಳನ್ನೆಲ್ಲಾ ವಜಾಮಾಡಿ, ವಿದ್ಯಾಭ್ಯಾಸ ಅಭಿವೃದ್ಧಿ ಮಾಡುವ ರೀತಿಯಲ್ಲಿ ಮಾರ್ಪಾಟಾಗಲು ಮತ್ತು ದೇಶದ ಪ್ರಗತಿಯಾಗಲು ನಮ್ಮ ಸರ್ಕಾರದವರು ಕಾರಣರಾಗಬೇಕೆಂದು ಹೇಳುತ್ತೇನೆ.

* * * * *

## ಭೂಸುಧಾರಣೆ ವಿರೋಧ ಪಕ್ಷಗಳ ಕಾತರ

5 ನವೆಂಬರ್ 1958

•

ಶ್ರೀ ಕೆ.ಕೆಂಚಪ್ಪ (ಹಿರಿಯೂರು):- ಅಧ್ಯಕ್ಷರೇ, ಭೂಸುಧಾರಣೆಗೆ ಸಂಬಂಧಪಟ್ಟ ಮಸೂದೆಯನ್ನು ಈಗಿರುವ ಕಾನೂನನ್ನೇ ಮುಂದುವರಿಸುವುದಕ್ಕಾಗಿ ತಂದಿರುವುದನ್ನು ವಿರೋಧಿಸುತ್ತಾ ಪುನರುಕ್ತಿ ದೋಷಕ್ಕೊಳಗಾಗದೆ ಕೆಲವಾರು ವಿಷಯಗಳನ್ನು - ಮುಗಿಸುತ್ತೇನೆ. ಭೂಸುಧಾರಣೆಯ ವಿಷಯದಲ್ಲಿ ಸಾಧ್ಯವಾದಮಟ್ಟಿಗೂ ವಿಳಂಬಮಾಡುವ ಮನೋಭಾವದಿಂದ ಇಂಥ ಭೂಸುಧಾರಣೆ ಮಸೂದೆಗಳನ್ನು ಆಗಾಗ ತರುವುದರಿಂದ ಅಥವಾ ತರುತ್ತೇವೆಂದು ಹೇಳುವುದರಿಂದ ಅಥವಾ ಈ ರೀತಿ ಕೆಲವಾರು ಭಾವನೆಗಳನ್ನು ಪ್ರಚೋದನೆ ಮಾಡುವುದರಿಂದ ಆಗುವ ಅನರ್ಥಗಳನ್ನು ನಮ್ಮ ಸರ್ಕಾರದವರು ತಿಳಿದಕೊಳ್ಳಬೇಕಾಗಿತ್ತು ಎಂದು ಹೇಳುತ್ತೇನೆ. ಏಕೆಂದರೆ, ಭೂಸುಧಾರಣೆಯ ವಾದ ಬಹು ದಿವಸದಿಂದ ಇದ್ದು ಇದರ ಮೂಲಕ ಅನೇಕ ಭಾವನೆಗಳು ಇದರಿಂದ ಯಾವ ಉದ್ದೇಶಕ್ಕಾಗಿ ಈ ಭೂಸುಧಾರಣೆಯನ್ನು ತರುತ್ತಾರೋ ಅ ಉದ್ದೇಶವೇ ಹಾಳಾಗುವ ಅಥವಾ ವಿಫಲವಾಗುವ ಸಂದರ್ಭವಿರುತ್ತದೆ. ಇದು ಭೂಸುಧಾರಣೆಯ ವಿಚಾರದಲ್ಲಿ ಕಾನೂನು ಮಡಲು ಆಸಕ್ತಿವಹಿಸಿರುವವರು ಮಾಡಿರುವ ವರದಿಯಿಂದಲೇ ವ್ಯಕ್ತವಾಗುತ್ತದೆ. ಭೂಸುಧಾರಣೆ ಮಾಡುವುದರಿಂದ ಹೆಚ್ಚು ಜಮೀನನ್ನು ಹೊಂದಿರುವವರು ತಮ್ಮ ಜಮೀನಿನ ಬಹು ಭಾಗವನ್ನು ವಾಪಸು ಕೊಡಬೇಕಾಗಿ ಬರುವುದರಿಂದ ಅಂಥವರು ಈ ಸುಧಾರಣೆ ಕಾನೂನನ್ನು ಮುರಿಯುವುದಕ್ಕೆ ಅಥವಾ ಇದರಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಪ್ರಯತ್ನ ಪಡುತ್ತಾರೆ. ಇದು ಮನುಷ್ಯ ಸ್ವಭಾವ. ಸುಧಾರಣೆ ಕಾನೂನನ್ನು ಜಾರಿಗೆ ತರುವವರು ಇಂಥ ಒಂದು ಭಾವನೆಯನ್ನು ಕೆರಳಿಸಲು ಅವಕಾಶಕೊಡದಂತೆ ಹುಷಾರಾಗಿರಬೇಕಾಗಿತ್ತು. ಇದೊಂದು ಸಣ್ಣ ವಿಚಾರವೆಂದು ತಿಳಿದುಕೊಳ್ಳಬಾರದು. ಇದೊಂದು ಮಹತ್ವ ವಿಚಾರ. ಅದರಲ್ಲಿಯೂ ಹಿಂದೂಸ್ಥಾನದಲ್ಲಿ ಶೇಕಡ 70 ರಷ್ಟು ಜನ ಹೆಚ್ಚು ಜಮೀನಿರುವವರಿಂದ ಜಮೀನನ್ನು ತೆಗೆದುಕೊಳ್ಳಬೇಕೆಂಬ ಭಾವನೆಯನ್ನು ಹೊಂದಿರುವಾಗ, ಆಡಳಿತಗಾರರು ಜಮೀನುದಾರರಲ್ಲಿ ಇಂಥ ಒಂದು ಭಾವನೆಯನ್ನು ಕೆರಳಿಸಿ ಅವರಿಗೆ ಸಾಧ್ಯವಾದಮಟ್ಟಿಗೂ ಇದರಿಂದ ತಪ್ಪಿಸಿಕೊಂಡು ಹೋಗಲ್ಲು ಇನ್ನೂ ಹೆಚ್ಚು ಅವಕಾಶವನ್ನು ಕೊಡುವ ಮನೋಭಾವವನ್ನು ವಹಿಸಬಾರದು. ಈ ದೃಷ್ಟಿಯಿಂದ ನಾವು ಈಗ ಸರ್ಕಾರ ತಂದಿರುವ ಈ ತಿದ್ದುಪಡಿ ಮಸೂದೆಯನ್ನು ವಿರೋಧಿಸಬೇಕಾಗಿದೆ.

ಇದೇ ಒಂದು ಸಂದರ್ಭದಲ್ಲಿ ಒಂದು ವಿಚಾರವನ್ನು ರೆವಿನ್ಯೂ ಮಂತ್ರಿಗಳ ಗಮನಕ್ಕೆ ತರಬೇಕೆಂದು ಇಷ್ಟಪಡುತ್ತೇನೆ. 1947ನೆಯ ಇಸವಿಯಲ್ಲಿ ಆಗತಾನೆ ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ ಬಂದಿತ್ತು. ಮೈಸೂರು ಸಂಸ್ಥಾನಕ್ಕೆ ಇನ್ನೂ ಜವಾಬ್ದಾರಿ ಸರ್ಕಾರ ಬಂದಿತ್ತೋ

ಇಲ್ಲವೋ, ಆಗಿನ ಸಂದರ್ಭದಲ್ಲಿ ಕಾಗೋಡು ಮತ್ತು ಕೆಲವು ಸ್ಥಳಗಳಲ್ಲಿ ಸತ್ಯಾಗ್ರಹ ವಗ್ಗೈರೆ ನಡೆದಾಗ, ಅಂಥ ಸತ್ಯಾಗ್ರಹದಲ್ಲಿ ವಿಶೇಷ ಭಾಗವಹಿಸಿದಂಥ ಈಗಿನ ಮಂತ್ರಿಗಳು ಈಗಲೂ ಸಹ ಒಂದು ಸಂದರ್ಭದಲ್ಲಿ ಹೇಳಿಕೆ ಕೊಟ್ಟು ಆಗಿನ ಕಾಲದಲ್ಲಿ ವ್ಯಕ್ತಪಡಿಸಿದ ಭಾವನೆಗಳು ಈಗಲೂ ನನ್ನ ಮನಸ್ಸಿನಲ್ಲಿವೆ. ಈಗಾಗಲೇ ಆ ಮಂತ್ರಿಗಳಿಗೆ ಒಂದು ತರಹ ಮನಸ್ಸಾಗಿದೆ. ಆಗ ಅಂಥವರು ಅಧಿಕಾರಕ್ಕೆ ಬಂದ ಕೂಡಲೇ ಇಂಥ ಕಾನೂನನ್ನು –ಳಿಸುವುದಕ್ಕಿಂತ ಮಾಡಿಯೇಬಿಡುತ್ತಾರೆಂದಿದ್ದೆ. ಒಂದು ಮನಸ್ಸನ್ನು ಕೆರಳಿಸಿ, ಅದರಿಂದ ಆಗ ಇಂಥ ವಿಶೇಷ ಅನರ್ಥಕ್ಕೆ ಕಾರಣಕೊಟ್ಟು, ಈಗ ದೇಶಕ್ಕೆ ತೊಂದರೆಗಳನ್ನು ಉಂಟುಮಾಡುವ ಮನೋಭಾವ ಸರ್ಕಾರದವರಿಗೆ ಇರಬಾರದು. ಇದರಿಂದ ಈ ಬಿಲ್ಲನ್ನು ವಿರೋಧ ಮಾಡುತ್ತೇನೆ. ಇಂಥ ಬಿಲ್ಲನ್ನು ವಿರೋಧಪಕ್ಷದ ನಾಯಕರು ವಿರೋಧಮಾಡುವುದರಿಂದ ಈ ಶಾಸನವನ್ನು ಮಾಡದೆ ತೆಗೆದುಹಾಕಿ ಬಿಟ್ಟರೆ ರೈತರಿಗೆ ಇನ್ನೆಷ್ಟು ಹಾನಿಯಾಗುತ್ತದೆ ಎಂಬ ಭಾವನೆ ಬರಬಾರದು. ರೈತರಿಗೆ, ಹೊಲ ಮಾಡತಕ್ಕ ಅನರ್ಥ ಆಗದೇ ಇರತಕ್ಕಂಥ ರೀತಿಯಲ್ಲಿ ವಿವರಿಸುವ ಕಾನೂನು ಇದು ಇರಬಹುದು. ಕಾನೂನಿನಲ್ಲಿ ಯಾವ ಉದ್ದೇಶ, ಧ್ಯೇಯಗಳಿವೆಯೋ, ಅವುಗಳನ್ನು ಕೆಡಿಸತಕ್ಕಂಥ ಕಾನೂನು ಬಹಳ ಇವೆ. ಈ ಕಾನೂನನ್ನು ಮುಂದುವರಿಸುತ್ತಾ ಹೋದರೆ ಅನರ್ಥಗಳು ಹೆಚ್ಚು. ಸರ್ಕಾರದವರಿಗೆ ಹೀಗೆಯೇ ಇದನ್ನು ಮುಂದುವರಿಸಿಕೊಮಡು ಭೂ ಸುಧಾರಣೆಯನ್ನು ವಿಳಂಬ ಮಾಡತಕ್ಕಂಥ ಮನೋಭಾವ ಇದೆ. ಈ ಉದ್ದೇಶ ತಮ್ಮ ಅಂತರ್ಯದಲ್ಲಿ ಇದೆ ಎಂದು ಇದುವರೆಗೂ ಹೇಳಿರತಕ್ಕಂಥಾವರ ವಾದವನ್ನು ನಾನೂ ಸಮರ್ಥನೆ ಮಾಡುತ್ತೇನೆ. ಅದನ್ನು ನೀವು ಒಪ್ಪಿಕೊಳ್ಳಲೇಬೇಕು.

ಶ್ರೀ ಕಡಿದಾಳ್ ಮಂಜಪ್ಪ:– ಖಂಡಿತವಾಗಿಯೂ ಒಪ್ಪಿಕೊಳ್ಳುವುದಕ್ಕೆ ಆಗುವುದಿಲ್ಲ.

ಶ್ರೀ ಕೆ.ಕೆಂಚಪ್ಪ:– ರಾಜ್ಯಪಾಲರು ಅಥವಾ ಗೌರ್ನರ್‌ರವರಿಂದ ಇದೇ ಮಸೂದೆಯ ವಿಚಾರದಲ್ಲಿ ಬಂದಿರತಕ್ಕಂಥ ವಾಕ್ಯಗಳನ್ನು ನೋಡಿರಿ. ಈ ಮಸೂದೆಯನ್ನು ತರುತ್ತಾರೆ ಎಂದು ಹೇಳಿದ್ದರೂ ಇದುವರೆಗೂ ವಿಳಂಬಮಾಡಿರುತ್ತೀರಿ. ಸ್ಟೇಟ್ಸ್ ರೀ ಆರ್ಗನೈಸೇಷನ್ 1956 ನೆಯ ಇಸವಿಯಲ್ಲಿಯೇ ಆಯಿತು. ದೊಡ್ಡ ದೊಡ್ಡ ಮನುಷ್ಯರ ಎದುರಿಗೆ ಮಹಾತ್ಮ ಗಾಂಧಿಯವರ ಹೆಸರನ್ನು ಹೇಳಿಬಿಟ್ಟು, ಸರ್ ಎಂ.ವಿಶ್ವೇಶ್ವರಯ್ಯನಂಥವರ ಹೆಸರನ್ನು ಬಳಸಿಕೊಂಡು ಬಿಟ್ಟು, ಬ್ರಹ್ಮ, ಯಮ, ಯಾರ ಯಾರ ಹೆಸರನ್ನೋ ಬಳಸಿಕೊಂಡು ಏನೇನೋ ಅನರ್ಥ ಆಗಿಬಿಟ್ಟಿತು. ಹಾಗೆ ಮಾಡಬೇಡಿರಿ. ಇದಕ್ಕೆಲ್ಲಾ ಕಾಸೇ ಕಾರಣ. ನಿಮ್ಮ ನೈತಿಕ ಬಲವನ್ನು ಹೆಚ್ಚಿಸಿಕೊಳ್ಳಿ. ಕಾಸಿನ ಬಲವನ್ನು ಇಟ್ಟುಕೊಂಡು, ಪ್ರಭಾವಶಾಲಿಗಳ ಮೊಬಲಗನ್ನು ಬಳಸಿಕೊಂಡು ಆ ಮೂಲಕ ಬಹುಮತದಿಂದ ಬರುತ್ತಾ ಇದ್ದೀರಿ. ನನ್ನ ಮನಸ್ಸು ಕೆರಳುತ್ತಾ ಇರಲಿಲ್ಲ. ನಾವು 148 ಜನ ಇರುವುದರಿಂದ

ನಮ್ಮನ್ನು ಯಾರೂ ಜಗ್ಗಿಸರು ಎಂಬ ಮನೋಭಾವ ನಿಮ್ಮಲ್ಲಿ ಇದೆ. ಈ ಬಿಲ್ಲಿನ ವಿಚಾರದಲ್ಲಿ ಈ ರೀತಿಯಾಗಿ ಕಾಲಕಳೆಯಬೇಡಿ. ಹೆಚ್ಚು ಕಾಲಕಳೆಯಲು ಸಾಧ್ಯವಿಲ್ಲ. ಈ ಕಡೆ 45, ಆ ಕಡೆ 150ಸದಸ್ಯರು ಎಲ್ಲಿಯವರೆಗೆ ಇರುತ್ತಾರೋ ಅಲ್ಲಿಯವರೆಗೆ ಹೀಗೆ ಕಾಲಕಳೆಯುತ್ತೀರಿ. ಮಾತನಾಡುವಾಗ ಆತ್ಮಕ್ಕೆ ಮೆಚ್ಚಿಗೆಯಾಗಿ, ರುಜುವಾತು ಕೊಡತಕ್ಕಂಥಾ ಜವಾಬ್ದಾರಿ ಇರಬೇಕು. ಸಾಧ್ಯವಾದ ಮಟ್ಟಿಗೆ ಹಿಡಿದು ಮಾತನಾಡಬೇಕು. ಒಂದು ಜವಾಬ್ದಾರಿ ಹೊತ್ತು ನಾನು ಸಾಧ್ಯವಾದಮಟ್ಟಿಗೆ ನನ್ನ ಶಕ್ತಿಮೀರಿ ನನ್ನ ಭಾಷಣಗಳನ್ನು ಹಿಡಿದು ಮಾತನಾಡುತ್ತಿದ್ದೇನೆ.

ಈ ಮಸೂದೆಯನ್ನು ವಿಳಂಬ ಮಾಡುವುದರ ಮೂಲಕ ಮೂಲಭೂತವಾಗಿ ಯಾವ ಉದ್ದೇಶವನ್ನು ಸಾಧಿಸಬೇಕೆಂದಿದ್ದೀರೋ ಆ ಉದ್ದೇಶವನ್ನು ಸಾಧಿಸುವುದಕ್ಕೆ ಆಗಿಲ್ಲ. ಹೀಗೆ ಮುಂದುವರಿಸುತ್ತಾ ಹೋದರೆ ನಾನು ವಿರೋಧ ಮಾಡುವುದು only against your delaying tactics ಈ ಟ್ಯಾಕ್‌ಟಿಕ್ಸ್ ಎಲ್ಲಿಯವರೆಗೆ ಮಾಡುತ್ತೀರೋ ಅಲ್ಲಿಯವರೆಗೆ ಖಂಡಿತವಾಗಿಯೂ ನಿಮ್ಮ ಶ್ರೇಯಸ್ಸು ಆಗುವುದಿಲ್ಲ. ಮಾಡಬೇಡಿರಿ. ಬಹಳ ದಿವಸ ವಂಚನೆಮಾಡಲು ಶಕ್ಯವಿಲ್ಲ. ಹತ್ತು ವರ್ಷ ಹಾಗೆ ಆಗಿಹೋಗಿಬಿಟ್ಟಿತು. ಇನ್ನು ಮುಂದೆ ಹಾಗೆ ಮಾಡಬೇಡಿ. ಇದನ್ನು ವಿಳಂಬ ಮಾಡಬೇಡಿ. ಭೂ ಸುಧಾರಣೆ ವಿಚಾರದಲ್ಲಿ ವಿರೋಧ ಪಕ್ಷದವರಿಗೆ ಕಾತರತೆ ಇದೆ, ಆದ್ದರಿಂದ ಅವರನ್ನು ಕೇಳಿದೆವು ಎಂದು ಅನ್ನಿಸಿಕೊಳ್ಳುವುದಕ್ಕೋಸ್ಕರ ಈಗ ಮೂರು–ನಾಲ್ಕು ದಿವಸಗಳ ಕೆಳಗೆ ರೆವೆನ್ಯೂ ಮಂತ್ರಿಗಳು ನಿಮ್ಮ ಅಭಿಪ್ರಾಯವೇನು ಎಂದು ನನ್ನನ್ನು ಕೇಳಿದರು. ಅದರಿಂದ ಏನು ಪ್ರಯೋಜನ? ಇಂಥ ದಿವಸ ಮೀಟ್ ಮಾಡೋಣ, ನಿಮ್ಮ ಪ್ರತಿನಿಧಿಗಳನ್ನು ಕಳುಹಿಸಿಕೊಡಿ. ನಿಮ್ಮ ನಮ್ಮ ಭಾವನೆಗಳನ್ನು ಸಮನ್ವಯ ಮಾಡಿಕೊಳ್ಳೋಣ ಎಂದು ತಿಳಿಸಬೇಕಾಗಿತ್ತು. ವಿರೋಧ ಪಕ್ಷದವರ ಭಾವನೆಯನ್ನು ತೆಗೆದುಕೊಳ್ಳಬೇಕೆಂಬ ಮನೋಭಾವ ಕಿಂಚಿತ್ತಾದರೂ ಇಲ್ಲ. 1957ನೆಯ ಇಸವಿ ಜೂನ್ ತಿಂಗಳಿನಿಂದ ನಡೆಸಿಕೊಂಡು ಬಂದಿರತಕ್ಕ ಅಸೆಂಬ್ಲಿ ಕಾರ್ಯಕಲಾಪಗಳ ವಿಧಾನದಲ್ಲಿ ಈ ಅಂಶವನ್ನು ಕಂಡುಕೊಂಡಿದ್ದೇನೆ. ಇನ್ನು ಮುಂದಾದರೂ ಈ ರೀತಿಯಾಗಿ ಹಗುರವಾಗಿ ಮಾತನಾಡತಕ್ಕದ್ದು ಒಳ್ಳೆಯದಲ್ಲ. ಅದರ ಬದಲು ಸರಿಯಾದ ಕಾರ್ಯಕ್ರಮವಿಟ್ಟುಕೊಂಡು ತಿಳಿಸಬೇಕು. ಇಲ್ಲೋ ಹೋಗುತ್ತಿರುವಾಗ ಹೇಳಿದರೆ, ಅದಕ್ಕೆ ಮಾನ್ಯತೆ ಕೊಡಬೇಕೆಂದರೆ ಸರಿಯಲ್ಲ. ಸರಿಯಾದ ಕಾಲವನ್ನು ಗೊತ್ತುಮಾಡಿ ನಮ್ಮ proposition ಹೀಗಿದೆ, ನಿಮ್ಮ propositions ಏನು ಎಂದು ಕೇಳಿದರೆ ಆಗ ಒಂದು ನಿರ್ಧಾರಕ್ಕೆ ಬರುವುದಕ್ಕೆ ಸಾಧ್ಯ. ದಯಮಾಡಿ ಭೂ ಸುಧಾರಣೆಯ ವಿಚಾರದಲ್ಲಿ ತಡಮಾಡಬೇಡಿ ಮತ್ತು ಮಹತ್ತರವಾದ ಮತ್ತು ದೇಶಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ನಿಧಾನಮಾಡಬೇಡಿ. ವಿರೋಧ ಪಕ್ಷದವರನ್ನು ಇಷ್ಟು ಉಪೇಕ್ಷೆಯಿಂದ ಕಾಣಬೇಡಿ. ಪ್ರಜಾಪ್ರಭುತ್ವದಲ್ಲಿ ಎಲ್ಲ ಕಡೆಯೂ ಹೀಗೆ ನಡೆದಿರಬಹುದು. ನಮ್ಮಲ್ಲಿಯೂ

ಕೆಲವು ದಿವಸ ನಡೆಯುತ್ತಿರಬಹುದು. ಅಮೆರಿಕ ದೇಶದಲ್ಲಿಯೂ ಮೊದಲು ಹೀಗೆಯೇ ನಡೆದು ಕಡೆಗೆ ಒಂದು ನಮೂನೆ ತಾಳಿತು. ಇಂಗ್ಲೆಂಡ್ ದೇಶದಲ್ಲಿ 1757 ರಲ್ಲಿ ಪ್ರಜಾಪ್ರಭುತ್ವ ಪ್ರಾರಂಭವಾದರೂ ಬಹಳ ವರ್ಷಗಳ ಪ್ರತಿಭಟನೆಯ ನಂತರ ಮಹತ್ತರವಾದಂಥ ವಿಷಯಗಳಲ್ಲಿ ಎಲ್ಲರೂ ಕಲೆತು ಚರ್ಚೆಮಾಡುತ್ತಿದ್ದರು. ನಾವು ಮುಂದುವರೆದಿರುವ ದೇಶವೆಂದು ಅವರನ್ನು ಅನುಕರಣೆ ಮಾಡುತ್ತಿದ್ದೇವೆ. ಇಂಗ್ಲೆಂಡಿನಲ್ಲಿ 1932ನೆಯ ಇಸವಿಯಲ್ಲಿ ಸರ್ ಆಟ್ಲಿಯವರು ಪ್ರಧಾನ ಮಂತ್ರಿಗಳಾಗಿದ್ದಾಗ, ಮಹತ್ತರವಾದ ವಿಚಾರಗಳಲ್ಲಿ, ಯಾವುದಾದರೂ ಒಂದು ದೊಡ್ಡ ಸಮಸ್ಯೆ ದೇಶದ ಮುಂದೆ ಬಂದಾಗ ವಿರೋಧಪಕ್ಷದ ಮುಖಂಡರನ್ನು ಕರೆಸಿಕೊಂಡು ಸಮಾಲೋಚನೆಯನ್ನು ನಡಸುತ್ತಿದ್ದರು. ಆಗಿನ ಕಾಲದಲ್ಲಿ ಫ್ರಾನ್ಸ್ ದೇಶದಲ್ಲಿ ಸಂಚಾರಕ್ಕೆ ಹೋಗಬೇಕಾಗಿದ್ದ ಕೆಲವು ಪಕ್ಷದ ಮುಖಂಡರು ತಮ್ಮ ಕಾರ್ಯಕ್ರಮವನ್ನು ರದ್ದುಗೊಳಿಸಿ ಇಂಗ್ಲೆಂಡಿಗೆ ಬಂದಿದ್ದಾರೆ.

(ಒಬ್ಬ ಸದಸ್ಯರು ಯುದ್ಧದ ಪ್ರಸ್ತಾಪ ಮಾಡುತ್ತಾರೆ ಅದಕ್ಕೆ ಕೆಂಚಪ್ಪ ವ್ಯಂಗ್ಯ ದನಿಯಲ್ಲಿ ಹೇಳುತ್ತಾರೆ)

ಶ್ರೀ ಕೆ.ಕೆಂಚಪ್ಪ:- 1932 ನೆಯ ಇಸವಿಯಲ್ಲಿ ಯುದ್ಧವಿತ್ತೆಂದರೆ ಅದಕ್ಕೆ ನಾನುಏನು ಹೇಳಬೇಕು?

ನಾನು ಬಿಲ್ಲಿನ ವಿಷಯ ಮಾತ್ರ ಮಾತನಾಡುತ್ತೇನೆ. ಇದುವರೆಗೆ ಆದದ್ದು ಆಗಿಹೋಯಿತು. ಇನ್ನು ಮುಂದಾದರೂ ಸಂಪ್ರದಾಯಗಳು ಶಾಶ್ವತವಾಗಿರುವ ರೀತಿಯಲ್ಲಿ ನಡೆದುಕೊಳ್ಳಬೇಕೆಂದು ಹೇಳುತ್ತೇನೆ. ಭೂ ಸುಧಾರಣೆಯ ಮಸೂದೆಯನ್ನು ತರಲು ಇಷ್ಟಾದರೂ ತಡಮಾಡಬೇಡಿ, ಇದೇ ಅಧಿವೇಶನದಲ್ಲಿಯೇ ಮಸೂದೆಯನ್ನು ತೆಗೆದುಕೊಂಡು ಬಂದು ಪಾಸ್ ಮಾಡಿಸಿದ್ದರೆ ಆಗುತ್ತಿರಲಿಲ್ಲವೆ? Ordinance ಹೊರಡಿಸಿರುವುದನ್ನು ಅಸೆಂಬ್ಲಿಯಲ್ಲಿ regularise ಮಾಡುವುದಕ್ಕೋಸ್ಕರ ಮತ್ತೊಂದು ಕಾನೂನನ್ನು ತರಬೇಕಾಗಿತ್ತೇ? ವಾದ ಮಾಡಲು ನಮಗೂ ಬರುತ್ತದೆ. ವಾದಮಾಡುವ ರೀತಿಯಿಂದ, ಅದನ್ನು ಒಪ್ಪುವ ರೀತಿಯಿಂದ ವಾದಮಾಡಬೇಕು. ಇದಕ್ಕೇನಾದರೂ ಸಮಂಜಸವಾದ ಉತ್ತರವನ್ನು ಕೊಡುತ್ತಾರೆಯೇ? ಈ ರೀತಿಯ ಮನೋಭಾವವಿದ್ದರೆ ದೆಹಲಿಗೆ ಏಕೆ ಹೋಗಬೇಕು? ದೆಹಲಿಗೆ ಹೋಗಿ ತಿಳಿದುಕೊಂಡು, ಲೆಕ್ಕಾಚಾರ ಹಾಕಿ, ಅಳತೆ ನೋಡಿ, ಆಲೋಚನೆ ಮನೋಭಾವನೆ ಇರುವುದೇ ಈ ಭೂಸುಧಾರಣೆ ಮಸೂದೆಯನ್ನು ತರಲು ನಿಧಾನ ಮಾಡುತ್ತಿರುವ ಉದ್ದೇಶ. ಇರುವ ಯಾವ ಒಂದು ಉದ್ದೇಶವನ್ನಿಟ್ಟುಕೊಂಡಿದ್ದಾರೆಯೋ ಅದು ಸರಿಯಲ್ಲವೆಂದು ಹೇಳಿ ಈ ಮಸೂದೆಯನ್ನು ನಾನು ವಿರೋಧ ಮಾಡುತ್ತೇನೆ.

* * * * *

# ಮಾರಾಟ ತೆರಿಗೆ

**5 ಆಗಸ್ಟ್ 1957**

ಶ್ರೀ ಕೆ.ಕೆಂಚಪ್ಪ:- ಸ್ವಾಮಿ, ಕೆಲವು ದಿವಸಗಳ ಹಿಂದೆ ಮಾರಾಟದ ತೆರಿಗೆ ವಿಚಾರವಾಗಿ ಇದೇ ಸಭೆಯಲ್ಲಿ ವಿಶೇಷವಾಗಿ ಚರ್ಚೆನಡೆದು ಅನೇಕ ಮಾನ್ಯ ಸದಸ್ಯರು ಆ ಬಗ್ಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದ್ದಾರೆ. ಅನಂತರ ಈ ಮಸೂದೆ ಸೆಲೆಕ್ಟ್ ಸಮಿತಿಯವರ ಮುಂದೆ ಹೋಗಿ ಅಲ್ಲಿ ಕೂಡ ಚರ್ಚೆ ಆಗಿ ಅದು ಈಗಿರತಕ್ಕ ರೂಪದಲ್ಲಿ ನಮ್ಮ ಮುಂದೆ ಮತ್ತೆ ಬಂದಿದೆ. ಆದರೆ ಈ ವರದಿಯನ್ನು ನಾವು ಪರಿಶೀಲನೆ ಮಾಡುವಾಗ ಒಂದು ಬಹಳ ಪ್ರಾಮುಖ್ಯವಾದಂಥ ವಿಚಾರವಿದೆ. ಅದನ್ನು ನಾವು ಮೊದಲು ನಮ್ಮ ಗಮನಕ್ಕೆ ತೆಗೆದುಕೊಳ್ಳಬೇಕು. ಆ ಮುಖ್ಯವಾದಂಥ ವಿಚಾರವೇನೆಂದರೆ ಈ ಮಾರಾಟ ತೆರಿಗೆಯ ಭಾರ ಯಾರಮೇಲೆ ಬೀಳುತ್ತದೆ? ಈ ತೆರಿಗೆಯನ್ನು ಕೊಡತಕ್ಕವರಾರು? ಎಂಬ ಅಂಶವನ್ನು ಪರಿಶೀಲನೆ ಮಾಡತಕ್ಕದ್ದು ಬಹಳ ಮುಖ್ಯವಾದಂಥ ಅಂಶ. ನಾನೀಗ ಇಲ್ಲಿ ಪರಿಶೀಲನೆ ಮಾಡುತ್ತಿರುವ ಮಾರಾಟ ತೆರಿಗೆಯಲ್ಲಿ ವಿಧವಿಧವಾದ ಬಾಬುಗಳಿವೆ; ಅನೇಕ ಸಾಮಾನುಗಳಿವೆ; ಇವುಗಳ ಮೇಲೆಲ್ಲಾ ಈಗ ತೆರಿಗೆಯ ವಿಚಾರ ಪರಿಶೀಲನೆ ಮಾಡುವಾಗ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ, ಒಂದು ಸ್ಟೇಟಿನಿಂದ ಇನ್ನೊಂದು ಸ್ಟೇಟಿಗೆ ಸಾಮಾನುಗಳು ಬರುವಾಗ ನಾವು ಅವುಗಳ ಮೇಲೆ ತೆರಿಗೆ ಹಾಕಿದರೆ ಆಗ ಅದರ ಪರಿಣಾಮವೇನಾಗುತ್ತದೆ ಮತ್ತು ಆ ರೀತಿ ತೆರಿಗೆ ಹಾಕಿದ ಸಾಮಾನುಗಳನ್ನು ಕೊಂಡುಕೊಳ್ಳತಕ್ಕವರ ಮೇಲೆ ಇದರ ಪರಿಣಾಮವೇನಾಗುತ್ತದೆ, ಈ ಸಾಮಾನುಗಳನ್ನು ಮಾರಾಟ ಮಾಡುವವರ ಮೇಲೇನು ಪರಿಣಾಮವಾಗುತ್ತದೆ ಎಂಬುದನ್ನು ನಾವು ಗಮನಿಸಬೇಕಾದದ್ದು ಬಹು ಮುಖ್ಯವಾದಂಥ ವಿಚಾರ. ಆದರೆ ಆ ಸೆಲೆಕ್ಟ್ ಸಮಿತಿಯವರು ಈ ಪ್ರತಿಯೊಂದು ವಿಚಾರವನ್ನೂ ಪರಿಶೀಲನೆ ಮಾಡಿ ಇದರ ಆಗು ಹೋಗುಗಳೇನು ಮತ್ತು ಇದರ ಪರಿಣಾಮ ಇನ್ನು ಮುಂದಕ್ಕೆ ಎಲ್ಲಿಗೆ ಹೋಗುತ್ತದೆ ಎಂಬ ಬಗ್ಗೆ ಅವರು ತುಂಬ ಉಪೇಕ್ಷೆ ಮಾಡಿದ್ದಾರೆ. ಇದರಲ್ಲಿ ಕೇವಲ ಮಾರಾಟ ತೆರಿಗೆ ವಿಚಾರ ಒಂದೇ ಇರುವುದಿಲ್ಲ. ಪರ್ಚೇಜ್ ಟ್ಯಾಕ್ಸ್ ಸಹ ಇದೆ., ಹೀಗೆ ನಾವು ಎರಡು ವಿಧವಾದ ತೆರಿಗೆಗಳನ್ನು ಹಾಕುವುದರಿಂದ ಬಳಸತಕ್ಕವರ ಮೇಲೆ ಇದರ ಪರಿಣಾಮವೇನಾಗುತ್ತದೆಂಬುದನ್ನು ನಾವು ಅರಿಯಬೇಕಾದದ್ದು ಅತ್ಯಗತ್ಯ. ಆದರೆ ಈ ವಿಚಾರದಲ್ಲಿ ಆ ಸಮಿತಿಯುವರು ಅಷ್ಟೇ ತೀವ್ರಾಸಕ್ತಿ ವಹಿಸಿದಂತೆ ಕಾಣುತ್ತಿಲ್ಲ. ಆದುದರಿಂದ ನಾನೀಗ ತಮ್ಮಲ್ಲಿ ಒಂದು ಪ್ರಶ್ನೆಯನ್ನು ಕೇಳಬೇಕಾಗಿದೆ. ಅದೇನೆಂದರೆ ನಮ್ಮ ಸಮಾಜದಲ್ಲಿರುವ ಮಹಾಜನರಲ್ಲಿ ಶೇಕಡ 85 ಮಂದಿ ಈ ತೆರಿಗೆಯನ್ನು ಕೊಡಲು ಶಕ್ತರಾಗಿದ್ದಾರೆಯೇ ಎಂಬುದು. ಹೀಗೆಎಲ್ಲ ಸಾಮಾನುಗಳ ಮೇಲೂ ಒಂದು ಮಾರಾಟ ತೆರಿಗೆಯನ್ನು ಹಾಕೋಣದರಿಂದ ಆಗಬಹುದಾದ ಪರಿಣಾಮಗಳೇನೆಂಬುದನ್ನು ನಾವು ಪರಿಗಣಿಸಬೇಕಾದದ್ದು ಬಹಳ ಮುಖ್ಯವಾದದ್ದು. ಅದೇರೀತಿ ಈ ತೆರಿಗೆ ಆಖೈರಾಗಿ ಯಾರಮೇಲೆ ಬೀಳುತ್ತದೆ ಎಂಬುದು ಮತ್ತೊಂದು ಪ್ರಾಮುಖ್ಯವಾದ ಸಂಗತಿ. ಈ ಎರಡನ್ನೂ ನಾವು ಪರಿಶೀಲನೆ ಮಾಡಬೇಕು. ಆದರೆ

ನಾವು ಈ ವಿಧವಾದ ಅಪ್ರತ್ಯಕ್ಷ ತೆರಿಗೆಯನ್ನು 1948ಕ್ಕೆ ಹಿಂದೆ ಎಂದೂ ಕಂಡಿರಲಿಲ್ಲ. ಆಗೆಲ್ಲಾ ಪ್ರತ್ಯಕ್ಷ ತೆರಿಗೆಗಳು ಮಾತ್ರ ಇದ್ದವು. ತೆರಿಗೆ ಕೊಡತಕ್ಕವನ ಕಣ್ಣಿಗೆ ಅದು ಸ್ಪಷ್ಟವಾಗಿ ಕಾಣುತ್ತಿತ್ತು. ಯಾರಾದರೂ ಒಬ್ಬ ಮನುಷ್ಯ ಒಂದು ಸಿನಿಮಾ ಮಂದಿರಕ್ಕೆ ಹೋದನೆಂದರೆ ಆತನು ಆ ಮಂದಿರದೊಳಗೆ ಹೋಗಲು ಕೊಡತಕ್ಕ ಛಾರ್ಜ್ ಏನಿದೆಯೋ ಅದರಮೇಲೆ ಇಷ್ಟು ತೆರಿಗೆ ಹಣ ಎಂದು ವಿಧಿಸಿ ಆತನಿಂದ ಆ ಎರಡು ಮೊಬಲಗನ್ನು ವಸೂಲ್ಮಾಡಿಕೊಳ್ಳಲಾಗುತ್ತಿತ್ತು. ಆಗ ಆತನು ತೆರಿಗೆ ಕೊಡುವ ಶಕ್ತಿಯಿದ್ದರೆ ಸಿನಿಮಾಕ್ಕೆ ಹೋಗಬಹುದಾಗಿತ್ತು ಇಲ್ಲದಿದ್ದರೆ ಬಿಡಬಹುದಾಗಿತ್ತು. ಅದೇನೂ ಅಂಥ ಅವಶ್ಯಕವಾದ ಅಂಶವಿಲ್ಲ. ಆದರೆ ಅವನಿಗೆ ತಾನೇನು ತೆರಿಗೆ ತೆರುತ್ತಿದ್ದೇನೆಂಬುದು ಚೆನ್ನಾಗಿ ಅರ್ಥವಾಗುತ್ತಿದ್ದಿತು. ಈ ದಿವಸ ನಾವು ಈ ದೃಷ್ಟಿಯಿಂದ ಈ ವಿಚಾರವನ್ನು ಆಲೋಚನೆ ಮಾಡಿ ನೋಡಿದರೆ ಜನರ ಜೀವನ ಮಾರ್ಗದಲ್ಲಿ ಎಷ್ಟು ವ್ಯತ್ಯಾಸವಾಗಿದೆ? ನಮ್ಮ ಮಹಾ ಜನರು ಏತಕ್ಕೆ ಈ ತೆರಿಗೆಗಳನ್ನು ಕೊಡಬೇಕು; ಎಷ್ಟು ತೆರಿಗೆ ಕೊಡಬೇಕು; ಈ ಕೊಂಡುಕೊಳ್ಳುವವನ ಮೇಲೆ ಎಷ್ಟು ವಿಧವಾಗಿ ತೆರಿಗೆಗಳು ಬೀಳುತ್ತಿವೆ ಅಥವಾ ಕೊಳ್ಳತಕ್ಕ ಮೊಬಲಗಿನಲ್ಲಿ ಎಷ್ಟು ತೆರಿಗೆಗಳನ್ನು ಅದು ಒಳಗೊಂಡಿದೆ, ಅದರಲ್ಲಿ ನ್ಯಾಯವಾದುದೆಷ್ಟು- ಅನ್ಯಾಯವಾದುದೆಷ್ಟು ಎಂಬ ಅಂಶಗಳನ್ನೆಲ್ಲ ಅವರು ಪರಿಶೀಲನೆ ಮಾಡಲು ಇದ್ದಂಥ ಅವಕಾಶವನ್ನು ಈಗ ನೀವು ತಪ್ಪಿಸಿದಂತಾಗಿದೆಯೆಂದು ನಾನೀಗ ಹೇಳುತ್ತೇನೆ. ಇದೇ ಈಗ ನಮ್ಮ ಮುಂದೆ ನಿಂತಿರತಕ್ಕ ಒಂದು ಮುಖ್ಯವಾದಂಥ ಪ್ರಶ್ನೆ. ಈ ದಿವಸ ತೆರಿಗೆ ಕೊಡತಕ್ಕ ಮನುಷ್ಯನಿಗೆ ತಾನೆಷ್ಟು ತೆರಿಗೆ ಕೊಡುತ್ತಿದ್ದೇನೆ ಎಂಬುದು ಆತನಿಗೆ ಅರಿವಾಗಬೇಕು. ಈಗ ಒಬ್ಬ ಮನುಷ್ಯ ಒಂದು ಬಟ್ಟೆ ಅಂಗಡಿಗೆ ಹೋದರೆ ಆತನು ಆ ಬಟ್ಟೆಯ ಮೇಲೆ ಎಷ್ಟು ತೆರನಾದ ತೆರಿಗೆ ಹತ್ತಿ ಮೇಲೆ ತೆರಿಗೆ ಕಪಾಸಿ ಮೇಲೆ ತೆರಿಗೆ ಹೀಗೆಲ್ಲಾ ಕೊಡಬೇಕಾಗಿದೆ. ಯಾವ್ಯಾವ ಬಾಬಿಗೆ ಎಷ್ಟೆಷ್ಟು

ತೆರಿಗೆ ತೆರಲಾಗುತ್ತಿದೆಯೆಂಬುದೂ ಆತನಿಗೆ ಗೊತ್ತಾಗಬೇಕು. ಯಾವ ಯಾವ ಸ್ಟೇಜಿನಲ್ಲಿ ಎಷ್ಟೆಷ್ಟು ತೆರಿಗೆ ತೆರಲಾಗುತ್ತಿದೆಯೆಂಬುದೂ ಆತನಿಗೆ ಗೊತ್ತಾಗಬೇಕು.ಆದರೆ ತಾವೀಗ ವಿಧಿಸಿರುವ ತೆರಿಗೆಯಲ್ಲಿ ಆತನಿಗೆ ಒಂದೂ ಅರಿವಾಗುವುದಿಲ್ಲ. ಇದು ಅವರಿಗೆ ಎಂದರೆ ತೆರಿಗೆ ಕೊಡತಕ್ಕವರಿಗೆ ಅರ್ಥವಾಗುವಂತಿದ್ದರೆ ಆಗ ಅವರು ಸರ್ಕಾರದ ಆಳುವ ಜನರ ಯೋಗ್ಯತೆ ಏನಿದೆ ಎಂಬುದನ್ನು ತಿಳಿದುಕೊಳ್ಳಲು ಅವಕಾಶವಿರುತ್ತಿತ್ತು. ಈ ದಿವಸ ನಾವು ಒಂದು ರೂಪಾಯಿನ ಸಾಮಾನಿಗೆ ಹದಿಮೂರುವರಾಣೆ ತೆರಿಗೆಯನ್ನು ಕೊಡುತ್ತಿದ್ದೇವೆಂಬುದಾಗಿ ತಜ್ಞರು ಹೇಳಿದ್ದಾರೆಂಬುದಾಗಿ ನಾನು ವೃತ್ತಪತ್ರಿಕೆಗಳಲ್ಲಿ ಓದಿದ್ದೇನೆ. ನಾವು ಈಗ ಸರ್ಕಾರದವರು ನಮ್ಮ ಮುಂದೆ ಇಡುತ್ತಿರುವ ವಾದವನ್ನು ಒಪ್ಪಿಕೊಂಡರೆ ಆಗ ನಾವು ಒಂದು ರೂಪಾಯಿನ ಮಾಲಿಗೆ 13.1/3 ಆಣೆ ತೆರಿಗೆಯನ್ನು ತೆರಲು ಒಪ್ಪಿಕೊಂಡ.ಹಾಗೆ ಆಗುತ್ತದೆ. ಈ ದಿವಸ ತಿಳಿದು ಹೀಗೆ ತೆರಿಗೆ. ಕೊಡತಕ್ಕವರು ಬಹಳ ಕಡಿಮೆ. . ತಿಳಿಯದೆ ತೆರಿಗೆ ಕೊಡತಕ್ಕವರೇ ಹೆಚ್ಚು. ಕೇಂದ್ರಸರ್ಕಾರದಲ್ಲಿ ಒಬ್ಬರು ಉಪಮಂತ್ರಿಗಳಾಗಿದ್ದವರೇ 1952 ರಿಂದೀಚೆಗೆ ನಾವು ಒಂದು ರೂಪಾಯಿನ ಮಾಲಿಗೆ 13.1/2 ಆಣೆ ತೆರಿಗೆ ಕೊಡುತ್ತಿದ್ದೇವೆಂದು ಹೇಳಿದ್ದಾರೆ. ಮತ್ತು ಇದೇ ಅಭಿಪ್ರಾಯವನ್ನು ಇದೇ ಊರಿನ ರೋಟರಿ ಕ್ಲಬ್‌ನಲ್ಲಿ ಒಬ್ಬ ಮಹನೀಯರು ವ್ಯಕ್ತಪಡಿಸಿದ್ದಾರೆ. ಈ ರೀತಿ ತೆರಿಗೆಯನ್ನು ಹಾಕಲು ನಿಮಗೆ ನಾವು ಒಪ್ಪಿಗೆ ಕೊಟ್ಟರೆ ಮಹಾಜನರನ್ನು ನಾವು ಎಷ್ಟು

ವಂಚಿಸಿದಂತಾಗುತ್ತದೆ. ಎಷ್ಟರಮಟ್ಟಿಗೆ ಅವರನ್ನು ನಾವು ಶೋಷಣೆ ಮಾಡಿದಂತಾಗುತ್ತದೆ? ಅವರಿಗೆ ಎಷ್ಟರಮಟ್ಟಿಗೆ ನಾವು ಕಿರುಕುಳ ಕೊಟ್ಟಹಾಗೆ ಆಗುತ್ತದೆಂಬುದನ್ನು ಎಲ್ಲರೂ ಈಗ ಆಲೋಚನೆ ಮಾಡಬೇಕಾಗಿದೆ. ಆದರೆ ನಾವು ಈ ತೆರಿಗೆ ವಿಧಿಸುವ ಭರದಲ್ಲಿ ಮುಖ್ಯವಾದ ಮತ್ತು ಮೂಲಭೂತವಾದ ಪ್ರಶ್ನೆಗಳನ್ನೇ ತಳ್ಳಿಹಾಕಿ ಮುಂದಕ್ಕೆ ಹೋಗುತ್ತಿದ್ದೇವೆ.

1942 ರಿಂದ 1945 ನೆಯ ಇಸವಿಯವರೆಗೆ ಮೈಸೂರು ಸಂಸ್ಥಾನದ ವರಮಾನ ಏಳರಿಂದ ಎಂಟು ಕೋಟಿ ರೂಪಾಯಿಗಳ ವರೆಗೆ ಇದ್ದದ್ದು 1947ರಲ್ಲಿ 14 ಕೋಟಿ ರೂಪಾಯಿ ಆಯಿತು. ಆ ಕಾಲದಲ್ಲಿ ಸರ್ಕಾರ ಅಪ್ರತ್ಯಕ್ಷ ತೆರಿಗೆ ಹಾಕದೇ ಇದ್ದರೂ ಸಹ ಅನೇಕ ರಸ್ತೆಗಳನ್ನು ಮಾಡಿದ್ದಾರೆ. ಕಾಲುವೆಗಳನ್ನು ಕಟ್ಟಿಸಿದ್ದಾರೆ. ಕೆರೆಗಳನ್ನು ಕಟ್ಟಿಸಿದ್ದಾರೆ. ಬೇಕಾದಷ್ಟು ಜನೋಪಯೋಗಿ ಕೆಲಸಗಳನ್ನು ಮಾಡಿದ್ದಾರೆ. ಆದರೆ ಇತ್ತೀಚೆಗೆ ಮಾಡಿರುವ ರಸ್ತೆಗಳನ್ನು ನೋಡಿದರೆ ಅವುಗಳ ಮೇಲೆ ಓಡಾಡಲಿಕ್ಕೆ ಆಗುವುದಿಲ್ಲ. ಆಗಿನ ಕಾಲದಲ್ಲಿ ಅಪ್ರತ್ಯಕ್ಷ ತೆರಿಗೆ ಇದ್ದಿದ್ದಿಲ್ಲ. ಕೊಡಬೇಕಾದ ತೆರಿಗೆಯೂ ಸಹ ಎಷ್ಟು ಎಂಬುದು ಗೊತ್ತಾಗುತ್ತಿತ್ತು. ಆದರೆ ಕಳೆದ ಹತ್ತು ವರ್ಷಗಳಲ್ಲಿ ಕಾಂಗ್ರೆಸ್ ಆಡಳಿತೆಯಲ್ಲಿ ಜನಸಾಮಾನ್ಯರ ಮೇಲೆ ತೆರಿಗೆಭಾರ ವಿಪರೀತವಾಗಿ ಹೆಚ್ಚಾಗಿದೆ. ಈಗಾಗಲೇ ಕುಸಿದು ಹೋಗಿರತಕ್ಕಂಥ ಜೀವನ ಮಟ್ಟ ಇನ್ನೂ ಹೆಚ್ಚಿನ ತೆರಿಗೆಯ ಭಾರದಿಂದ ಇನ್ನೂ ಹೆಚ್ಚು ಕುಸಿದುಹೋದರೆ ದೇಶಕ್ಕೆ ಕಲ್ಯಾಣವಾಗದು. ದಿನದಿನಕ್ಕೆ ಜನರ ಉತ್ಪಾದನಾ ಶಕ್ತಿಯನ್ನು ಹೆಚ್ಚಿಸಿ ಜನ ಜೀವನ ಸುಖಮಯವಾಗುವಂತೆ ಮಾಡಬೇಕು. ಈ ತೆರಿಗೆ ಜನ ಸಾಮಾನ್ಯರೆಲ್ಲರ ಮೇಲೆ ಬೀಳುತ್ತದೆಂದು ದು:ಖದಿಂದಹೇಳಬೇಕಾಗಿದೆ. ಶೇಕಡಾ 85 ರಷ್ಟು ಜನರಿಗೆ ಸಾಕಾಗುವಷ್ಟು ಆಹಾರವಿಲ್ಲ. ಬಟ್ಟೆಯಿಲ್ಲ. ಇಂಥ ಪರಿಸ್ಥಿತಿಯಲ್ಲಿ ತೆರಿಗೆಯ ಭಾರ ಹೊರುವುದಕ್ಕೆ ಜನರು ಅಸಮರ್ಥರಾಗಿದ್ದಾಗ ಅದನ್ನು ಗಮನಕ್ಕೆ ತೆಗೆದುಕೊಳ್ಳದೆ ಎಲ್ಲಿ ತೆರಿಗೆ ವಿಧಿಸಲು ಸಾಧ್ಯವಿಲ್ಲವೋ ಅಲ್ಲಿ ಸರಕಾರ ತೆರಿಗೆ ಹಾಕುತ್ತಿರುವುದು ವಿಷಾದಕರ. ಯಾರು ಟ್ಯಾಕ್ಸ್ ಕೊಡುವುದಕ್ಕೆ ಸಮರ್ಥರೋ ಅಂಥವರ ಮೇಲೆ ಟ್ಯಾಕ್ಸ್ ಹಾಕಬೇಕು ಎಂಬ ಭಾವನೆ ಇರಬೇಕು. ಆದರೆ ಬಡವನ ಮೇಲೆ ತೆರಿಗೆಯ ಭಾರ ಹಾಕುವುದು ಯಾವ ನ್ಯಾಯ, ಯಾವ ಧರ್ಮ, ಯಾವನೀತಿ? ಬಡಜನತೆಯ ಸಲುವಾಗಿ ಸಮಾಜ ಕಲ್ಯಾಣ ಕೇಂದ್ರ, ಸಮಾಜ ವಿಕಾಸ ವಗ್ಯೆರೆ ವಗ್ಯೆರೆ ಸಲುವಾಗಿ ಬೇಕಾದಷ್ಟು ದುಡ್ಡು ಸರ್ಕಾರ ಖರ್ಚು ಮಾಡುತ್ತಿದೆ. ಪಂಚವಾರ್ಷಿಕ ಯೋಜನೆಗು ಬೇಕಾದಷ್ಟು ದುಡ್ಡು ಖರ್ಚು ಆಗುತ್ತಾ ಇದೆ. ಈ ಹತ್ತು ವರ್ಷದ ರಾಜ್ಯಭಾರದಲ್ಲಿ ಎಷ್ಟು ಹಣ ಖರ್ಚಾಗಿದೆ, ಎಷ್ಟು ಸಾಲವಾಗಿದೆ, ಅದಕ್ಕೆ ತಕ್ಕ ಸುಧಾರಣೆ ಏನಾಗಿದೆ ಮತ್ತು ಉತ್ಪತ್ತಿ ಹೆಚ್ಚಾಗಿದೆಯೇ ಎಂಬುದನ್ನು ಗಮನದಲ್ಲಿ ತೆಗೆದುಕೊಂಡು ನೋಡಬೇಕು. ಹತ್ತು ವರ್ಷಗಳ ಹಿಂದೆ ಪರಿಸ್ಥಿತಿ ಹೇಗೆ ಇತ್ತು, ಈಗ ಹೇಗೆ ಇದೆ ಎಂಬುದನ್ನೇ ನೋಡಬೇಕು. ತಿರುವಾಂಕೂರ್–ಕೊಚ್ಚಿನ್, ಮದ್ರಾಸು, ಬೊಂಬಾಯಿ ಬಗ್ಗೆ ಟ್ಯಾಕ್ಸೇಷನ್ ಇನ್‌ಕ್ವಾಯಿರಿ ಕಮಿಟಿಯವರು ಹೀಗೆ ಹೇಳಿದ್ದಾರೆ. ಅಲ್ಲಿ ಟ್ಯಾಕ್ಸ್ ಹಾಕಿದ್ದಾರೆಂದು ಹೇಳಿದರೆ, ಅದೇನೂ ವೇದ ಅಲ್ಲ. ನಾವೆ ಅವರಿಗೆ ಹೇಳತಕ್ಕಂಥ ಶಕ್ತಿ ನಮ್ಮಲ್ಲಿ ಇರಬೇಕು. ಆದಕಾರಣ ಆ ರಿಪೋರ್ಟ್‌ನಲ್ಲಿ ಹಾಗೆ ಹೇಳಿದೆ ಹೀಗೆ ಹೇಳಿದೆ ಎಂದು ಹೇಳುವುದು ಅದೇನೂ ವೇದ ಅಲ್ಲ; ಅದರಲ್ಲಿ ಏನೂ ತತ್ವವಿಲ್ಲ ಧರ್ಮವಿಲ್ಲ ಆದಕಾರಣ the principles that have been enunciated in economics ಏನು

ಇದೆಯೋ ಅದನ್ನು ಆಲೋಚನೆ ಮಾಡಬೇಕಾಗುತ್ತದೆ. ಏಕೆಂದರೆ ನಮ್ಮದು ಬಹಳ ಹಿಂದುಳಿದ ದೇಶ, ಹರಕು ಬಟ್ಟೆ ಹಾಕಿದರೂ ಅಷ್ಟೇ, ಒಳ್ಳೇ ಬಟ್ಟೆ ಹಾಕಿದರೂ ಅಷ್ಟೇ ಯಾವುದಾದರು ವಾದ ಹೂಡಿ ಕಂದಾಯ ವಸೂಲುಮಾಡಲಿಕ್ಕೆ ಹೊರಟಿದ್ದೀರಿ.

ಸರಕಾರದಲ್ಲಿ partisan spirit ಬೆಳಿದಿದೆ; ಈಗಿರುವ fascist mentality ಹೋಗಬೇಕು ಪ್ರಜಾಪ್ರಭುತ್ವದ ತತ್ವಗಳಿಗೆ ಅನುಸಾರವಾಗಿ ಪ್ರಜೆಗಳ ಹಿತಕ್ಕೋಸ್ಕರ ತೆರಿಗೆಹಾಕಬಹುದು. ಸಮಾಜದಲ್ಲಿ ಇರತಕ್ಕಂಥ ಸಾಹುಕಾರರು, ಮಧ್ಯಮವರ್ಗದವರು, ಕಾರ್ಖಾನೆ ಮಾಲೀಕರು, ಸರಕಾರಿ ನೌಕರರು, ಕೂಲಿಕಾರರು ಎಂಬುದಾಗಿ ಇರುವ ವಿವಿಧ ಗುಂಪುಗಳಿಗೆ ಈ ತೆರಿಗೆಯಿಂದ ಯಾವರೀತಿ ಉಪಯೋಗವಾಗುತ್ತದೆ? ಅವರ ಅಭಿವೃದ್ಧಿಗೋಸ್ಕರ ತೆರಿಗೆ ಹಣ ಉಪಯೋಗ ಮಾಡಲಾಗುತ್ತದೆಂದು ಹೇಳಬಲ್ಲಿರಾ? ಟ್ರಾವನ್‌ಕೋರ್ ಮದ್ರಾಸದಲ್ಲಿರುವ ಹಾಗೆ ಜನರಲ್ ಟ್ಯಾಕ್ಸ್ ಹಾಕೋಣ. Selected araticles ಮೇಲೆ ತೆರಿಗೆ ಇರಲಿ. ಮುಖ್ಯ ಉದ್ದೇಶ ಏನೆಂಬುದನ್ನು ತಿಳಿಸದೆ ತೆರಿಗೆ ಹಾಕಿಬಿಟ್ಟಿದ್ದೀರಿ ನಿಮಗೆ ನಿಜವಾಗಿ ತೆರಿಗೆ ಹಾಕುವುದಕ್ಕೆ ಅವಶ್ಯಕತೆ ಇದೆ ಮತ್ತು ಅಭಿವೃದ್ಧಿ ಕಾರ್ಯಗಳಿಗೋಸ್ಕರ ವೆಚ್ಚಮಾಡುವ ಸಂದರ್ಭವಿದೆ ಎನ್ನುವುದಾದರೆ, ಅದು ವ್ಯವಸಾಯದ ಕಾರ್ಯಗಳಿಗೋಸ್ಕರ ಉಪಯೋಗವಾಗದೆ ಬೇರೆ ಬೇರೆ ಕಾರ್ಯಗಳಿಗೆ ಉಪಯೋಗವಾಗುತ್ತಿದೆ. ಯಾರು ಯಾರಿಗೆ ಮಾರಾಟ ತೆರಿಗೆ ಕೊಡಲು ಶಕ್ತಿ ಇದೆಯೋ ಅಂತಹವರ ಮೇಲೆ ಈ ತೆರಿಗೆ ಬೀಳುವಂತೆ ನೀವು ಏನಾದರೂ ವ್ಯವಸ್ಥೆ ಮಾಡಬಲ್ಲಿರಾ ಎಂದು ಕೇಳುತ್ತೇನೆ. ಇಲ್ಲದೇ ಹೋದರೆ ಇವೊತ್ತಿನ ದಿವಸ ಬಹುಮತವಿದೆ. ಈ ಮಸೂದೆಯನ್ನು ಪಾಸ್ ಮಾಡಿಕೊಳ್ಳುತ್ತೇವೆ ಎಂದರೆ ಅದರಿಂದ ನಿಮಗೆ ನಿಜವಾಗಿ ಕಲ್ಯಾಣವಾಗುವುದಿಲ್ಲ. " God snatches away freedom from those who want to destroy it" ಎಂದು ದೊಡ್ಡ ಮನುಷ್ಯರು ಹೇಳುತ್ತಾರೆ. ನೀವು ಬಹುಮತವಿದೆ, ಅಧಿಕಾರವಿದೆ, ಏನು ಬೇಕಾದರು ಮಾಡುತ್ತೇವೆ ಎಂದು ಹೇಳಬಹುದು. ಇವತ್ತಿನದಿವಸ ಎಷ್ಟೋ ಅನ್ಯಾಯವಾಗುತ್ತಿದೆ. ಲಂಚವಂತೂ ಜಾಸ್ತಿಯಾಗುತ್ತಿದೆ. ಅಪ್ರತ್ಯಕ್ಷವಾಗಿ ಎಷ್ಟೋ ತೆರಿಗೆ ಬೀಳುತ್ತಿದೆ.

ಶ್ರೀ ಟಿ.ಮರಿಯಪ್ಪ:- ಇದನ್ನು ಹೊಸದಾಗಿ ಹಾಕುತ್ತಿದ್ದೇವೆಯೇ? ಮೊದಲಿನಿಂದಲೂ ಎಕ್ಸೈಜ್ ಟ್ಯಾಕ್ಸ್, ಸೇಲ್ಸ್ ಟ್ಯಾಕ್ಸ್, ಇನ್‌ಕಂಟ್ಯಾಕ್ಸ್ ಇರಲಿಲ್ಲವೇ?

ಶ್ರೀ ಕೆ.ಕೆಂಚಪ್ಪ:- ಹೊಸದಾಗಿಯೇ ಎಲ್ಲಾ ಮಾಡುತ್ತಿದ್ದೀರಿ. ತೆರಿಗೆಗಳನ್ನು ಹಾಕಿಬಿಡೋಣ ಎಂದು ಮಾಡುತ್ತಿದ್ದೀರಿ. ಇದು ಶಾಸ್ತ್ರ ರೀತಿ ಆಗುವುದಿಲ್ಲ. ಏನೋ ಒಂದು ಕಾರ್ಯಕ್ಕೋಸ್ಕರ ದುಡ್ಡು ಸಂಪಾದನೆ ಮಾಡುವುದಕ್ಕೋಸ್ಕರ ಮಾಡುತ್ತಿದ್ದೀರಿ. ಹಿಂದೆ ಇರಬಹುದು. ಆದರೆ ಬೇಡ ಎಂದು ಹೇಳುವುದಕ್ಕೆ ನಮಗೆ ಅಧಿಕಾರವಿಲ್ಲವೇ? ನೀವು ಹಿಂದೆ ಮಾರಾಟ ತೆರಿಗೆಯನ್ನು ಹಾಕಿದಾಗ ಎಷ್ಟು ಪ್ರತಿಭಟನೆ ಬಂತು ಎಂಬುದನ್ನು ಯೋಚಿಸಿದ್ದೀರಾ? ಈಗ ಹತ್ತು ವರ್ಷಗಳಿಂದ ಸುಮಾರು 23-24 ರೀತಿಗಳಲ್ಲಿ ತೆರಿಗೆಗಳನ್ನು ಹಾಕಿದ್ದೀರಿ. ಹಿಂದೆ ಇದ್ದುದಕ್ಕಿಂತ ಈಗ ತೆರಿಗೆಗಳನ್ನು ಹೆಚ್ಚಿಗೆ ಮಾಡಿದ್ದೀರಿ. ಹೊಸ ತೆರಿಗೆಗಳನ್ನು ಬೇರೆ ಹಾಕಿದ್ದೀರಿ. ಕಂಡದ್ದು ಒಂದನ್ನೂ ಬಿಟ್ಟಿಲ್ಲ. ಇಷ್ಟು ತೆರಿಗೆಗಳ ಭಾರವನ್ನು ಹೊರತಕ್ಕ ಶಕ್ತಿ ಸಾಮಾನ್ಯ ಜನರಿಗೆ ಹೇಗೆ ಬರಬೇಕು? ಈ ದೃಷ್ಟಿಯಿಂದ ನಾನು ಆಗಲೇ ಹೇಳಿದ್ದೇನೆ. ಹಿಂದೆ ಹಾಕಿದ್ದ ತೆರಿಗೆಯನ್ನು ವಜಾ

ಮಾಡುವುದಕ್ಕೆ ಈ ಸಭೆಗೆ ಅಧಿಕಾರವಿದೆ ಮತ್ತು ಹೊಸದಾಗಿ ಹಾಕುವುದಕ್ಕೆ ಅಧಿಕಾರವಿದೆ. ಆದರೆ ಈಗ ಇರುವ ದೃಷ್ಟಿಯಿಂದ ಮಾತ್ರ ಆಲೋಚನೆ ಮಾಡಬೇಕು. ಆದ್ದರಿಂದ ನಾವು ಇದನ್ನು ಬಹಳ ಹುಷಾರಾಗಿ ನೋಡಬೇಕು. ನನಗೆ ಎಲ್ಲವೂ ಗೊತ್ತಿದೆ. ನಾವು ಇಲ್ಲಿಗೆ ಬಂದು ಸುಮ್ಮನೆ ಗಂಟಲನ್ನು ಒಣಗಿಸಿಕೊಳ್ಳುತ್ತಿದ್ದೇವೆ. ನಾವು ಎದುರು ಪಕ್ಷದವರು, ಸ್ವಲ್ಪ ಜೋರಾಗಿ ಮಾತನಾಡುತ್ತೇವೆ. ಇಲ್ಲಿ ಆಗುವ ವಿಚಾರವನ್ನು ಬಹಿರಂಗವಾಗಿ ಹೊರಗೆ ಹೇಳಬೇಕಾಗುತ್ತದೆ. ಯಾವ ದೃಷ್ಟಿಯಿಂದ ಈ ವಿಚಾರ ತೆಗೆದುಕೊಂಡರೂ ಈಗ ನಮಗೆ ಏನಾಗುತ್ತದೆ ಎಂಬುದು ಚೆನ್ನಾಗಿ ಗೊತ್ತಿದೆ. ತಮಗೆ ಬಹುಮತವಿದೆ ಏನು ಮಾಡಿದರೂ ನಡೆಯುತ್ತದೆ ಎಂದು ಹೇಳಬಹುದು. ಹೆಂಡಕುಡಿದವರಿಗೆ ತಲೆಗೆ ಮತ್ತು ಹತ್ತಿ ತಿರುಗುವ ಹಾಗೆ ಅಧಿಕಾರ ಬಂದಾಗ ತಲೆತಿರುಗುವುದೂ ಸಂಭವ. ಅಧಿಕಾರ ಎಂಬುದು ಅಷ್ಟಮದಗಳಲ್ಲೊಂದು ಮದವೆಂದು ನಮ್ಮ ಪಂಡಿತರು ಹೇಳಿದ್ದಾರೆ.

ಶ್ರೀ ಟಿ.ಮರಿಯಪ್ಪ:- ಮೆಂಬರ್ ಆದರೂ ಬರುತ್ತದೆ. ಮಂತ್ರಿಗಳಾದರೆ ಬರುವುದಿಲ್ಲ.

ಶ್ರೀ ಕೆ.ಕೆಂಚಪ್ಪ:- ಮೆಂಬರ್ ಆದರೂ ಬರುತ್ತದೆ ಮಂತ್ರಿಗಳಾದರೆ ಇನ್ನೂ ಹೆಚ್ಚಿಗೆ ಬರುತ್ತದೆ. ಅದಕ್ಕೆ ಒಂದು ಶ್ಲೋಕವನ್ನು ಹೇಳಬಯಸುತ್ತೇನೆ. ಅದು ಹೀಗಿದೆ: "ಸಿರಿಯೊಳ್ ಸೈರಣೆ ಕಷ್ಟದೊಳು ಧೈರ್ಯಂ ಜಸದೊಳಾಸೆ" ಆದ್ದರಿಂದ ಸಿರಿಬಂದಾಗ ಹುಷಾರಾಗಿರಬೇಕು ಎಂದು ಹೇಳಿದ್ದಾರೆ. ಹೀಗೆಲ್ಲಾ ಪ್ರತಿಯೊಂದಕ್ಕೂ ನಮ್ಮ ಶಾಸ್ತ್ರದಲ್ಲಿ ಒಂದೊಂದು ರೀತಿ ಬರೆದಿದ್ದಾರೆ. ಆ ಶಾಸ್ತ್ರಗಳನ್ನು ನಮಗೋಸ್ಕರವೇ ಬರೆದಿದ್ದಾರೆ. ನಮ್ಮ ದೃಷ್ಟಿಯನ್ನು ಸರಿಯಾದ ಕಡೆಗೆ ಇಟ್ಟುಕೊಂಡಿರುವ ಹಾಗೆ ನಾವು ಹುಷಾರಾಗಿರಬೇಕು. ಮೆಂಬರುದಾರರಿಗೆ ಮತ್ತು ಬೇರೆ ಬರಬಹುದು. ಮಂತ್ರಿಗಳಾದವರಿಗೆ ಇನ್ನಿಷ್ಟು ಏರುತ್ತದೆ. ಆದ್ದರಿಂದ ನಾವು ಆಲೋಚನೆ ಮಾಡಬೇಕು. 1952ನೆಯ ಇಸವಿಯಲ್ಲಿ ಹಿಂದೂಸ್ಥಾನದಲ್ಲಿ ಎಸೆನ್ಷಿಯಲ್ ಕಮಾಡಿಟೀಸ್ ಆಕ್ಟ್ ಎಂದು ಮಾಡಿದ್ದಾರೆ. ಅದರ ಪ್ರಕಾರ ಎಸೆನ್ಷಿಯಲ್ ಕಮೊಡಿಟೀಸ್ ಅಂದರೆ ಮನುಷ್ಯನ ಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರತಕ್ಕ ಸಾಮಾನುಗಳ ಮೇಲೆ ತೆರಿಗೆ ಹಾಕುವುದಿಲ್ಲ ಎಂಬ ಷರತ್ತು ಇರುವಾಗ ಇಡೀ ಹಿಂದೂಸ್ಥಾನಕ್ಕೆಲ್ಲಾ ಅನ್ವಯಿಸುವ ಒಂದು ಪದ್ಧತಿಯನ್ನು ಇಲ್ಲಿ ತಾವು ಅಷ್ಟು ತುಚ್ಛವಾಗಿ ಕಾಣಲಿಕ್ಕಿಲ್ಲ ಎಂದು ತಿಳಿದಿದ್ದೆ. ಆದರೆ ತಮ್ಮ ಲಿಸ್ಟ್‌ನಲ್ಲಿರುವ ತಾವು ಎಸೆನ್ಷಿಯಲ್ ಕಮೊಡಿಟೀಸ್ ಮೇಲೆ ತೆರಿಗೆ ಹಾಕುವುದಕ್ಕೆ ಪ್ರೆಸಿಡೆಂಟ್‌ರಿಂದ ಅನುಮತಿ ಪಡೆಯುತ್ತೇವೆ ಮತ್ತು ಗವರ್ನರ್ ಅವರ ಅನುಮತಿಯೂ ಬಂದಿದೆ ಎಂದು ಹೇಳುತ್ತೀರಿ.

ಶ್ರೀ ಟಿ.ಮರಿಯಪ್ಪ:- ಗವರ್ನರ್ ಅವರ ಅನುಮತಿಯೂ ಬಂದಿದೆ. ಹಾಗೆಯೇ ಅಧ್ಯಕ್ಷರ ಅನುಮತಿಯೂ ಬರುತ್ತದೆಂದೂ ಒಪ್ಪೋಣ.

ಶ್ರೀ ಕೆ.ಕೆಂಚಪ್ಪ:- ಕಾಲದ ಮಹಿಮೆ ಹೇಗಿದೆಯೋ ಅದರಂತೆ ನಡೆಯುತ್ತದೆ. ಆ ಮಹಿಮೆ ಇರುವವರೆಗೂ ನಡೆಯುತ್ತದೆ. ಉದಾಹರಣೆಗೆ ಹೇಳುವುದಾದರೆ ಭಸ್ಮಾಸುರನ ಮಹಿಮೆ ಯಾವರೀತಿ ಕೊನೆ ಮುಟ್ಟಿತು ಎಂಬುದು [illegible] [illegible] [illegible]ಯವೆ.

ಶ್ರೀ ಟಿ.ಮರಿಯಪ್ಪ:- ಇದು ಕಲಿಯುಗವಲ್ಲವೇ? ಅತ್ಯಾವಶ್ಯಕವಾಗಿ ಜೀವನಕ್ಕೋಸ್ಕರ ಬೇಕಾಗಿರತಕ್ಕ ಸಾಮಾನುಗಳ ಮೇಲೆ ತಾವು ತೆರಿಗೆ ಹಾಕುವುದಕ್ಕೆ ಹಿಂಜರಿಯಲಿಲ್ಲವಲ್ಲಾ ಎಂದು ವಿಷಾದ ಪಡುತ್ತೇವೆ.

ಶ್ರೀ ಎ.ವಿ.ನರಸಿಂಹರೆಡ್ಡಿ (ಬೆಂಗಳೂರು ದಕ್ಷಿಣ):- ಪಲ್ಸಸ್ ವಿಷಯ ಹೇಳುತ್ತೀರಾ?

ಶ್ರೀ ಕೆ.ಕೆಂಚಪ್ಪ:- ನಾನು ಮಾತನಾಡುವಾಗ ಏನೊಂದು ವಿಷಯವನ್ನು ಯಾವ ಸದಸ್ಯರೇ ಆಗಲಿ ಕೇಳಿದರೂ ಅದಕ್ಕೆ ಉತ್ತರ ಕೊಡಲು ಸಿದ್ಧ. ಆದರೆ ಕುಳಿತುಕೊಂಡು ಗೊಣಗಿಕೊಂಡು ಉಪಪ್ರಶ್ನೆ ಕೇಳುವ ಹಾಗೆ ಮಾತನಾಡಬಾರದು ಎಂದು ನಾನು ಈಗ ಅಧ್ಯಕ್ಷರನ್ನು ಕೇಳುತ್ತೇನೆ.

ಶ್ರೀ ಎ.ವಿ.ನರಸಿಂಹರೆಡ್ಡಿ:- ಕೋಪವಮಾಡಬೇಡಿ.

ಶ್ರೀ ಕೆ.ಕೆಂಚಪ್ಪ:- ಕೋಪ ಮಾಡುವುದನ್ನೆಲ್ಲಾ ಅತ್ತಕಡೆಗೆ ಬಿಡಲಾಗಿದೆ. ಇದೆಲ್ಲಾ ಕೇಳಿದರೆ ಬಹಳ ದು:ಖವಾಗುತ್ತದೆ. ಸೆರಿಯಲ್ಸ್, ಸಿಗರೇಟ್ ವಗೈರೆಗಳು ಜನಸಾಮಾನ್ಯರಿಗೆ ಅತ್ಯಗತ್ಯವಾಗಿ ಬೇಕಾಗಿರತಕ್ಕ ಸಾಮಾನುಗಳಲ್ಲವೇ?

ಶ್ರೀ ಟಿ.ಮರಿಯಪ್ಪ:- ಅವು ಅವಶ್ಯಕಗಳು ನಿಜ.

ಶ್ರೀ ಕೆ.ಕೆಂಚಪ್ಪ:- ಇನ್ನು ಕೇಂದ್ರಸರ್ಕಾರದವರು ಎಕ್ಸೈಜು ಡ್ಯೂಟಿಯನ್ನು ಯಾವ ಯಾವ ಪದಾರ್ಥಗಳ ಮೇಲೆ ವಿಧಿಸಿದ್ದಾರೆ? ತಾವು ಅಷ್ಟೂ ಒಪ್ಪಲಿಲ್ಲ. ಅದಕ್ಕಿಂತ ಮುಂದೆ ಹೋಗಿದ್ದೀರಿ. ಸಿಗರೇಟ್ ತಂಬಾಕದ ಮೇಲೆ ಸೆಂಟ್ರಲ್ ಎಕ್ಸೈಜು ಡ್ಯೂಟಿ ಒಂದು ಪೌಂಡಿಗೆ ಎಷ್ಟು? ಯೋಚನೆ ಮಾಡಿ. ತಂಬಾಕ ಬೆಳೆಯತಕ್ಕ ಮನುಷ್ಯ ಒಂದು ಪೌಂಡಿಗೆ ಎಂಟು ಆಣೆ ಎಕ್ಸೈಜು ಡ್ಯೂಟಿ ಕೊಟ್ಟರೆ, ಒಂದು ಮಣಕ್ಕೆ 14 ರೂಪಾಯಿಯಾಗುತ್ತದೆ. ಹೀಗೆ ಆಮೇಲೆ ಬೆಳೆಯುವವನು ಸೆಂಟ್ರಲ್ ಎಕ್ಸೈಜು ಡ್ಯೂಟಿ 14 ರೂಪಾಯಿ ಮತ್ತು ರಿಜಿಸ್ಟ್ರೇಷನ್ ಫೀ ಇತ್ಯಾದಿ ಐದು ರೂಪಾಯಿಗಳನ್ನು ಕೊಟ್ಟರೆ ಎಷ್ಟಾಗುತ್ತದೆ? ನಿಜವಾಗಿ ಇದನ್ನು ರೈತರ ಅಭಿವೃದ್ಧಿಗೋಸ್ಕರ ಮಾಡಿದ್ದೀರೋ ಅಥವಾ ಏನೋ ಸರ್ಕಾರಕ್ಕೆ ದುಡ್ಡು ಬರಲಿ ಎಂದು ಮಾಡಿದ್ದೀರೋ ಅಥವಾ ಏನೋ ಸರ್ಕಾರಕ್ಕೆ ದುಡ್ಡು ಬರಲಿ ಎಂದು ಮಾಡಿದ್ದೀರೋ? ಪ್ರತಿಯೊಂದು ಸಾಮಾನಿನ ಮೇಲೂ ಈ ತೆರಿಗೆ ಬೀಳುತ್ತಿದೆ. ಪೆನ್, ಪೆನ್ಸಿಲ್ ಇತ್ಯಾದಿಗಳ ಮೇಲೆ ತೆರಿಗೆ ಹಾಕಿದ್ದೀರಿ. ಯಾವನೋ ಒಬ್ಬ ಸಣ್ಣ ವ್ಯಾಪಾರಸ್ಥ ಪೆನ್ನುಗಳನ್ನು ತಂದರೆ, ಅದಕ್ಕೆ ತೆರಿಗೆ. ಮಕ್ಕಳು ವಿಶೇಷವಾಗಿ ಬರೆಯುವುದಕ್ಕೆ ಉಪಯೋಗಿಸುವ ಪೆನ್ನು, ಪೆನ್ಸಿಲ್‌ಗಳು ಎಸೆನ್ಸಿಯಲ್ ಕಮೊಡಿಟೀಸ್ ಅಲ್ಲವೇ? ಇವುಗಳು ಹತ್ತು ರೂಪಾಯಿಗಳಿಗೆ ಮೇಲ್ಪಟ್ಟು ಇದ್ದರೆ, ತೆರಿಗೆ ಹಾಕಬಹುದು ಎಂದು ಮಾಡಿದ್ದೀರಿ; ಪಲ್ಸಸ್, ಸೆರಿಯಲ್ಸ್, ಸಿಗಾರ್ಸ್, ಸಿಗರೇಟ್ಸ್, ಪೆನ್, ಪೆನ್ಸಿಲ್, ಸ್ಟೇನ್‌ಲೆಸ್ ಸ್ಟೀಲ್ ಪ್ಲೇಟ್ಸ್, ಮತ್ತು ಲೆದರ್‌ಗುಡ್ಸ್ ಇತ್ಯಾದಿಗಳ ಮೇಲೆ ಸುಂಕ ಹಾಕಿದ್ದೀರಿ. ಇವತ್ತಿನ ದಿವಸ ಒಬ್ಬ ಬಡವ ಕಂಚಿನ ಅಥವಾ ತಾಮ್ರದ ಸಾಮಾನುಗಳನ್ನು ಕೊಂಡು ಕೊಳ್ಳುವ ಸ್ಥಿತಿಯಲ್ಲಿಲ್ಲ. ಅವನು 2.1/2 ಆಣೆ ಗ್ಲಾಸನ್ನು ಕೊಂಡು ಕೊಂಡರೆ, ಅದರ ಮೇಲೆ ತೆರಿಗೆ ಹಾಕುತ್ತೀರಿ. ಯಾವ ಯಾವ ಪದಾರ್ಥಗಳ ಮೇಲೆ ತೆರಿಗೆ ಹಾಕಬೇಕು,

ಯಾವ ಯಾವುದನ್ನು ಬಿಟ್ಟುಬಿಡಬೇಕು, ಎಂಬ ಮೂಲಭೂತವಾದ ತತ್ವವನ್ನು ಮರೆತಿದ್ದಾರೆ. ಬಟ್ಟೆ ಎಲ್ಲರಿಗೂ ಬೇಕು. ಅದು ಎಸೆನ್‌ಷಿಯಲ್ ಕಮೊಡಿಟಿ. ಬಟ್ಟೆ ಮೇಲೆ ಹಾಕಿದ್ದಾರೆ. ಹತ್ತಿಯಿಂದ ಆಗತಕ್ಕ ದಾರವನ್ನೂ ಬಿಟ್ಟಿಲ್ಲ. ಹಿಂದಿನ ಕಾಲದಲ್ಲಿ ಒಂದು ಜೊತೆ ಪಂಚೆಗೆ 3.1/2 ರೂಪಾಯಿ ಇತ್ತು. ಈಗ 24 ರೂಪಾಯಿ ಆಗಿದೆ. ಮಗ್ಗದಲ್ಲಿ ತಯಾರಾದ ಕೈ ನೂಲಿನ ಬಟ್ಟೆ ಬೇಗ ಹರಿಯುತ್ತದೆ. ಆದ್ದರಿಂದ ಕೈಯಿಂದ ಮಾಡಿದ ಬಟ್ಟೆಗಿಂತ ಮಿಲ್ಲಿನಿಂದ ತಯಾರಾದ ಬಟ್ಟೆಗಳನ್ನು ಬಹಳ ಜನ ಕೊಂಡು ಕೊಳ್ಳುತ್ತಾರೆ. ಏತಕ್ಕೆಂದರೆ ಅದು ಬಹಳ ದಿವಸ ಬಾಳಿಕೆ ಬರುತ್ತದೆ. ಅದರಲ್ಲೂ ಅನುಭವಶಾಲಿಗಳಾದ ಮಾರಾಟಗಾರರು ಇದನ್ನು ಒಪ್ಪುತ್ತಾರೆ. ಹೀಗೆ ಪ್ರತಿಯೊಬ್ಬನಿಗೂ ಅವಶ್ಯಕವಾದ ಬಟ್ಟೆಯ ಮೇಲೆ ಟ್ಯಾಕ್ಸು ಹಾಕುವುದಕ್ಕೆ ಹೋಗಿದ್ದಾರೆ. ಮಹಾತ್ಮ ಗಾಂಧಿಯವರು ಉಪ್ಪಿನ ಸತ್ಯಾಗ್ರಹ ಮಾಡಿ ಉಪ್ಪಿನ ಮೇಲಿನ ತೆರಿಗೆಯನ್ನು ತೆಗೆಯಬೇಕು ಎಂದು ಹೇಳುತ್ತಿದ್ದರು. ಸರ್ವೇಸಾಧಾರಣವಾಗಿ ಮನುಷ್ಯನು ಉಪಯೋಗಿಸುವ ಬಟ್ಟೆ ಇತ್ಯಾದಿ ವಸ್ತುಗಳ ಮೇಲೆ ತೆರಿಗೆಯನ್ನು ಹಾಕಕೂಡದು ಎಂದೂ ಹೇಳಿದ್ದಾರೆ. ಉಪ್ಪಿಲ್ಲದೆ ಉಪ್ಪರಿಗೆಯ ಮನುಷ್ಯನೂ ಬದುಕಲಾರ. ಇನ್ನು ಉಪ್ಪಿನ ಮೇಲೆ ತೆರಿಗೆಯನ್ನು ಹಾಕಿದರೆ ಮುಗಿದು ಹೋಯಿತು, ಏನೂ ಹೇಳಲಿಕ್ಕಾಗಿಯೇ ಇಲ್ಲ. 1948 ನೆಯ ಇಸ್ವಿಯಲ್ಲಿ ಡಿಲ್ಲಿಯಲ್ಲಿ ಬಡವರ ಗುಡಿಸಿಲಿನ ಹತ್ತಿರ ಮಹಾತ್ಮ ಗಾಂಧಿಯವರು ಮಾತನಾಡುತ್ತಾ ಹೆಣ್ಣುಮಕ್ಕಳಿಬ್ಬರಿಗೆ, ಸ್ವಾತಂತ್ರ್ಯವೆಂಬ ದೊಡ್ಡ ಭವನವನ್ನು ಕಟ್ಟಿದ್ದೇವೆ ಆದರೆ ಅದರಿಂದ ಎಲ್ಲರಿಗೂ ಉಪಯೋಗವಾಗದಿದ್ದರೆ ದೇವರಿಲ್ಲದ ಗುಡಿ ಭಾವವಿಲ್ಲದ ಭಕುತಿ, ಕುಹಕ ಯುಕುತಿ ಎಂಬ ರೀತಿ ಆಗುತ್ತದೆ ಎಂದು ಹೇಳಿದ್ದಾರೆ. ನಮಗೆ ಈಗ ಸ್ವಾತಂತ್ರ್ಯ ಮಾತ್ರ ಬಂದಿದೆ. ಸ್ವರಾಜ್ಯ ಇನ್ನೂ ಬಂದಿಲ್ಲ. ಸ್ವರಾಜ್ಯ ಬಂದಿದ್ದರೆ ಎಲ್ಲರಿಗೂ ಅನುಕೂಲವಾಗುವ ರಾಜ್ಯವನ್ನು ಸ್ಥಾಪನೆ ಮಾಡುತ್ತಿದ್ದೇವೆ. ನಾಲ್ಕಾರು ಪಾರ್ಟಿ ಜನಗಳಿಗೆ ಮತ್ತು ಅವರ ಸಂಬಂಧಿಗಳಿಗೆ ರಾಜ್ಯಭಾರ ಆಗಿ ಹೋಯಿತು. Democracy is really of the people, by the people, for the people, ಪ್ರಜಾಪ್ರಭುತ್ವ ಜನರಿಗಾಗಿರುವುದು. ಆದ್ದರಿಂದ ಜನರಿಗೆ ಪ್ರಜಾಪ್ರಭುತ್ವದಿಂದ ಉಪಕಾರವಾಗಬೇಕು. ಇವತ್ತಿನ ದಿವಸ ಸರ್ಕಾರ ಜನರಿಂದ ಚುನಾಯಿತವಾಗಿರಬಹುದು. ಇದನ್ನು ಆಲೋಚನೆ ಮಾಡಿ. ಇನ್ನು ಹೆಚ್ಚಿಗೆ ಹೇಳುವ ಇಷ್ಟವಿಲ್ಲ. ಇದು ಒಂದು ದೊಡ್ಡ ಪರಿಸ್ಥಿತಿ. ಸ್ಯಾನಿಟರಿ ಫಿಟ್ಟಿಂಗ್ಸ್ ಇದರಿಂದ ತೆಗೆದು ಹಾಕಬೇಕು. ಸ್ಯಾನಿಟರಿ ಫಿಟ್ಟಿಂಗ್ಸ್‌ನಿಂದ 15 ರೂಪಾಯಿ ಬರುತ್ತದೆ.

ಶ್ರೀ ಟಿ.ಮರಿಯಪ್ಪ:- ವಿಧಾನಸೌಧಕ್ಕೆ ಹಾಕುವ ಸ್ಯಾನಿಟರಿ ಫಿಟ್ಟಿಂಗ್ಸ್ ಬಿಟ್ಟು ಬಿಡಬೇಕೇ?

ಶ್ರೀ ಕೆ.ಕೆಂಚಪ್ಪ:- ಸಕ್ಕರೆಯನ್ನು ಬಿಟ್ಟುಬಿಡಬೇಕು. ಇನ್ನು ಎಸೆನ್‌ಷಿಯಲ್ ಆರ್ಟಿಕಲ್ಸ್ ಬಹಳ ಇವೆ. ವನಸ್ಪತಿ, ಕೆರೋಸಿನ್ ಆಯಿಲ್ ಇದೆ. ಇದು ಏನು ಆಡಳಿತ? ನಶ್ಯದಮಡಿ ಟೊಬ್ಯಾಕೋ ಎಲೆ ಎಲ್ಲದರ ಮೇಲೂ ಒಂದು ಕಡೆಯಿಂದ ತೆರಿಗೆ ಹಾಕುತ್ತಾ ಹೋಗಿದ್ದಾರೆ. ಬೀಡಿ ಎಲೆಯನ್ನು ಬಿಟ್ಟಿಲ್ಲ. ಯಾವ ಮಟ್ಟಕ್ಕೆ ಹೋಗಿದ್ದಾರೆಂದು ಉದ್ದೇಶಪೂರ್ವಕವಾಗಿ ಹೇಳುತ್ತಿದ್ದೇನೆ. ನಾನು ಇದರ ಮೇಲೆ ಡಿಸ್ಸೆಂಟಿಂಗ್ ನೋಟ್

ಕೊಟ್ಟಿದ್ದೇನೆ. ತೆರಿಗೆಯನ್ನು ಕೊಡತಕ್ಕ ಶಕ್ತಿಯುಳ್ಳವರು ಬಳಸತಕ್ಕ ಮಾಲಿನ ಮೇಲೆ ತೆರಿಗೆ ಹಾಕಬೇಕು. ಮಹಾ ಜನಗಳ ಮೇಲೆ ತೆರಿಗೆ ಹೊರೆ ಬೀಳದೆ ಇರುವ ಹಾಗೆ ಯಾವ ಯಾವ ಆರ್ಟಿಕಲ್ಸ್ ಮೇಲೆ ಹಾಕಬೇಕು ಎಂಬುದನ್ನು ನೋಡಬೇಕು. ತೆರಿಗೆ ಕೊಡುವ ಶಕ್ತಿಯುಳ್ಳವರ ಮೇಲೆ ತೆರಿಗೆ ಭಾರ ಬೀಳುವಂತಿರಬೇಕು ಎಂದು ನನ್ನ ಅಭಿಪ್ರಾಯ. ನೀವು ಒಂದು ಕಾರು ಕೊಂಡುಕೊಳ್ಳುತ್ತೀರಿ, ಅದಕ್ಕೆ ನೀವು ತೆರಿಗೆ ಕೊಟ್ಟಿದ್ದೀರಿ. ಮರಮಟ್ಟು ಬಡವರಿಗೆ ಬೇಕು ಅದರ ಮೇಲೆ ತೆರಿಗೆ. ಕಾಟನ್ ಸೀಡ್ಸ್‌ಗೆ ತೆರಿಗೆ ಹಾಕಿದ್ದೀರಿ. ನಮ್ಮ ಕಡೆ ಎತ್ತುಗಳಿಗೆ ಹತ್ತಿಬೀಜ ಹಾಕದೆ ಹೋದರೆ ಅವು ಬದುಕುವುದೇ ಇಲ್ಲ. ವ್ಯವಸಾಯಕ್ಕೆ ಒಕ್ಕಲಿಗನಿಗೆ ಬೇಕಾದ ಸಾಮಾನುಗಳು ಎಂದರೆ ಬೋನ್ ಮೀಲ್, ಆಯಿಲ್‌ಕೇಕ್ ಇವುಗಳ ಮೇಲಯೂ ತೆರಿಗೆ ಎಂದರೆ ಹೇಗೆ? ಈಗ ಜಮೀನು ಹೋಯಿತು, ಗೋಮಾಳ ಹೋಯಿತು, ದನ ಮೇಯುವುದಕ್ಕೆ ಅವಕಾಶವೇ ಇಲ್ಲದಂತಾಗಿದೆ. ಗ್ರೀನ್‌ಮ್ಯಾನ್ಯೂರ್, ಹೊಂಗೆ ಮರ ಇವಕ್ಕೆ ಹತ್ತು ಎಕರೆ ಮಿನಿಮಮ್ ಮಾಡುತ್ತಿದ್ದಾರೆ. ಆದರೆ ಮಿನಿಮಮ್ ಹೋಲ್ಡಿಂಗ್ ಇವತ್ತಿನವರೆಗೂ ಸೆಟಲ್ ಮಾಡಿಲ್ಲ. ಆ ಗ್ರೀನ್ ಮ್ಯಾನ್ಯೂರಿಗೆ ಅವಕಾಶವೇ ಇಲ್ಲ. ಘಂಟೆಗೊಂದು ಟ್ಯಾಕ್ಸ್ ಬರುತ್ತದೆ. ಇದರಿಂದ ಒಕ್ಕಲಿಗ ಬದುಕುತ್ತಾನೆಯೇ? ಅದನ್ನು ಯೋಚನೆ ಮಾಡಬೇಕು. ಚಿಲ್ಲೀಸ್, ಟೊಬ್ಯಾಕೋ, ಸಿಲ್ಕ್‌ಬಟ್ಟೆ ಬೀಟಲ್ ಲೀವ್ಸ್ ಸಿಲ್ಕ್ ಗೂಡ್ಸಿಗೂ ಟ್ಯಾಕ್ಸ್ ಆಗಿದೆ. ಟೊಬ್ಯಾಕೋ ಕಂಪೆನಿ ಅಭಿವೃದ್ಧಿ ಮಾಡುತ್ತಿದ್ದೀರಿ. ಏಕೆಂದರೆ ನೀವು ಷೇರ್ ತೆಗೆದುಕೊಂಡಿದ್ದೀರಿ. ಒಕ್ಕಲಿಗ ತಂಬಾಕನ್ನು ಬೆಳೆದು ಅದರಿಂದ ಬಂದ ವರಮಾನದಿಂದ ತಾವು ಜೀವಿಸಬೇಕು. ಖಚಿತಿ ಟೊಬ್ಯಾಕೋಗೆ ಒಂದು ಟ್ಯಾಕ್ಸು, ಕ್ಯೂರ್ ಆದಮೇಲೆ ಒಂದು ಟ್ಯಾಕ್ಸು, ಸಿಗರೇಟ್ ಮೇಲೆ ಮತ್ತೊಂದು ಟ್ಯಾಕ್ಸು–ನಿಜವಾಗಿಯೂ ದೇಶದ ಅಭಿವೃದ್ಧಿಗೋಸ್ಕರ ಮಾಡುವುದಿಲ್ಲ. ಬೀಡಿ ಸಿಗರೇಟ್ ಯಾರು ಉಪಯೋಗಿಸುತ್ತಾರೆ? What is meant by luxury?ಇದನ್ನು ಆಲೋಚನೆ ಮಾಡಬೇಕು. ಈಗ ಬೀಡಿ ನೆಸೆಸಿಟಿಯಾಗಿದೆ. ಯಾವ ಯಾವ ಮನುಷ್ಯನಿಗೆ ಯಾವ ಯಾವುದು ನೆಸೆಸಿಟಿಯಾಗುತ್ತದೆ ಯಾವುದು ಲಕ್ಸುರಿ ಎಂಬುದನ್ನು ನೋಡಬೇಕು. ಚಟ ಇದ್ದರೆ ಬೀಡಿ ಕುಡಿಯುವುದನ್ನು ಬಿಡುತ್ತಾನೆಯೇ? ಏನಾದರೂ ಮಾಡಿ ಹೆಂಡತಿ ಮಕ್ಕಳಿಗೆ ಅನ್ನವಿಲ್ಲದಿದ್ದರೂ ಅಷ್ಟೇ ಹೋಯಿತು ಎಂದು ಬೀಡಿ ತಂದು ಕುಡಿದೆ ಕುಡಿಯುತ್ತಾನೆ. ಆದ್ದರಿಂದ ತಾವು ಈ ತೆರಿಗೆ ಹಾಕುವಾಗ ತಮ್ಮ ದೃಷ್ಟಿ ಸರಿಯಾಗಿರಲಿ. ನನ್ನ ಡಿಸೆಂಟಿಂಗ್ ನೋಟಿನಲ್ಲಿ 'what is meant by necessity what is luxury' ಎಂದು ಬರೆದಿದ್ದೇನೆ. ಹಣವಿಲ್ಲದವನು ನರಿ ನಾಯಿ ಪಾಲಾದವನು ಎನ್ನುವ ಹಾಗೆ ಆಗಿದೆ. ಒಂದು ವಿಚಾರ. ಚೌಎನ್‌ಲೈ ಒಂದು ಪದ್ಯವನ್ನು ಈ ರೀತಿ ಬರೆದಿದ್ದಾರೆ. "Each man looks to himself, let the detail take care of itself. Many people find pleasure in money but I find my pleasure in perfecting my grace." ನನ್ನ ನೀತಿ ಮಟ್ಟ, ನನ್ನ ಧರ್ಮ ಯಾವ ರೀತಿಯಾಗಿರಬೇಕು ಎಂದರೆ ಅದು

ದೇಶಕ್ಕೆ ಒಂದು ಮಾದರಿಯಾಗಿರಬೇಕು. ಆ ದೃಷ್ಟಿ ಒಳ್ಳೆಯದು. ಹೀಗಿರುವುದು ಸಮಾಜದಲ್ಲಿ ವಿರಳ. 1948ನೆಯ ಇಸವಿಯಲ್ಲಿ ನಮ್ಮದು ಮಾದರಿ ಸಂಸ್ಥಾನವಾಗಿತ್ತು. ಈಗ ಏನೋ ಒಂದು ನಮೂನೆಯಾಗಿದೆ. ಸುತ್ತಮುತ್ತ ಪ್ರಾಂತ್ಯದಲ್ಲಿ ಯಾವ ರೀತಿ ಬಾಳುತ್ತಿದ್ದಾರೆ ನಮ್ಮ ವ್ಯವಹಾರ ಹೇಗಿದೆ ಎಂಬುದನ್ನು ಎಲ್ಲರೂ ನೋಡುತ್ತಿದ್ದೇವೆ. ಅದರಲ್ಲೂ ಬರೀ ಮೈಸೂರಿನವರೇ ಅಲ್ಲ, ಬೊಂಬಾಯಿ ಹೈದ್ರಾಬಾದ್, ಮದ್ರಾಸ್, ಆಂಧ್ರ ಪ್ರಾಂತ್ಯದವರೂ ಇದ್ದಾರೆ. ಅವರು ಹಿಂದೆ ಇದ್ದುದನ್ನು ಆಲೋಚನೆ ಮಾಡುತ್ತಿದ್ದಾರೆ. ಇನ್ನಾದರೂ ಒಂದು ಸಂಪ್ರದಾಯವನ್ನು ನಾವು ಸ್ಥಾಪನೆ ಮಾಡಬಾರದೇ?

ಆದುದರಿಂದ ನೀವು ಈಗ ಹಿಂದುಳಿದ ನಮ್ಮ ಬಡಜನಗಳ ಹಿತವನ್ನು ಕಾಪಾಡಲು ಎಲ್ಲರಿಗೂ ಮಾದರಿಯಾದ ರೀತಿಯಲ್ಲಿ ಸರ್ಕಾರದ ರಾಜ್ಯಭಾರವನ್ನು ನಡೆಸಿಕೊಂಡು ಹೋಗಬೇಕು. ಹಾಗೆ ನೀವು ನಡೆಸಿಕೊಂಡು ಹೋಗುವುದಕ್ಕಾಗುತ್ತಿಲ್ಲ. ಈ ದೃಷ್ಟಿಯಿಂದ ಬಡತನದಿಂದ ನರಳುತ್ತಿರುವ ನೌಕರರು, ಮತ್ತು ಇತರ ಜನಗಳ ಹಿತವನ್ನು ರಕ್ಷಿಸಲು ಎಲ್ಲಿಯವರೆಗೆ ಸರ್ಕಾರಕ್ಕೆ ಸಾಧ್ಯವಿಲ್ಲವೋ ಅಲ್ಲಿಯವರೆಗೆ ನೀವು ಹೇಳುತ್ತಿರುವಂತಹ ಸಮಾಜ ರಚನೆಯಾಗುವುದಿಲ್ಲ. ಇದನ್ನೆಲ್ಲ ಸರ್ಕಾರ ಆಲೋಚಿಸಬೇಕು. ಈ ಬಿಲ್ಲಿನಲ್ಲಿ ತಾವು 7,500 ರೂಪಾಯಿಗಳೆಂದು ಕನಿಷ್ಠವಾದ Turnover ಇಟ್ಟುಕೊಂಡಿದ್ದೀರಿ. ಸಂತೋಷ. ಆದರೆ ಶೇಕಡಾ ಎರಡರಷ್ಟು ಹಾಕಬೇಕೆಂದು ಮಾಡಿದ್ದೀರಿ. ಮೊದಲು ಇದ್ದಂತೆ ಮಾಡಿದ್ದರೆ ಎಷ್ಟೋ ಉತ್ತಮವಾಗಿತ್ತು. Essential commodities ಎಲ್ಲವನ್ನೂ ಬಿಟ್ಟಿದ್ದೇವೆಂದು ಮೊದಲು ಹೇಳಿ, ಆಮೇಲೆ ಈ ಬಿಲ್ಲಿನಲ್ಲಿ ಅವುಗಳನ್ನು ಇನ್ನೊಂದು ಕಡೆ ಸೇರಿಸಿರುವುದನ್ನು ನೋಡಿದರೆ ಮತ್ತು ನಿಮ್ಮ ತತ್ವಕ್ಕೇ ಊನ ಬಂದ ಹಾಗಾಯಿತು. ನಿಮ್ಮ ದೃಷ್ಟಿಕೋನ ಸರಿಯಲ್ಲ. ಯಾರೋ ಒಬ್ಬರು ಟ್ಯಾಕ್ಸೇಷನ್ ಕಮಿಟಿಯವರು, ಅವರು ಇವರು ಹೇಳದ್ದೇ ನಿಮಗೆ ವೇದವಾಕ್ಯವಾಗಿದೆ.

ಶ್ರೀ ಟಿ.ಮರಿಯಪ್ಪ:– ಅವರು ಅರ್ಥಶಾಸ್ತ್ರ ನಿಪುಣರು.

ಶ್ರೀ ಕೆ.ಕೆಂಚಪ್ಪ:– ತಾವು ಇತ್ತೀಚೆಗೆ ತಿಳಿದಿದ್ದೀರಿ. ನಮ್ಮ ಭಾರತದಲ್ಲಿ ಅಂತಹ ಮಹಾಜನರು ಎಷ್ಟಿದ್ದರು, ಎಷ್ಟು ಋಷಿಗಳಿದ್ದರು, ಎಷ್ಟು ಜನ ಇತರರಿದ್ದರು, ಎಂಬುದು ನಿಮಗೆ ಗೊತ್ತಿದೆ. ಪ್ರತಿಯೊಬ್ಬರೂ ಅರ್ಥಶಾಸ್ತ್ರ ನಿಪುಣರಾಗಿದ್ದರು. ಈಗ 48ನೇ ಇಸವಿಯಿಂದೀಚೆಗೆ ಇದನ್ನೆಲ್ಲಾ ನೀವು ತಿಳಿದುಕೊಂಡಿದ್ದೀರಿ. ಸ್ವಾಮೀ, ನಾನು ಇನ್ನೇನೂ ಹೆಚ್ಚಾಗಿ ಹೇಳಲಾರೆ. ನೀವು ಅವರಿವರ ದೃಷ್ಟಿಯಿಂದ ನೋಡುತ್ತಿದ್ದೀರಿ. ಈಗ ನ್ಯಾಯ ಎನ್ನುವುದು ಹೇಗಿದೆ ಎಂದರೆ ಅವರವರ ಮೂಗಿನ ಮೇಲಿರುವುದೇ ನ್ಯಾಯವಾಗಿದೆ.

ಶ್ರೀ ಟಿ.ಮರಿಯಪ್ಪ:– ವಾಕ್ಯಾರ್ಥವೂ ಹಾಗೆಯೇ?

ಶ್ರೀ ಕೆ.ಕೆಂಚಪ್ಪ:- ವಾಕ್ಯಾರ್ಥ, ಪದಗಳ ಸರಣಿಯ ವಿಚಕ್ಷಣೆ ಏನು ಎಂದು ಹೇಳುವಂತಿಲ್ಲ. ಇದೆಲ್ಲ ಕಾನೂನು ಮಾಡುವುದರಲ್ಲಿಯೇ ಕಂಡು ಬಂದಿದೆ. ಅದರಲ್ಲಿ ಉಪಯೋಗಿಸಿರತಕ್ಕ ಪದ, ಬಳಸಿರತಕ್ಕ ವಾಕ್ಯ ಮತ್ತು ಅದರಲ್ಲಿರುವ ಪದ, ಬಳಸಿರತಕ್ಕ ವಾಕ್ಯ ಮತ್ತು ಅದರಲ್ಲಿರುವ ಕ್ರಿಯಾಪದ ಇವೆಲ್ಲವನ್ನೂ ನೋಡಿದರೆ ಅವೆಲ್ಲವೂ ಅರ್ಥಶಾಸ್ತ್ರದಿಂದ ತುಂಬಿದೆ. ಅದನ್ನು ಹೆಚ್ಚಿಗೆ ಬಿಡಿಸಿ ಹೇಳುವುದು ಬೇಡ. ಸದ್ಯಕ್ಕೆ ಇಷ್ಟು ಹೇಳಿದರೆ ಸಾಕು. ಈಗಾಗಲೇ ಕಾನೂನು ಮಾಡಿ ಮೂರು ಕಾಸಿನ ಕಾರ್ಡು ಕೊಳ್ಳುತ್ತಿದ್ದ ಜನಕ್ಕೆ ಒಂಭತ್ತು ಕಾಸಿನಂತೆ ಈವತ್ತು ಕೊಳ್ಳಬೇಕಾದ ಪರಿಸ್ಥಿತಿ ಬಂದಿದೆ. ಹೀಗೆ ತೆರಿಗೆಗಳನ್ನು ಕೊಡುತ್ತಾ ಬರುತ್ತಿರುವುದು ಎಲ್ಲರಿಗೂ ತಿಳಿದೇ ಇದೆ. ಯಾರು ಯಾರು ಗಲಾಟೆ ಮಾಡಲು ಶಕ್ತಿಯಿರುವುದೋ ಅಂಥವರಿಗೆ ತೆರಿಗೆಗಳನ್ನು ಕಡಿಮೆ ಮಾಡುವ ನೀತಿ ನಿಮ್ಮಲ್ಲಿ ಎದ್ದು ಕಾಣುತ್ತಿದೆ. ಈಗ Excise Department ನ್ನು ತೆಗೆದುಕೊಂಡರೆ ಅಡಕೆ ಮೇಲೆ ತೆರಿಗೆ ಬಿಟ್ಟು ತಂಬಾಕಿನ ಮೇಲೆ ಹಾಕಿದ್ದೀರಿ. ಹೀಗೇಕೆ ಆಗಿದೆ ಎಂದರೆ ಅಡಿಕೆ ಮಾರಾಟ ಮಾಡುವವರು ದೊಡ್ಡ ದೊಡ್ಡ ವರ್ತಕರುಗಳಾಗಿರುವುದರಿಂದ ಅವರು ಸರ್ಕಾರದ ಬಳಿ ಬಂದು ಒತ್ತಾಯ ಮಾಡಿದುದರಿಂದ ಅವರಿಗೆ ವಿನಾಯಿತಿ ದೊರಕಿದೆ. ಆದರೆ ಈ ತಂಬಾಕನ್ನು ಉಪಯೋಗಿಸುವವರು ಬಹುವಾಗಿ ಬಡವರಾದುದರಿಂದ ಅವರು ಸರ್ಕಾರದವರ ಬಳಿ ಬಂದು ಒತ್ತಾಯ ಮಾಡುವಷ್ಟು ಶಕ್ತಿಯಿರಲಿಲ್ಲ. ಆದಕ್ಕೋಸ್ಕರ ಅವರನ್ನು ಉಪೇಕ್ಷಿಸಿ ತೆರಿಗೆ ಹಾಕಿದ್ದೀರಿ. ಇದರಿಂದ ನಿಮ್ಮ ಈ ಎಕ್ಸೈಜು ಡಿಪಾರ್ಟುಮೆಂಟನ್ನು ತೆಗೆದುಬಿಟ್ಟರೆ ಉತ್ತಮ, ನಿಮ್ಮ ದೃಷ್ಟಿಯಲ್ಲಿ ಧರ್ಮ ಎನ್ನುವುದು ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿ ಹೋಗಿದೆ. ಬಹಳ ಹೆಚ್ಚಾಗಿ ಹೇಳಲಾರೆ. ಆದುದರಿಂದ ತಾವು ಎಲ್ಲವನ್ನು ತುಂಬಾ ಆಲೋಚನೆ ಮಾಡಿ ನೋಡಿ ಮಾಡಬೇಕು. ಯಾವುದಾದರೂ income tax progressive scale ನಲ್ಲಿ ಹಾಕುವುದನ್ನು ಬಿಟ್ಟು ಈ ರೀತಿಯಾಗಿ ಹಾಕುವುದು ಸರಿಯಲ್ಲ.

ಶ್ರೀ ಟಿ.ಮರಿಯಪ್ಪ:- ನಮಗೆ income- tax ಹಾಕುವುದಕ್ಕೆ ಅಧಿಕಾರವಿಲ್ಲ.

ಶ್ರೀ ಕೆ.ಕೆಂಚಪ್ಪ:- Agricultural Income Tax ಹಾಕಿ. Land Revenue ನಲ್ಲಿ Minimum Holdings ಕಡಿಮೆ ಮಾಡಲು ಅವಕಾಶವಿದೆ, ಬೇಕಾದಷ್ಟು ಅವಕಾಶವಿದೆ. ಇಲ್ಲವೆಂದು ಹೇಳುತ್ತಿದ್ದರೆ ಪ್ರಯೋಜನವಿಲ್ಲ. ಆದುದರಿಂದ ನಾನು ಹೆಚ್ಚಾಗಿ ಹೇಳುವುದಿಲ್ಲ. ಈ ವಿಚಾರದಲ್ಲಿ ಮಾನ್ಯ ಸದಸ್ಯರು ಹೇಳಿದುದನ್ನೆಲ್ಲಾ ಚೆನ್ನಾಗಿ ಕೂಲಂಕಷವಾಗಿ ಯೋಚನೆ ಮಾಡಿ ಎಸೆನ್‌ಷಿಯಲ್ ಆರ್ಟಿಕಲ್ಸ್‌ಗೆ ಏಳೂವರೆ ಸಾವಿರ ರೂಪಾಯಿಗಳ ಮಿನಿಮಂ ಲಿಮಿಟ್ ಇಟ್ಟುಕೊಂಡು ಬಾಕಿ pleasure articles ಗಳ ಬಗ್ಗೆ ಹೆಚ್ಚಿಗೆ ತೆರಿಗೆಯನ್ನು ಹಾಕಿದರೆ ಬೇಡ ಎನ್ನುವುದಿಲ್ಲ.

* * * * *

# ಖರ್ಚು ಮತ್ತು ನೇಮನೀತಿ ತಿಳಿಯದ ಮಂತ್ರಿಗಳು

**31 ಮಾರ್ಚ್ 1959**

ಶ್ರೀ ಕೆ.ಕೆಂಚಪ್ಪ(ಹಿರಿಯೂರು):- ಮಾನ್ಯ ಅಧ್ಯಕ್ಷರೇ, ಈಗ ಅನೇಕ ಬಾಬುಗಳ ವಿಚಾರದಲ್ಲಿ ಕೊಡಬೇಕಾದ ದುಡ್ಡನ್ನು ಕೊಟ್ಟುಬಿಟ್ಟಿದ್ದಾಗಿದೆ. ಪ್ರತಿಯೊಂದು ಬಾಬಿನಲ್ಲಿಯೂ ಸಹ ಉಪಕಲಮುಗಳೊಳಗೆ ಎಷ್ಟೆಷ್ಟು ದುಡ್ಡುಗಳು ಬೇಕು, ಎಷ್ಟೆಷ್ಟು ಹಣ ಬೇಕೆನ್ನುವುದನ್ನೂ ಸಹ ನಾವು ಕೊಟ್ಟುಬಿಟ್ಟಿದ್ದೇವೆ. ಈಗ ನಮಗೆ ಬೇಕಾಗಿರತಕ್ಕಂಥದ್ದು ಕೊಟ್ಟಂಥ ಹಣವನ್ನು ಕನ್‌ಸಾಲಿಡೇಟೆಡ್ ಫಂಡಿನಿಂದ ವಾಪಸ್ಸು ತೆಗೆದುಕೊಂಡು ಆಯಾ ಹೆಡ್ಡಿನಲ್ಲಿ ಖರ್ಚು ಮಾಡತಕ್ಕಂಥ ವಿಧಾನದಲ್ಲಿ ನಮ್ಮ ಅಪ್ಪಣೆಯನ್ನು ಕೊಟ್ಟಿಲ್ಲವೆಂದು ಈ ಅಂಶವನ್ನು ತಂದಿದ್ದೀರಿ. ಅಂದಮೇಲೆ ಈ ನಿಮ್ಮ ಬೇಡಿಕೆಗಳಿಗೆ ನಾವು ಅನುಮತಿ ಕೊಡಬೇಕೇ ಬೇಡವೇ ಎನ್ನತಕ್ಕಂಥ ವಿಚಾರವನ್ನೂ ಮಾಡಬೇಕಾಗಿದೆ.

ಶ್ರೀ ಟಿ.ಮರಿಯಪ್ಪ:- ಅನುಮತಿ ಕೊಟ್ಟುಬಿಟ್ಟಿದ್ದೀರಿ. ಇದು ಬರೀ ಫಾರ್ಮಲ್.

ಶ್ರೀ ಕೆ.ಕೆಂಚಪ್ಪ:- ಅನುಮತಿ ಕೊಟ್ಟಿದ್ದೇವೆ. ಆಯಾ ಹೆಡ್ಡಿಗೆ ಕನ್ಸಾಲಿಡೇಟೆಡ್ ಫಂಡಿನಿಂದ ಹಣವನ್ನು ತೆಗೆದುಕೊಂಡು ಬಂದು ಇಂಥಿಂಥ ಹೆಡ್ಡಿನಲ್ಲಿರತಕ್ಕಂಥ ಉಪಕಲಮುಗಳಿಗೆ ವಾಪಸು ಕೊಡಿ ಎಂದರೆ ಅಪ್ರೊಪ್ರಿಯೇಟ್ ಪರ್ಟಿಕ್ಯುಲರ್ ಹೆಡ್ಸ್ ಎಂದು ಕೇಳುತ್ತಿದ್ದೀರಿ.

ಪ್ರಶ್ನೆಯನ್ನು ಬಿಡಿಸುವಾಗ, ಮುಖ್ಯವಾಗಿ ನಮ್ಮ ಹಿನ್ನೆಲೆಯನ್ನು ನೋಡುತ್ತಾ ಹೋದರೆ, ತಪ್ಪು ಗೊತ್ತಾಗುತ್ತದೆ. ಈ ವಿಚಾರದಲ್ಲಿ ಹಿಂದೆ ಹಣವನ್ನು ವಿನಿಯೋಗಿಸುವಾಗ ನಮ್ಮ ಸರ್ಕಾರದವರು ಯಾವರೀತಿ ನಡೆದುಕೊಂಡಿದ್ದಾರೋ. ಆ ರೀತಿ ನಡೆದುಕೊಂಡು ಬಂದ ಭಾಗದಲ್ಲಿ ನಾವು ಇವರಿಗೆ ಅನುಮತಿ ಕೊಡೋಣವೇ ಬೇಡವೇ ಎನ್ನತಕ್ಕಂಥ ವಿಚಾರವನ್ನೂ ಆಲೋಚನೆ ಮಾಡುತ್ತೇವೆ. ಈ ಖರ್ಚಿನ ಬಾಬಿನಕಲ್ಲಿ ಹತೋಟಿ ಇಟ್ಟುಕೊಳ್ಳಲು, ಹೆಚ್ಚು ಕಡಮೆ, ಸುಮಾರು 50 ವರ್ಷದ ಪ್ರಜಾಪ್ರಭುತ್ವದಲ್ಲಿ, ಅಸೆಂಬ್ಲಿಯ ತಲೆ ಬೆಳ್ಳಗಾಗಿದೆ. ಈ ಭಾವನೆಗೋಸ್ಕರ ಜನರು ಪರದಾಡುತ್ತಾರೆ. ಅಸೆಂಬ್ಲಿ ಕೊಟ್ಟಿರತಕ್ಕಂಥ ದುಡ್ಡನ್ನು ಯಾವ ರೀತಿ ಖರ್ಚುಮಾಡುತ್ತೀರಿ ಎನ್ನುವಾಗ ಕೆಲವಾರು ಲೋಪದೋಷಗಳು ಬರುವ ಸಂಭವವಿದೆ.

ಏತಕ್ಕೆಂದರೆ ಈಗ ಕೆಲವು ಸದಸ್ಯರು ಮಂತ್ರಿಗಳಾಗಿ ಮಂತ್ರಿ ಮಂಡಲಕ್ಕೆ ಬಂದಿದ್ದಾರೆ. ಅವರಿಗೆ ಅವರ ಕೊನೆಯ ಕಾಲದಲ್ಲಿ ಎಂದರೆ ಏನಾದರೂ ಗಡಿಬಿಡಿ ಬಂದು ಮಂತ್ರಿಮಂಡಲ ಬಿಡತಕ್ಕ ಕಾಲ ಬಂದಾಗ ತಮ್ಮ ತಮ್ಮ ಕ್ಷೇತ್ರಗಳಲ್ಲಾಗಬೇಕಾದ ಕೆಲಸಗಳೇನಿರುತ್ತವೆ ಅವುಗಳಿಗಾಗಿ ದುಡ್ಡನ್ನು ಈ ರೀತಿಯಲ್ಲಿ ಉಳಿಸಿಕೊಳ್ಳುತ್ತಿದ್ದಾರೋ ಹೊರತು. ದೇಶಕ್ಕಾಗೇನೂ ಅವರು ಈ ದುಡ್ಡನ್ನು ಉಳಿತಾಯ ಮಾಡುತ್ತಿಲ್ಲ. ಈ ಬಗ್ಗೆ ನನಗೊಂದು ವಿಚಾರ ಈಗ ಜ್ಞಾಪಕಕ್ಕೆ ಬರುತ್ತಿದೆ. ಹಿಂದೆ ಒಮ್ಮೆ ಈ ಮಂತ್ರಿಗಳು ಸಪ್ಲಿಮೆಂಟರಿ ಗ್ರಾಂಟನ್ನು ಈ ಸಭೆಯಮುಂದೆ ತಂದು ಅದರ ಬಗ್ಗೆ ನಮ್ಮ ಅನುಮತಿಯನ್ನು ಕೇಳುತ್ತಿದ್ದಾಗ ಆ ಹಣವನ್ನು ಮಂತ್ರಿಗಳು ಯಾವ ಯಾವ ಸೌಕರ್ಯಗಳಿಗೋಸ್ಕರ

ಎಷ್ಟೆಷ್ಟರ ಮಟ್ಟಿಗೆ ಖರ್ಚು ಮಾಡಲು ಪ್ರಯತ್ನ ಮಾಡಿದ್ದಾರೆಂದು ಕೇಳಿದ್ದೆ. ಆ ವೇಳೆಯಲ್ಲಿ ನಾನು ಏನು ಹೇಳಿದ್ದೇನೆಂದರೆ ಒಂದಾವರ್ತಿ ಈ ಅಸೆಂಬ್ಲಿಯ ಸದಸ್ಯರು ಯಾವ ಯಾವ ಬಾಬಿಗೆ ಎಷ್ಟೆಷ್ಟು ಹಣವನ್ನು ಖರ್ಚು ಮಾಡಲು ಒಪ್ಪಿಗೆಯನ್ನು ಕೊಟ್ಟಿರುತ್ತಾರೋ ಅಷ್ಟಷ್ಟನ್ನು ಮಾತ್ರವೇ ಆಯಾಯ ಬಾಬುಗಳಿಗೆಲ್ಲ ಮಂತ್ರಿಗಳು ಖರ್ಚು ಮಾಡಲು ಅವಕಾಶವಿದೆಯೇ ಹೊರತು ಅದಕ್ಕೆ ಮಂತ್ರಿಗಳು ತದ್ವಿರುದ್ಧವಾಗಿ ಹೋಗಿ ಹೆಚ್ಚಾಗಲಿ ಕಡಮೆಯಾಗಲಿ ಖರ್ಚು ಮಾಡುವುದಕ್ಕೆ ಅವರಿಗೆ ಅವಕಾಶವೇ ಇಲ್ಲ ಎಂದು ಹೇಳಿದ್ದೇನೆ. ಆದರೆ ಮಂತ್ರಿಮಂಡಲಕ್ಕೆ ದೇಶಾಭ್ಯುದಯದ ಬಗ್ಗೆ ಮೀಸಲಾಗಿಟ್ಟಿದ್ದ ಹಣದಲ್ಲಿ ಸಿಬ್ಬಂದಿ ವರ್ಗಕ್ಕೆ ಖರ್ಚು ಮಾಡತಕ್ಕ ಹಣವೇನಿರುತ್ತದೆ ಅದರಲ್ಲಿ ಮಾತ್ರ ಉಳಿತಾಯ ತೋರಿಸಲು ಅವಕಾಶವಿರುತ್ತೆಯೇ ಹೊರತು ಇನ್ನು ಬೇರೆ ಯಾವ ವಿಚಾರದಲ್ಲೂ ಖರ್ಚನ್ನು ಹೆಚ್ಚು ಕಡಮೆ ಮಾಡಲು ಅವಕಾಶವಿಲ್ಲ. ಮಂತ್ರಿಮಂಡಲದ ಮೇಲೆ ಅಂಥ ಒಂದು ಅಧಿಕಾರವನ್ನು ಚಲಾಯಿಸುವುದಕ್ಕೆ ಈ ಅಸೆಂಬ್ಲಿಗೆ ಅಧಿಕಾರವಿದೆ. ಅಂಥ ಒಂದು ಹೆಚ್ಚಿನ ಅಧಿಕಾರವಿದ್ದಾಗ್ಯೂ ಈ ಸಭೆಗೆ ಈ ದಿವಸ ಮಂತ್ರಿಮಂಡಲವನ್ನು ಒಂದು ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತಿಲ್ಲ. ಹಾಗೆ ಈ ಸಭೆಗೆ ಮಂತ್ರಿಮಂಡಲದ ಮೇಲೊಂದು ಹಿಡಿತವಿಲ್ಲದಿರುವಾಗ ನಾವು ಇಂಥ ಹಣಕಾಸಿನ ವಿಚಾರದಲ್ಲಿ ಮಂತ್ರಿಮಂಡಲಕ್ಕೆ ಈ ಒಂದು ಅಧಿಕಾರ ಕೊಡತಕ್ಕ ಬಗ್ಗೆ ನಮ್ಮ ಒಪ್ಪಿಗೆಯನ್ನು ಕೊಡೋಣವೇ ಅಥವಾ ಬೇಡವೇ ಎನ್ನತಕ್ಕ ಈ ಒಂದು ಮೂಲಭೂತ ಸಮಸ್ಯೆ ನನ್ನ ಮನಸ್ಸನ್ನು ಕಲಕುತ್ತಿದೆ. ಆದರೆ ಹಾಗೆ ಉಳಿತಾಯ ಮಾಡತಕ್ಕ ದುಡ್ಡನ್ನು ಮುಂದೆ ಯಾವ ರೀತಿ ಯಾವ ಯಾವ ದೇಶಾಭ್ಯುದಯದ ಕಾರ್ಯಗಳಿಗೆ ಉಪಯೋಗ ಮಾಡಬೇಕು, ಯಾವ ಯಾವ ಸಾಲಿನಲ್ಲಿ ಎಷ್ಟೆಷ್ಟನ್ನು ಖರ್ಚು ಮಾಡಬೇಕು ಎನ್ನುವ ವಿಷಯಗಳನ್ನೆಲ್ಲಾ ನಾವೀಗ ಪರಿಶೀಲನೆ ಮಾಡಬೇಕಾಗಿರುತ್ತದೆ. ಆದರೆ ಈ ಸಭೆಯವರು ಒಂದಾವರ್ತಿ ತಮ್ಮ ಒಪ್ಪಿಗೆಯನ್ನು ಕೊಟ್ಟಮೇಲೆ ಸರ್ಕಾರದವರು ಆಯಾಯ ಬಾಬಿಗೆ. ಅಷ್ಟಷ್ಟೇ ಹಣವನ್ನು ಅವರು ಖರ್ಚು ಮಾಡಬೇಕು. ಅದಕ್ಕೆ ವಿರೋಧವಾಗಿ ಹೆಚ್ಚುದ ಖರ್ಚು ಮಾಡುವುದಾಗಲೀ ಈ ಸಭೆಯ ಒಪ್ಪಿಗೆಯಿರುವುದಿಲ್ಲ. ಈ ಸಭೆಯ ಸದಸ್ಯರು ಎಷ್ಟರಮಟ್ಟಿಗೆ ತಮ್ಮ ಒಂದು ಒಪ್ಪಿಗೆಯನ್ನು ಕೊಟ್ಟಿರುತ್ತಾರೋ ಅಷ್ಟರಮಟ್ಟಿಗೇ ಸರ್ಕಾರ ದುಡ್ಡನ್ನು ಖರ್ಚು ಮಾಡಬೇಕು ಪ್ರತಿ ವರ್ಷವೂ ಈ ಸಭೆಯಲ್ಲಿ ಮಾನ್ಯ ಸದಸ್ಯರು ದೇಶಾದ್ಯಂತವೂ ಗ್ರಾಮಾಂತರಗಳ ಪರಿಸ್ಥಿತಿಯೇನಿದೆ, ಏನೇನು ಅಭ್ಯುದಯ ಕಾರ್ಯಗಳು ಆಗಬೇಕು ಎಂಬುದನ್ನು ತಿಳಿಸುತ್ತಲೇ ಇರುತ್ತಾರೆ. ಆದಾಗ್ಯೂ ಸರ್ಕಾರ ಮತ್ತು ಸರ್ಕಾರದ ಅಧಿಕಾರಿಗಳು ಹೇಗೆ ಈ ಪ್ರಜಾಪ್ರಭುತ್ವಾಡಳಿತದಲ್ಲಿ ಈ ಕೆಲಸಗಳನ್ನೆಲ್ಲ ನಿಧಾನವಾಗುತ್ತಿವೆಯೆಂಬ ವಿಚಾರವನ್ನೂ ಕೂಡ ತಿಳಿಸುತ್ತಲೇ ಇದ್ದಾರೆ. ಹೀಗೆ ಈ ಸಭೆಯವರು ಕೊಡತಕ್ಕ ತೀರ್ಮಾನವನ್ನೇ ಗಮನಿಸದೆ ದೇಶಾಭ್ಯುದಯದ ಕಾರ್ಯಗಳ ಬಗ್ಗೆ ತಾತ್ಸಾರ ಭಾವನೆಯನ್ನು ತೋರಿಸಿ ಹಣ ಉಳಿತಾಯ ಮಾಡುತ್ತಿರುವುದನ್ನು ನೋಡಿದರೆ ನಮಗೆ ತುಂಬ ಭಯ ಉಂಟಾಗುತ್ತಿದೆ. ಈಗ ಹಳ್ಳಿಗಳ ಉದ್ಧಾರ ಕಾರ್ಯದ ಬಗ್ಗೆ ಮೀಸಲಾಗಿಟ್ಟಿದ್ದ ಏಳು ಲಕ್ಷ ಎಂಭತ್ತೊಂಭತ್ತು ಸಾವಿರದ ನೂರೊಂದು ರೂಪಾಯಿಗಳಲ್ಲಿ ನಾಲ್ಕು ಲಕ್ಷ ಅರವತ್ತೊಂಭತ್ತು ಸಾವಿರ ರೂಪಾಯಿಗಳನ್ನು ಮಾತ್ರ ಖರ್ಚು ಮಾಡಲಾಗಿದೆಯೆಂದರೆ ಅರ್ಧಕ್ಕೆ ಸ್ವಲ್ಪ ಕಡಮೆಯಾಗಿ ಹಣವನ್ನುಳಿಸಿದ್ದಾರೆ.

ಹೀಗೆ ಉಳಿತಾಯ ಮಾಡತಕ್ಕ ಹಣವನ್ನು ಸರ್ಕಾರದವರು ಹೇಗೆ ಪುನ: ದೇಶಾಭ್ಯುದಯ ಸಾಧನೆಗೆ ಉಪಯೋಗ ಮಾಡುತ್ತಾರೆಂದು ಕೇಳುತ್ತೇನೆ? ಕೇಂದ್ರ ಸರ್ಕಾರದಿಂದ ಸ್ಟೇಟ್‌ಫಂಡ್ ರಸ್ತೆಗಳ ಬಗ್ಗೆ ದೊರೆಯತಕ್ಕ ಗ್ರಾಂಟ್ ಹಣದಲ್ಲಿ 19 ಲಕ್ಷ .........

**Sri H.M.Channabasappa:-** I would have been very glad to apprise the Hon'ble Member of the of position if he had raised this point during the debate on Civil Works.

ಶ್ರೀ ಕೆ.ಕೆಂಚಪ್ಪ:- ಸ್ವಾಮಿ, ಒಂದು ಸರ್ವೇಸಾಧಾರಣವಾದ ನೇಮ ನೀತಿಯನ್ನು ಕೂಡ ತಿಳಿಯದೆ ಇರತಕ್ಕಂಥವರು ನಮಗೀದಿವಸ ಮಂತ್ರಿಗಳಾಗಿರತಕ್ಕದ್ದು ನಿಜವಾಗಿಯೂ ಇದು ನಮ್ಮ ದೇಶದ ದುರದೃಷ್ಟ! ಹಿಂದೆ ನಾವು ಒಪ್ಪಿಗೆ ಕೊಟ್ಟಿರತಕ್ಕ ಹಣವನ್ನು ಎಷ್ಟರಮಟ್ಟಿಗೆ ಖರ್ಚು ಮಾಡಿದ್ದಾರೆ, ಈಗ ಮತ್ತೆ ನಾವು ಒಪ್ಪಿಗೆ ಕೊಡತಕ್ಕ ಹಣವನ್ನು ಇವರು ಮುಂದೆ ಸರಿಯಾಗಿ ಆಯಾಯ ಬಾಬುಗಳಿಗೇ ಅಷ್ಟಷ್ಟನ್ನೂ ಪೂರ್ತಿಯಾಗಿ ಖರ್ಚು ಮಾಡುತ್ತಾರೆಯೇ ಎಂಬ ಅನುಮಾನದಲ್ಲಿರುವಾಗ, ಯಾವಾಗ ಸರ್ಕಾರದವರು ಹಿಂದಿನ ಸಾಲಿನಲ್ಲಿ ಕೊಟ್ಟ ಹಣವನ್ನೇ ಸರಿಯಾಗಿ ಖರ್ಚು ಮಾಡಿಲ್ಲವೋ ಆಗ ನಾವು ಮತ್ತೆ ಮುಂದಿನ ಸಾಲಿನಲ್ಲಿ ಖರ್ಚುಮಾಡುತ್ತೇವೆಂದು ಈ ದಿನ ನಮ್ಮ ಮುಂದೆ ಬಂದಿರುವ ಈ ಅಪ್ರೋಪ್ರಿಯೇಷನ್ ಬಿಲ್ಲಿನ ಬಗ್ಗೆ ನಾನು ಹೇಳುತ್ತೇನೆ. ಈ ಸರ್ಕಾರದಲ್ಲಿರತಕ್ಕ ಮಂತ್ರಿಮಂಡಲದವರಿಗೆ ಹಣಕಾಸಿನ ಆಡಳಿತದ ವಿಚಾರದಲ್ಲಿ ಎ,.ಬಿ,ಸಿ,ಡಿ ಸಹ ಗೊತ್ತಿಲ್ಲ ಎಂದು. ಅಂಥವರು ಈ ದಿವಸ ನಮ್ಮ ಮಂತ್ರಿಮಂಡಲದಲ್ಲಿರುವುದು ಮೈಸೂರು ಪ್ರಜೆಗಳ ದುರದೃಷ್ಟ! ಮಂತ್ರಿಮಂಡಲದವರು ಅವರ ತತ್ವಗಳಿಗೆ ಅನುಗುಣವಾಗಿ ಅವರು ನಡೆದುಕೊಳ್ಳುತ್ತಿಲ್ಲ. ಹೀಗಾಗಿ ದೇಶದಲ್ಲಿ ಯಾವ ಒಂದು ಇಂಡಸ್ಟ್ರಿಯಲ್ ಅನುಕೂಲತೆಯನ್ನೂ ಮಾಡಿಲ್ಲ, ಮಾಡುವುದಕ್ಕೆ ಮನಸ್ಸೂ ಇಲ್ಲ. ಹೀಗಿರುವಾಗ ಅವರು ನಮಗೆ ಇಷ್ಟು ಹಣ ಖರ್ಚು ಮಾಡಲು ಒಪ್ಪಿಗೆ ಕೊಡಿ ಎಂದರೆ ಹಣವನ್ನು ಖರ್ಚು ಮಾಡತಕ್ಕ ವಿಧಾನ ರೀತಿ ನೀತಿಗಳೇ ಇವರಿಗೆ ಗೊತ್ತಿಲ್ಲದಿರುವಾಗ ನಾವು ನಮ್ಮ ಒಪ್ಪಿಗೆಯನ್ನು ಕೊಡತಕ್ಕದ್ದು ಹೇಗೆ ಸಾಧ್ಯ ಎನ್ನುವ ಒಂದು ಮೂಲ ತತ್ವದ ಪ್ರಶ್ನೆ ಈಗ ಉದ್ಭವಿಸಿದೆ. ಹಳ್ಳಿಗಳ ರೋಡನ್ನು ಮಾಡತಕ್ಕ ಬಗ್ಗೆ ಕೊಡಲಾಗಿದ್ದ ಗ್ರಾಂಟಿನಲ್ಲಿ ಮೂರು ಲಕ್ಷ ನಲವತ್ತಾರು ಸಾವಿರದ ನೂರಎಪ್ಪತ್ತೈದು ರೂಪಾಯಿಗಳನ್ನು ಉಳಿಸಿದ್ದೀರಿ. ಸರ್ಕಾರದವರಿಗೆ ಹಣಕಾಸಿನ ಆಡಳಿತದಲ್ಲಿ ಏನೂ ಅನುಭವವಿಲ್ಲ ಮತ್ತು ದೇಶಾಭ್ಯುದಯ ಕಾರ್ಯ ಸಾಧನೆಯಲ್ಲಿ ಇವರಿಗೆ ಆಸಕ್ತಿಯಿಲ್ಲ ಎನ್ನುವುದನ್ನು ತಿಳಿಸಲು ಈ ಒಂದೆರಡು ಸ್ಯಾಂಪಲ್ ವಿಷಯಗಳನ್ನು ತಿಳಿಸಿದೆನು. ದೇಶಾಭ್ಯುದಯದ ಬಗ್ಗೆ ಖರ್ಚು ಮಾಡತಕ್ಕ ಹಣದಲ್ಲಿ ಸರ್ಕಾರದವರು ತುಂಬ ಅನ್ಯಾಯವಾದ ಮಾರ್ಗವನ್ನನುಸರಿಸುತ್ತಿದ್ದರೆಂಬುದನ್ನು ತಿಳಿಸುವುದಕ್ಕೆ ಈಗ ಸಮಯೋಚಿತವಾದಂಥ ವೇಳೆಯಾಗಿದೆ. ಈ ದಿವಸ ನಮ್ಮ ದ್ವಿತೀಯ ಪಾಂಚವಾರ್ಷಿಕ ಯೋಜನೆಯ ಕಾರ್ಯಗಳನ್ನೇ ತೆಗೆದುಕೊಳ್ಳೋಣ. ಇಲ್ಲಿಯವರೆಗೂ ನಡೆದಿರತಕ್ಕ ಅಭಿವೃದ್ಧಿ ಕಾರ್ಯಗಳೇನು? ಉಳಿದಿರತಕ್ಕ ಕಾಲದಲ್ಲಿ ಈ ಯೋಜನೆಗಾಗಿ ತೆಗೆದಿಟ್ಟಿರುವ ಹಣವನ್ನೆಲ್ಲಾ ಹೇಗೆ ಖರ್ಚು ಮಾಡುತ್ತಾರೆ? ಇದೊಂದೂ ನಮಗೀಗ ತಿಳಿಯುತ್ತಿಲ್ಲ.

**Sri H.M. Channabasappa:-** Is it the Hon'ble Member's opinion that we have not spent the amount provided by the Government of India in the form of grants under the C.R.F. and the Central Road Fund Reserve and that the amount provided has not been spent in respect of State Fund Roads?

ಶ್ರೀ ಕೆ.ಕೆಂಚಪ್ಪ:- ಈಗ ನನ್ನ ವಾದದ ತಿರುಳೇನೆಂದರೆ ಸರ್ಕಾರದವರು ಈ ದಿವಸ ಬಡ್ಜೆಟ್ಟಿನಲ್ಲಿ ಕೊಟ್ಟಿರತಕ್ಕ ಅಂಕಿ ಅಂಶಗಳೇನು, ಯಾವ ಯಾವ ಬಾಬಿಗೆ ಎಷ್ಟೆಷ್ಟು ಹಣವನ್ನು ಒದಗಿಸಲಾಗಿದ್ದಿತು, ಆ ಬಗ್ಗೆ ಯಾವ ಯಾವ ಬಾಬಿಗೆ ಎಷ್ಟೆಷ್ಟು ಖರ್ಚಾಗಿದೆ? ಉಳಿದಿರತಕ್ಕ ಹಣ ಪ್ರತಿಯೊಂದು ಬಾಬಿನಲ್ಲೂ ಎಷ್ಟು ಎಂಬ ಬಗ್ಗೆ ಸರ್ಕಾರದಲ್ಲಿ ಅಂಕಿ ಅಂಶಗಳಿದ್ದರೆ ಕೊಡಲಿ, ನನ್ನಲ್ಲಿರತಕ್ಕ ಅಂಕಿ ಅಂಶಗಳನ್ನು ನಾನೂ ಸಹ ಕೊಡುತ್ತೇನೆ. I will provide you with the figures now.

**Sri H.M.Channabasappa:-** I do not know whether you have read them rightly or wrongly. ನೀವು ರೆವಿನ್ಯೂ ಬಡ್ಜೆಟ್‌ನಲ್ಲಿ ಹೇಳುತ್ತಿದ್ದೀರಾ? Please refer to the page.

ಶ್ರೀ ಕೆ.ಕೆಂಚಪ್ಪ:- ನಾನು ಫಿಗರ್ಸ್ ಮಾತ್ರ ನೋಟ್ ಮಾಡಿಕೊಂಡಿದ್ದೇನೆ. ಪೇಜನ್ನು ಗುರ್ತು ಹಾಕಿಕೊಂಡಿಲ್ಲ. ಈಗ ನಾನು ಹೇಳುತ್ತಿರುವುದ ನಿಮ್ಮ ಆ '50' ಸಿವಿಲ್ ಕಾಂಗಾರಿಗಳ ಡಿಮ್ಯಾಂಡಿನಲ್ಲಿ ಬರುತ್ತದೆ. ಮಂತ್ರಿಗಳು ತಮ್ಮ ಬಡ್ಜೆಟ್ಟಿನಲ್ಲಿ " 50 ಸಿವಿಲ್ ಕಾಂಗಾರಿ "ಗಳ ಹೆಡ್ಡಿನಲ್ಲಿ ಬರತಕ್ಕ ಆ(ಸಿ) (ಡಿ) (ಇ) (ಎಫ್) (ಜಿ) (ಎಚ್) ಐಟಂಗಳಲ್ಲಿ ಏನೇನಾಗಿದೆ ಎಂಬುದನ್ನು ನೋಡಿದ್ದಾರೇನು?

ಶ್ರೀ ಎಚ್.ಎಂ.ಚನ್ನಬಸಪ್ಪ:- ರಿಸೀಟ್ಸ್ ಸ್ಟೇಜಿನಲ್ಲೇ?

ಶ್ರೀ ಕೆ.ಕೆಂಚಪ್ಪ:- ಕೇಂದ್ರ ಸರ್ಕಾರದವರು ಈ ಬಾಬುಗಳ ಬಗ್ಗೆ ಕೊಡುತ್ತಿದ್ದ ಗ್ರಾಂಟ್ ಏಕೆ ಕಡಮೆಯಾಯಿತು? ಯಾವಾಗ ಈ ಸರ್ಕಾರದವರು ಬರುತ್ತಿದ್ದ ಗ್ರಾಂಟ್ ಹಣವನ್ನು ಸರಿಯಾಗಿ ಖರ್ಚು ಮಾಡಲಿಲ್ಲವೋ, ಖರ್ಚು; ಮಾಡತಕ್ಕದ್ದನ್ನು ಇವರು ಯಾವಾಗ ಕಡಮೆ ಮಾಡಿದಿರೋ ಅವರು ಕೊಡುತ್ತಿದ್ದ ಗ್ರಾಂಟನ್ನೂ ಕೂಡ; ಕಡಮೆ ಮಾಡಿದ್ದಕ್ಕೆ ಇದೇ ಕಾರಣ ಎಂದು ನಾನು ಹೇಳುತ್ತೇನೆ. ಇನ್ನು ಇದೇ ರೀತಿಯಾಗಿ ನಡೆದಿರತಕ್ಕ ವಿಚಾರಗಳಲ್ಲಿ ಮೈನರ್ ಇರಿಗೇಷನ್ ಸ್ಕೀಂ ಎರಡನೆಯದು. ಈ ಬಾಬಿನಲ್ಲಿ ಹಣವನ್ನು ಯಾವ ರೀತಿ ಉಪಯೋಗ ಮಾಡಿದ್ದಾರೆಂಬುದಕ್ಕೆ ಒಂದೆರಡು ನಿದರ್ಶನಗಳನ್ನು ಹೇಳಬೇಕಾಗಿದೆ. ಸ್ಪೆಷಲ್ ಮೈನರ್ ಇರಿಗೇಷನ್ ಬಗ್ಗೆ ಫಸ್ಟ್ ಸ್ಟೇಜಿನಲ್ಲಿ ಡಿಸೆಂಬರ್ ತಿಂಗಳಿಂದ 1958 ಮಾರ್ಚಿ ಆಖೈರುವರೆಗೆ 30 ಲಕ್ಷ ರೂಪಾಯಿಗಳನ್ನೂ, ಅನಂತರ 1958ನೆಯ ಏಪ್ರಿಲ್‌ನಿಂದ ಆ ವರ್ಷದ ಜೂನ್ ಆಖೈರುಗಳಿಗೆ 20 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದೇವೆಂದು ಹೇಳಿದ್ದಾರೆ. ಪುನ: ಜೂನ್ ಆಖೈರಿನಿಂದ ಪ್ರಸಕ್ತ ಸಾಲಿನ ಮಾರ್ಚಿ ಆಖೈರಿಗೆ ಒಂದು ಕೋಟಿ ಐವತ್ತು ;ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದೇವೆಂದು ಹೇಳಿ ಆನೆಕ್ಷರಿನಲ್ಲಿ ಎರಡುಕೋಟಿ ರೂಪಾಯಿಗಳನ್ನು ಉಳಿದ ಅವಧಿಯಲ್ಲಿ ಖರ್ಚು ಮಾಡುತ್ತೇವೆಂದು ಹೇಳಿದ್ದಾರೆ. ಅದರಲ್ಲಿ ಈಗ ಒಟ್ಟು ಎಷ್ಟು ಹಣ ಖರ್ಚಾಗಿದೆ?

*  *  *  *  *

# ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕಾಭಿವೃದ್ಧಿ

30 ಜುಲೈ 1957

ಶ್ರೀ ಕೆಂಚಪ್ಪನವರ ಪ್ರಶ್ನೆಗಳು

(a) whether it is a fact that most; of the big factories and other industries; of production are located in the Corporation area, cities and a few taluk headquarters;

(b) whether they intend to explore the possibilities of starting big factories for oil products in Challakere Town?

ಶ್ರೀ ಸಿ.ಎಂ. ಪೂಣಚ್ಚ (ಮಂತ್ರಿಗಳು) ಅವರ ಉತ್ತರ

(a) Yes.

(b) No. Government have not funds to undertake schemes for industries which have been reserved for the Private Sector. But if industrialists come forward to start this or other such industries, Government will be glad to afford the usual facilities.

ಶ್ರೀ ಕೆ.ಕೆಂಚಪ್ಪ:- ಉತ್ತರದಲ್ಲಿ ತಾವು ಹೇಳಿದ್ದೀರಿ "Government have no funds to undertake schemes for industries; which; have been reserved for the Private Sector."ಎಂದು. ಈ Private Sector ಯಾವ ಯಾವುವು ಹೇಳುತ್ತೀರಾ ಸ್ವಾಮಿ?

ಶ್ರೀ ಸಿ.ಎಂ. ಪೂಣಚ್ಚ:- ಅನೇಕ ಉದ್ದಿಮೆಗಳನ್ನು ಖಾಸಗಿ ಕ್ಷೇತ್ರಕ್ಕಾಗಿ ಕಾಯ್ದಿರಿಸಲಾಗಿದೆ. ಮುಖ್ಯವಾಗಿ ಸಿಮೆಂಟ್, ಪೇಪರ್, ಸಕ್ಕರೆ ಕಾರ್ಖಾನೆ ಮುಂತಾದುವುಗಳನ್ನು Private sector ಸಲುವಾಗಿ ಇವೆ. ಇನ್ನೂ ಅನೇಕ ಗ್ರಾಮಾಂತರ ಕೈಗಾರಿಕೆಗಳನ್ನು ಗೃಹ ಕೈಗಾರಿಕೆಗಳನ್ನು ಖಾಸಗೀ ಕ್ಷೇತ್ರದ ಸಲುವಾಗಿ ಕಾಯ್ದಿರಿಸಲಾಗಿದೆ.

ಶ್ರೀ ಕೆ.ಕೆಂಚಪ್ಪ:- ಎಣ್ಣೆಯ ಕಾರ್ಖಾನೆಗಳನ್ನು ಖಾಸಗೀ ಕ್ಷೇತ್ರಕ್ಕೆ ಕೊಡುತ್ತೀರಾ, ಸ್ವಾಮಿ?

**Sri C.M.Poonacha:-** That is definitely in the private sector.

ಶ್ರೀ ಕೆ.ಕೆಂಚಪ್ಪ:- ಈಗ ಇಂತಿಂಥವು Private Sector ನಲ್ಲಿ ಇವೆ ಎಂದು ಹೇಳಿದ್ದಾರೆ. ಹಾಗಾದರೆ Public Sector ನಲ್ಲಿ ಇರತಕ್ಕಂಥವುಗಳು ಯಾವ ಯಾವುವು ಎಂದು ಹೇಳುತ್ತೀರಾ?

ಅಧ್ಯಕ್ಷರು:- ಈ ಪ್ರಶ್ನೆ ಮೂಲ ಪ್ರಶ್ನೆಗೆ ಸಂಬಂಧಪಟ್ಟದ್ದಲ್ಲ.

ಶ್ರೀ ಕೆ.ಕೆಂಚಪ್ಪ:- ಈಗ ಇರತಕ್ಕಂಥ ದೊಡ್ಡ ದೊಡ್ಡ ಕಾರ್ಖಾನೆಗಳು ಪಟ್ಟಣಗಳಲ್ಲಿ ದೊಡ್ಡ ದೊಡ್ಡ ಟೌನುಗಳಲ್ಲಿ ಇವೆ ಎಂದು ತಾವು ಹೇಳಿದ್ದೀರಿ. ಆದರೆ ಇಂಥ ಕಾರ್ಖಾನೆಗಳನ್ನು ಹಳ್ಳಿಗಳಲ್ಲಿ ಸ್ಥಾಪನೆ ಮಾಡಬೇಕು ಎಂಬ ವಿಚಾರವನ್ನು ಇಟ್ಟುಕೊಂಡಿದ್ದೀರಾ?

ಶ್ರೀ ಸಿ.ಎಂ.ಪೂಣಚ್ಚ:- ಎಲ್ಲವನ್ನೂ ಪಟ್ಟಣಗಳಲ್ಲಿಯೇ ಸ್ಥಾಪಿಸುತ್ತೇವೆ ಎಂದು ಉತ್ತರ ಕೊಟ್ಟಿಲ್ಲ. ದೊಡ್ಡ ದೊಡ್ಡ ಕಾರ್ಖಾನೆಗಳನ್ನು ಬಹುಮಟ್ಟಿಗೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಏರ್ಪಡಿಸಿರುವುದು ನಿಜವೇ ಎಂದು ಪ್ರಶ್ನೆ ಕೇಳಿದ್ದಕ್ಕೆ ಹೌದು ಎಂದು ಉತ್ತರದಲ್ಲಿ ಹೇಳಿದೆ.

ಶ್ರೀ ಕೆ.ಕೆಂಚಪ್ಪ:- ಹಳ್ಳಿಗಳಲ್ಲಿ ಬೇರೆ ಕೈಗಾರಿಕೆಗಳನ್ನು ಸ್ಥಾಪನೆ ಮಾಡತಕ್ಕಂಥ ವಿಚಾರ ಇದೆಯೇ?

ಶ್ರೀ ಸಿ.ಎಂ.ಪೂಣಚ್ಚ:- ಪಟ್ಟಣಗಳಲ್ಲಿ ಕೆಲವು ಕಾರ್ಖಾನೆಗಳು ಮಾತ್ರ ಇವೆ. ಬೇರೆ ಕಡೆ ಇಲ್ಲ. ಡಿಸೆಂಟ್ರಲೈಜ್ ಮಾಡಬೇಕಾಗಿದೆ.

ಶ್ರೀ ಕೆ.ಕೆಂಚಪ್ಪ:- ಹಳ್ಳಿಗಳಲ್ಲಿ public sector factory ಗಳನ್ನು ಪ್ರಾರಂಭಿಸುತ್ತೀರಾ?

ಶ್ರೀ ಸಿ.ಎಂ.ಪೂಣಚ್ಚ:- ಅದಕ್ಕೆ ಸಾಕಷ್ಟು ಸಲಕರಣೆಗಳು ಹಳ್ಳಿಗಾಡಿನ ಪ್ರದೇಶದಲ್ಲಿ ದೊರೆತರೆ ಖಂಡಿತವಾಗಿ ಅಲ್ಲಿ ಸ್ಥಾಪಿಸಲು ಸರಕಾರ ಗಮನ ಕೊಡುತ್ತದೆ.

* * * * *

# ವಿದ್ಯುತ್ ಹಾಗೂ ಗೃಹಕೈಗಾರಿಕೆಗಳು

29 ಜುಲೈ 1957

ಶ್ರೀ ಕೆ.ಕೆಂಚಪ್ಪ:- ಮಾನ್ಯ ಅಧ್ಯಕ್ಷರೇ, ಇಂದಿನ ಡಿಮ್ಯಾಂಡ್‌ಗಳಲ್ಲಿ ಮೊದಲನೆಯದಾಗಿ ಎಲೆಕ್ಟ್ರಿಸಿಟಿ ಮತ್ತು ಕ್ಯಾಪಿಟಲ್ • ಆನ್ ಎಲೆಕ್ಟ್ರಿಸಿಟಿ ಸ್ಕೀಂಸ್ ವಿಚಾರವಾಗಿ ಕೆಲವಾರು ಅಭಿಪ್ರಾಯಗಳನ್ನು ಕೊಡಬೇಕೆಂದಿದ್ದೇನೆ. ನಾನು ತಿಳಿದುಕೊಂಡಿರುವ ಮಟ್ಟಿಗೆ ವಿದ್ಯುಚ್ಛಕ್ತಿಯನ್ನು ಕೇವಲ ಹಿಂದುಳಿದ ಪ್ರಾಂತಗಳಿಗೆ ಕೊಟ್ಟು, ಅಲ್ಲಿ ಕೈಗಾರಿಕೆಯ ಅಭಿವೃದ್ಧಿಗೂ ಮತ್ತು ವ್ಯವಸಾಯದ ಅಭಿವೃದ್ಧಿಗೂ ಇದು ಮುಖ್ಯ ಕಾರಣವಾಗಲಿ ಎನ್ನತಕ್ಕ ದೃಷ್ಟಿಯಿಂದ ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಕೊಟ್ಟಿರುವ ಹಾಗೆ ನನಗೆ ತಿಳಿದುಬರುತ್ತದೆ. ನಾನು ಈ ವಿಚಾರವಾಗಿ ಒಂದು ಭಾವನೆಯನ್ನು ಕೊಡುತ್ತಿದ್ದೇನೆ. ಅದೇನೆಂದರೆ, ವಿದ್ಯುಚ್ಛಕ್ತಿಯನ್ನು ಕೊಡುವಾಗ ಸ್ಥಳದ ಅವಶ್ಯಕತೆಗಳಿಗೆ ಅಷ್ಟು ಗಮನ ಕೊಡದೆ, ಮುಲಾಜಿಗೆ ಅಥವಾ ಯಾವುದೋ ಒಂದು ಅಭಿಮಾನಕ್ಕೆ ಕಟ್ಟು ಬಿದ್ದು ಹೆಚ್ಚಿಗೆ ವಿದ್ಯುಚ್ಛಕ್ತಿಯನ್ನು ಕೊಟ್ಟಿರುವ ಹಾಗೆ ಕಾಣಿಸುತ್ತದೆ. ಈ ಸಂಬಂಧದಲ್ಲಿ ಒಂದೇ ಒಂದು ನಿದರ್ಶನವನ್ನು ಹೇಳುತ್ತೇನೆ. ಹರಿಹರದಲ್ಲಿ ತುಂಗಭದ್ರ ನದಿಯ ಮೇಲೆ ಸುಮಾರು ಎರಡು ಲಕ್ಷ ರೂಪಾಯಿ ಖರ್ಚು ಮಾಡಿ ಕೊನೆಯವರೆಗೂ ವಿದ್ಯುಚ್ಛಕ್ತಿಯನ್ನು ಕೊಟ್ಟಿದ್ದಾರೆ. ಹರಿಹರದ ವ್ಯವಸಾಯದ ವಿಧಾನವೇ ಬೇರೆ. ಅಲ್ಲಿ ಆ ನದಿಯ ಪಕ್ಕದಲ್ಲಿ ಬೇಕಾದಷ್ಟು ಬಹಳ ಫಲವತ್ತಾದ ಜಮೀನಿದ್ದರೂ ಖುಷ್ಕಿ ಬೆಳೆಗೆ ಹೆಚ್ಚು ಗಮನ ಕೊಡುತ್ತಿಲ್ಲ. ಅಲ್ಲಿ ಒಂದಾದರೂ ಕಪಿಲೆಗಳಿರಲಿಲ್ಲ. ಇಂತಹ ಸ್ಥಳಕ್ಕೆ ಎರಡು ಲಕ್ಷ ರೂಪಾಯಿ ಖರ್ಚು ಮಾಡಿ ವ್ಯವಸಾಯದ ಉತ್ಪಾದನೆಗೋಸ್ಕರ ವಿದ್ಯುಚ್ಛಕ್ತಿಯನ್ನು ಏತಕ್ಕೆ ಕೊಟ್ಟಿರಬಹುದು ಎನ್ನುವ ವಿಷಯವನ್ನು ಯಾರಾದರೂ ಹೇಳಬಲ್ಲರೇ ಎನ್ನುವ ವಿಚಾರವನ್ನು ಮೊದಲು ಕೇಳುತ್ತಿದ್ದೇನೆ. ಅಲ್ಲಿಗೆ ವಿದ್ಯುಚ್ಛಕ್ತಿಯನ್ನು ಕೊಟ್ಟರಲ್ಲ, ಏಕೆ ಕೊಟ್ಟರು ಎಂದು ಕೇಳುತ್ತೇನೆ. ಈಗಲೂ ಸಹ ತುಂಗಭದ್ರ ನದಿಯ ಮೇಲೆ ಒಂದಾದರೂ ಬಾವಿ ಇದೆಯೇ, ಕಪಿಲೆಗಳಾದರೂ ಎಷ್ಟಿವೆ ಎಂದು ಕೇಳುತ್ತೇನೆ. ಮೊನ್ನೆ ದಿವಸ ನನ್ನ ಪ್ರಶ್ನೆಯೊಂದಕ್ಕೆ ಉತ್ತರ ಕೊಡುವಾಗ ಶೇಕಡ ಇಷ್ಟು ಬಾವಿಗಳಿಗೆ ಕಂಪ್ಲೀಷನ್ ಫಾರಂ ಕೊಟ್ಟರೆ ಆಮೇಲೆ ಕೆಲಸವನ್ನು ತೆಗೆದುಕೊಳ್ಳುತ್ತೇವೆಂದು ಹೇಳಿದರು. ಹಿರಿಯೂರು ತಾಲ್ಲೂಕಿನ ಧರ್ಮಪುರಿ ಹೋಬಳಿಯೊಂದರಲ್ಲೇ ಸುಮಾರು 500–600 ಬಾವಿಗಳಿವೆ. ನಮ್ಮ ಮುಖ್ಯಮಂತ್ರಿಗಳು ಬಂದಿರತಕ್ಕ ಮೊಳಕಾಲ್ಮೂರು ತಾಲ್ಲೂಕಿನಲ್ಲಿಯೂ ಮತ್ತು ಚಳ್ಳಕೆರೆ ತಾಲ್ಲೂಕಿನಲ್ಲಿಯೂ ಎಷ್ಟೋ ಬಾವಿಗಳಿವೆ. ಬಳ್ಳಾರಿ ರಸ್ತೆಗೆ ಪೂರ್ವ ದಿಕ್ಕಿನಲ್ಲಿ ಮಳೆ ಇಲ್ಲದೆ ಬೆಳೆ ಹಾಳಾಗುತ್ತಿದೆ. ಒಟ್ಟು ಜಿಲ್ಲೆಯಲ್ಲಿ ವರ್ಷಕ್ಕೆ 12 ಅಂಗುಲ ಮಳೆ ಬಿದ್ದರೆ, ಪೂರ್ವಕ್ಕೆ 6–7 ಅಂಗುಲ ಮಾತ್ರ ಮಳೆಯಾಗುತ್ತದೆ. ಆ ಭಾಗದಲ್ಲಿ ಬಾವಿಗಳಿಂದಲೇ ಬೆಳೆಯನ್ನು ತೆಗೆಯಬೇಕು, ಅಂತೆಯೇ ಸಿರ ಮತ್ತು ಪಾವಗಡ ತಾಲ್ಲೂಕುಗಳಲ್ಲಿಯೂ ಹಾಗೆಯೇ

ಇದೆ. ಈ ಸ್ಥಳಗಳಲ್ಲೆಲ್ಲ ಬಾವಿಗಳಿಂದಲೇ ನೀರನ್ನು ಒದಗಿಸಿಕೊಳ್ಳಬೇಕಾಗಿದೆ. ಇಂಥ ಕಡೆಗಳಿಗೆ ವಿದ್ಯುಚ್ಛಕ್ತಿಯನ್ನು ಕೊಡದೆ ಬೇರೆಕಡೆಗೆ ಕೊಡುವುದಕ್ಕೆ ಕಾರಣವಿದೆಯೇ? ಚಳ್ಳಕೆರೆ ತಾಲ್ಲೂಕಿನಲ್ಲಿ ಒಂದು ಬಟ್ಟೆಗೆ ತೇಪೆ ಹಾಕಿದ ಹಾಗೆ ಕೆಲವುಕಡೆ ಮಾತ್ರ ವಿದ್ಯುಚ್ಛಕ್ತಿಯನ್ನು ಕೊಟ್ಟು ಉಳಿದ ಭಾಗಗಳಿಗೆ ಕೊಟ್ಟಿಲ್ಲ. ಹೀಗಿರುವಾಗ ಹರಿಹರ ತಾಲ್ಲೂಕಿನಲ್ಲಿ ಹೆಚ್ಚು ಬಾವಿಗಳಲ್ಲದಿದ್ದರೂ ಕೊಟ್ಟಿರುವುದಕ್ಕೆ ಕಾರಣವಾದರೂ ಏನು? ನಾನು ಇದನ್ನೆಲ್ಲ ಏಕೆ ಹೇಳುತ್ತಿದ್ದೇನೆಂದರೆ ಯಾವ ಕೆಲಸ ಮಾಡಬೇಕಾದರೂ ಒಂದು ಧರ್ಮ ಬೇಕು, ಒಂದು ನಿಷ್ಠೆ ಬೇಕು. ಆದರೆ ಅದೊಂದನ್ನೂ ಇಲ್ಲಿ ನಾನು ಕಾಣುತ್ತಿಲ್ಲ. ಅವರವರು ಇರತಕ್ಕ ಸ್ಥಳಗಳಿಗೆ, ಮಂತ್ರಿಗಳು ಎಲ್ಲೆಲ್ಲಿಂದ ಬಂದಿದ್ದಾರೆಯೋ ಅವರ ಸ್ಥಳಗಳಿಗೆ ಹೆಚ್ಚು ಗಮನಕೊಟ್ಟು ಅಲ್ಲಿಗೆ ಕೊಟ್ಟ ಹಾಗೆ ಕಾಣುತ್ತದೆ. ಈ ವಿಚಾರವನ್ನು ನೀವೇನಾದರೂ ಇಲ್ಲ ಎಂದರೆ, ನಾನು ಅಂಕಿ ಅಂಶಗಳಿಂದ, ನೋಡಿರತಕ್ಕ ವಿದ್ಯಮಾನಗಳಿಂದ, ತೋರಿಸಿ ಕೊಡುವವನಿದ್ದೇನೆ. ಇನ್ನು ಈ ವಿಚಾರ ಹೆಚ್ಚಿಗೆ ಹೇಳುವುದಿಲ್ಲ. ವಿದ್ಯುಚ್ಛಕ್ತಿ ಎನ್ನುವುದು ಬಯಲು ನಾಡಿಗೆ ತುಂಬ ಉಪಯುಕ್ತವಾದ ಒಂದು ಸಲಕರಣೆ. ನಾವು ಬಯಲುನಾಡಿನಿಂದ ಬಂದಿರತಕ್ಕವರು. ನಮ್ಮಲ್ಲಿ ಝರಿಗಳಿಲ್ಲ, ಅಲ್ಲಿ ಕೆರೆ ಕಟ್ಟುವುದಕ್ಕೆ ಕಷ್ಟವಿದೆ. ಬೇರೆ ಕಡೆಗಳಲ್ಲಿ 30 ಲಕ್ಷ ರೂಪಾಯಿಗಳಲ್ಲಿ ಕಟ್ಟತಕ್ಕ ಕೆರೆಯನ್ನು ಇಲ್ಲಿ ಮೂರುಕೋಟಿ ರೂಪಾಯಿಗಳು ಖರ್ಚು ಮಾಡಿದರೆ ಆಗುತ್ತದೆಯೋ ಏನೋ. ಪ್ರಾಯಶ: ಆಗಲಾರದು ಎಂದು ಹೇಳಬಹುದು. ಆದುದರಿಂದ ಬಯಲುನಾಡಿನಲ್ಲಿ ಬಾವಿಗಳಿಗೆ ಹೆಚ್ಚಿಗೆ ಉತ್ತೇಜನ ಕೊಟ್ಟು ಅದರ ಮೇಲೆ ದುಡ್ಡು ಖರ್ಚು ಮಾಡಿದರೆ, ಬೇರೆ ಕಡೆಗಳಲ್ಲಿ ಯಾವ ರೀತಿ ಎಷ್ಟು ಹಣವನ್ನು ಖರ್ಚುಮಾಡಿದರೆ ಒಂದು ಎಕರೆಗೆ ನೀರು ಸಿಕ್ಕಬಹುದೋ ಅಷ್ಟೇ ಖರ್ಚಿನಲ್ಲಿ ಅದೇ ಪ್ರಮಾಣದಲ್ಲಿ ಇಲ್ಲಿಯೂ ಮಾಡಬಹುದು. ಒಂದು ಸಾವಿರ ರೂಪಾಯಿಗೆ ಒಂದು ಎಕರೆ ಎಂದರೆ, ಮೂರು ಸಾವಿರ ರೂಪಾಯಿ ಖರ್ಚು ಮಾಡಿದರೆ ಮೂರು ಎಕರೆ ಜಮೀನನ್ನು ಸಾಗು ಮಾಡತಕ್ಕ ಒಂದು ಬಾವಿಯನ್ನು ತೆಗೆಸಬಹುದು. ಆದುದರಿಂದ ಈ ದೃಷ್ಟಿಯಿಂದ ನೋಡಬೇಕೆಂದು ಕೇಳುತ್ತಿದ್ದೇನೆ. ಈಗಿರುವಂತೆ ಪಕ್ಷಪಾತ ಮನೋಭಾವನೆಯನ್ನು ತೋರಿಸುತ್ತ ಹೋದರೆ ಅದರಿಂದ ಖಂಡಿತವಾಗಿ ಮುಂದೆ ಕೆಡುಕಾಗುತ್ತದೆಯೇ ಹೊರತು ಒಳಿತಾಗಲಿಕ್ಕಿಲ್ಲ. ಇವರು ಪಕ್ಷಪಾತ ಭಾವನೆಯನ್ನು ತೋರಿಸಿದ್ದಾರೆಂದು ರುಜುವಾತು ಕೊಡುತ್ತೇನೆ. ಯಾವ ಒಂದು ಉದ್ದೇಶಕ್ಕೋಸ್ಕರ ವಿದ್ಯುಚ್ಛಕ್ತಿಯನ್ನು ಕೊಡುತ್ತೀರೋ ಆ ಉದ್ದೇಶ ಸಫಲವಾಗಲಿ, ಅದಕ್ಕೋಸ್ಕರ ಮಾತ್ರ ಕೊಡಿ ಎಂದು ಹೇಳುತ್ತೇನೆ.

ಇನ್ನು ಕೈಗಾರಿಕೆ ವಿಚಾರಕ್ಕೆ ಬರುತ್ತೇನೆ. ಈಗಾಗಲೇ ನನ್ನ ಸ್ನೇಹಿತರು ನನ್ನ ಕೆಲಸವನ್ನು ಸ್ವಲ್ಪ ಹಗುರವಾಗಿ ಮಾಡಿದ್ದಾರೆ. ನಾನು ಇಷ್ಟನ್ನು ಮಾತ್ರ ಹೇಳುತ್ತೇನೆ. ನಮ್ಮ ಮೈಸೂರು ಸಂಸ್ಥಾನದಲ್ಲಿರತಕ್ಕ ಕೈಗಾರಿಕೆಗಳಲ್ಲಿ ಬಹುಭಾಗ ಕೈಗಾರಿಕೆಗಳಲ್ಲಿ ಲುಕ್ಸಾನಾಗುತ್ತಿದೆ ಅಥವಾ ಖರ್ಚಿಗಿಂತ ಉತ್ಪತ್ತಿ ಕಡಮೆ ಇದೆ ಎನ್ನತಕ್ಕ ಪದವನ್ನು ಉಪಯೋಗಿಸಿದರೆ ಸರಿಯಾಗಬಹುದು (Interruption)

1836ನೆಯ ಇಸವಿಯಲ್ಲಿ ಪ್ರಾರಂಭ ಮಾಡಿದಂಥ ಕೈಗಾರಿಕೆಗಳಲ್ಲಿ ಇವೊತ್ತು ಲುಕ್ಸಾನಾಗುತ್ತಿದೆ. ಬಿತ್ತಿಬೆಳೆಯಬೇಕು, ನಿಜ. ಇವೊತ್ತು ಹೊಸದಾಗಿ ಪ್ರಾರಂಭ ಮಾಡಿದ ಉದ್ಯಮಗಳಿಗೆ ರಕ್ಷಣೆ ಬೇಕು. ಬಹಳ ವರ್ಷಗಳಿಂದಲೂ ನಡೆದುಕೊಂಡು ಬಂದಿರತಕ್ಕ ಕೈಗಾರಿಕಾ ಉದ್ಯಮಗಳಲ್ಲಿ ಲುಕ್ಸಾನು ಹೇಗೆ ಬರುತ್ತದೆ? ಒಟ್ಟು ಹಿಂದಿನ ಐದು ತಿಂಗಳಲ್ಲಿ ಉತ್ಪತ್ತಿ ಬಂದಿರುವುದು 5,79,76,000 ರೂಪಾಯಿ, ಖರ್ಚು 6,96,30,200 ರೂಪಾಯಿ.ಇದು ಹಿಂದಿನ ಐದು ತಿಂಗಳಿಗೆ ಸರ್ಕಾರದವರು ಕೊಟ್ಟಿರುವ ಅಂಕಿಗಳ ಪ್ರಕಾರವಿರುತ್ತದೆ.

ಸರಕಾರದ ಕೈಗಾರಿಕೆಗಳಲ್ಲಿ ಎಷ್ಟು ಉತ್ಪತ್ತಿಯು ಆಗಬೇಕೋ ಅಷ್ಟು ಆಗುತ್ತಿಲ್ಲವೆಂದು ಹೇಳಬೇಕಾಗಿದೆ. ಕೈಗಾರಿಕೆಗಳ ಸಂಬಂಧದಲ್ಲಿ ವಿಚಕ್ಷಣೆಯಿಂದ ಆಡಳಿತ ನಡೆಸುತ್ತಿಲ್ಲ. ಕೈಗಾರಿಕೆಗಳ ಉತ್ಪತ್ತಿ ಹೆಚ್ಚಿಸಿ ಜನರ ಮೇಲಿನ ಹೊರೆಯನ್ನು ಕಡಮೆ ಮಾಡುವ ಉದ್ದೇಶವನ್ನು ಸರ್ಕಾರ ಸಾರ್ಥಕಗೊಳಿಸಿಲ್ಲ. ಸರ್ಕಾರ ತುಂಬ ಉಪೇಕ್ಷೆಯಿಂದ ಇದೆ ಎಂದು ನನಗೆ ಎನಿಸುತ್ತದೆ. ಆದುದರಿಂದ ಕೈಗಾರಿಕೆಗಳ ಬಗ್ಗೆ ಸರ್ಕಾರ ಒಂದು ನಿರ್ದಿಷ್ಟ ನೀತಿಯನ್ನು ಅನುಸರಿಸಬೇಕು.

ಖಾದೀ ಧಾರಣೆಯ ಉದ್ದೇಶವೇನು? ಗಾಂಧೀಜಿ ತತ್ವಕ್ಕೋಸ್ಕರ ನೀವು ಖಾದೀ ಹಾಕುತ್ತಿದ್ದೀರಾ ಅಥವಾ ಬರಿ ಬ್ಯಾಡ್ಜ್ ಇರಲಿ ಎಂದು ಹಾಕಿಕೊಳ್ಳುತ್ತಿದ್ದೀರಾ? ಖಾದಿ ಕೈಗಾರಿಕೆ ಸ್ವಾವಲಂಬನ ಪದ್ಧತಿಯ ಮೇಲೆ ನಡೆಯಬೇಕು ಎಂದು ಗಾಂಧೀಜಿಯವರು ಹೇಳಿದ್ದರು. ಆದರೆ ಸರಕಾರ ಈ ಸಂಬಂಧದಲ್ಲಿ ಏನೂ ಮಾಡಿಲ್ಲ. ಯಾವ ಗೃಹಕೈಗಾರಿಕೆಗೆ ಯಂತ್ರಗಳಿಂದ ಪೈಪೋಟಿ ಇದೆಯೋ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡುವುದು ಅಗತ್ಯ. ಸರಕಾರಕ್ಕೆ ಖಾದಿಯಲ್ಲಿ ನಿಜವಾಗಿಯೂ ನಂಬಿಕೆಯಿದ್ದರೆ ಅದರ ಅಭಿವೃದ್ಧಿಗೆ ಹೆಚ್ಚಿನ ಹಣ ಒದಗಿಸುವಂತೆ ಮಾಡಬೇಕು. ಸಣ್ಣ ಸಣ್ಣ ಕೈಗಾರಿಕೆಗಳ ವಿಚಾರದಲ್ಲಿ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಈಗ ಕೋಲಾರ ಗೋಲ್ಡ್ ಫೀಲ್ಡ್ ವಿಷಯವಗಿ ಅನೇಕರು ಮಾತನಾಡಿದ್ದಾರೆ. ನಿಜವಾಗಿ ನೋಡಿದರೆ ಇವೊತ್ತಿನ ದಿವಸ ಸುಮ್ಮಾರು ಏಳು ಲಕ್ಷ ರೂಪಾಯಿಗಳ ಉತ್ಪತ್ತಿ ಇದೆ. ಮೈಸೂರು ಮೈನ್ಸ್, ಚಾಂಪಿಯನ್ ರೀಫ್ಸ್ ಮತ್ತು ನಂದಿದುರ್ಗ ಮೈನ್‌ಗಳಿಂದ ಗ್ರಾಸ್ ಪ್ರಾಫಿಟ್ ಪ್ರತಿವರ್ಷವೂ 117-92 ಲಕ್ಷ ರೂಪಾಯಿಗಳಷ್ಟು ಉತ್ಪತಿ ಇತ್ತು. 1935ನೆಯ ಇಸವಿಯಲ್ಲಿ ಕೇವಲ ರಾಯಲ್ಟಿಗೆ 23 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾರೆ. ಡಿವಿಡೆಂಡ್‌ಗೋಸ್ಕರ 62.55 ಲಕ್ಷರೂಪಾಯಿಗಳನ್ನು ಕೊಟ್ಟಿದ್ದಾರೆ. ಹೀಗೆ ಇನ್ನೂ ಅನೇಕ ಬಾಬುಗಳಿಗೆ ಹಣವನ್ನು ಒದಗಿಸಿದ್ದಾರೆ. ಈಗಿನ ಉತ್ಪತ್ತಿ ಏನಾಗಿದೆ ಎಂದರೆ 1949ನೆಯ ಇಸವಿಯೊಳಗೆ, 1952ನೆಯ ಇಸವಿಯೊಳಗೆ ಮತ್ತು 1953ನೆಯ ಇಸವಿಯೊಳಗೆ ಬದಲಾವಣೆಯಾಗಿದೆ. ಈ ರೀತಿ ಬದಲಾವಣೆಯಾದ ಮೇಲೆ ಹಿಂದಿನ ಉತ್ಪತ್ತಿಗೂ ಈಗಿನ ಉತ್ಪತ್ತಿಗೂ ಹೋಲಿಸಿ ನೋಡಿದರೆ ಅಜಗಜಾಂತರ ವ್ಯತ್ಯಾಸವಿದೆ ಎಂಬುದನ್ನು ನಾವು ಪತ್ರಿಕೆಗಳಲ್ಲಿ ನೋಡಿದ್ದೇವೆ. ಆದರೆ ಯಾರಮೇಲೂ ಚೆಕ್ ಮಾಡುವುದಿಲ್ಲ. ನಿಜಪರಿಸ್ಥಿತಿ

ಗೊತ್ತಾಗುವುದಿಲ್ಲ. ಆದರೆ ಎಷ್ಟು ಉತ್ಪತ್ತಿ ಬಂತು, ಯಾವ ಉದ್ದೇಶದಿಂದ ಮಾಡಿದರು ಎಂಬುದನ್ನು ಹೇಳಬಹುದು.

ಇನ್ನು ಕಾಟೇಜ್ ಇಂಡಸ್ಟ್ರೀಸ್ ವಿಷಯ ನಮಗೆ ಅತ್ಯಂತ ಪ್ರಿಯವಾಗಿದೆ. ಏಕೆಂದರೆ ನಾವು ಗಾಂಧೀ ತತ್ವವನ್ನವಲಂಬಿಸಿರುವವರು ಎಂದು ಸಮತಾವಾದ ಸಮಾಜ ಸ್ಥಾಪನೆ ಮಾಡಲು ಹೊರಟಿದ್ದೇವೆ. ಮಾನ್ಯ ಹಣಕಾಸಿನ ಮಂತ್ರಿಗಳು ಕಾಟೇಜ್ ಇಂಡಸ್ಟ್ರೀಸ್‌ಗೋಸ್ಕರ ತಮ್ಮ ಭಾಷಣ ಮಾಡುವಾಗ Mat weaving is one of the essential industries which has no competition from factory made goods, ಎಂದು ಹೇಳಿದರು. ಬದನವಾಳ ಖಾದೀ ಭಂಡಾರಕ್ಕೆ 2,24,400 ರೂಪಾಯಿಗಳ ಪ್ರಾವಿಷನ್ ಇದೆ. ಐಮಂಗಲ ಖಾದಿ ಭಂಡಾರಕ್ಕೆ 3,11,600 ರೂಪಾಯಿಗಳ ಪ್ರಾವಿಷನ್ ಇದೆ. ಇಷ್ಟನ್ನು ಬಿಟ್ಟು ಬಿಟ್ಟರೆ ಇನ್ನು 30,200 ರೂಪಾಯಿಗಳು ಕಾಟೇಜ್ ಇಂಡಸ್ಟ್ರೀಸ್‌ಗೆಂದು ಇದೆ. ಹೀಗೆ ಇನ್ನೂ ಯಾವು ಯಾವುದೋ ಖಾದಿ ಪ್ರಚಾರ ಸಮಿತಿ, ಖಾದಿ ಡೆವಲಪ್‌ಮೆಂಟ್ ಕಮಿಟಿ, ಗ್ರಾಮೋದ್ಯೋಗ ಕಮಿಟಿ ಹೀಗೆ ಈ ಕಮಿಟಿಗಳಿಗೆಲ್ಲಾ ಸುಮಾರು ಆರುಲಕ್ಷ ರೂಪಾಯಿಗಳನ್ನು ಒದಗಿಸಿದ್ದಾರೆ. ಯಾರು ಕಾಂಗ್ರೆಸ್ಸಿನವರು ಎಂದು ಬಾಯಲ್ಲಿ ಹೇಳಿಕೊಳ್ಳುತ್ತಾರೋ ಅವರು ನಿಜವಾಗಿಯೂ ಗಾಂಧೀ ತತ್ವದ ಉದ್ದೇಶ ಸಾಧನೆಗಾಗಿ ಖಾದಿಹಾಕುತ್ತಿದ್ದಾರೆಯೇ? ಗಾಂಧೀಜಿಯವರ ಖಾದಿ ಉಪದೇಶ ಪ್ರಾರಂಭವಾದದ್ದು ನನಗೆ ಜ್ಞಾಪಕವಿರುವ ಹಾಗೆ ಸುಮಾರು 1921ನೆಯ ಇಸವಿಯಲ್ಲಿ ಎಂದು ಕಾಣುತ್ತದೆ. ಆ ಲಾಗಾಯಿತು ಇಲ್ಲಿಯವರೆಗೂ ಸ್ವಾವಲಂಬನ ಪದ್ಧತಿಯನ್ನು ಅನುಸರಿಸಿ ಯಾರಾದರೂ ಖಾದಿ ಬಟ್ಟೆಯನ್ನು ಅವರವರ ಮನೆಯಲ್ಲೇ ನೇಯ್ದು ಹಾಕಿಕೊಳ್ಳುತ್ತಿದ್ದಾರೆಯೇ ಅಂದರೆ ಅಂಥಾದ್ದೇನೂ ಕಾಣುವುದಿಲ್ಲ. ಗಾಂಧೀ ತತ್ವವನ್ನು ಪರಿಪಾಲಿಸುತ್ತಿರುವವರು ಖಾದಿಯ ಬಟ್ಟೆಯ ಮೇಲೆ ಪ್ರೀತಿಯನ್ನು ಇಟ್ಟುಕೊಳ್ಳಬೇಕು.

ಶ್ರೀ ಟಿ.ಮರಿಯಪ್ಪ (ಹಣಕಾಸಿನ ಶಾಖೆಯ ಮಂತ್ರಿಗಳು):- ನೀವು ನಮ್ಮ ಗುಂಪನ್ನು ಬಿಟ್ಟಿದ್ದು ಈಗ ಸ್ವಲ್ಪ ದಿವಸಗಳ ಹಿಂದೆ ತಾನೆ!

ಶ್ರೀ ಕೆ.ಕೆಂಚಪ್ಪ:- ಗಾಂಧಿ ಹೇಳಿದ್ದು ದೇಶಾಭಿವೃದ್ಧಿಗೋಸ್ಕರ. ತಮಗೆ ಇದು ಒಂದು ಬ್ಯಾಡ್ಜ್ ಆಗಿದೆ. ದೇಶದಲ್ಲಿ ಯಾವ ರೀತಿ ಪ್ರಜೆಗಳು ಬದುಕಬೇಕು, ಯಾವ ರೀತಿಯಾದರೂ ಉಪಕಸುಬುಗಳನ್ನು ಮಾಡಿ ತಮ್ಮ ಉತ್ಪತ್ತಿಯನ್ನು ಹೆಚ್ಚಿಗೆ ಮಾಡಿಕೊಳ್ಳಬೇಕು ಎಂಬುದನ್ನು ಅವರು ಹೇಳಿದ್ದಾರೆ. ಅವರು ವೃಥಾ ಖರ್ಚು ಮಾಡಬಾರದು ಎಂದು ಹೇಳಿದ್ದಾರೆ. ಇವೊತ್ತಿನ ದಿವಸ ಅವರು ಹೇಳಿದ ಉಪದೇಶಗಳಲ್ಲಿ ಒಂದು ಕಿರುಬೆರಳಿನಷ್ಟೂ ಕೂಡ ನೀವು ಮಾಡಲಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಯಾರು ಯಾರು ಖಾದಿ ಬಟ್ಟೆಯನ್ನು ನೇಯುತ್ತಾರೋ ಅವರಿಗೆ ಇನ್ನೂ ಖಾದಿಯನ್ನು ಚೆನ್ನಾಗಿ ಪ್ರಚಾರ ಮಾಡಲು ಮತ್ತು ಆ ಉದ್ಯಮಕ್ಕೆ ಹೆಚ್ಚು ಉತ್ತೇಜನ ಕೊಡಲು ಇನ್ನೂ ಸ್ವಲ್ಪ ಮೊಬಲಗನ್ನು ಒದಗಿಸಬೇಕು. ಕಾಟೇಜ್ ಇಂಡಸ್ಟ್ರೀಸ್ ಕಮಿಟಿಗೆ ಆಯ್ಕೆಯಾಗಿ ಗ್ರಾಮೋದ್ಯೋಗಗಳಲ್ಲಿ ಭಾಗವಹಿಸಿ ನಾನು ಬಹಳ ವರ್ಷಗಳಿಂದ ಕೆಲಸಮಾಡಿದ್ದೇನೆ.

ತಮಗೆ ಒಂದು ವಿಚಾರವನ್ನು ಕೇಳುತ್ತಿದ್ದೇನೆ. ಟ್ರೈನಿಂಗ್ ಸೆಂಟರಿಗೋಸ್ಕರ ಎಷ್ಟು ದುಡ್ಡನ್ನು ಖರ್ಚು ಮಾಡಿದ್ದೀರಿ. ಯಾವ ಉದ್ದೇಶಕೋಸ್ಕರ ಟ್ರೈನಿಂಗ್ ಕೊಟ್ಟಿದ್ದೀರಿ, ಇಂತಹ ಕೆಲಸಗಳು ಖಾಲಿ ಇವೆ ಬಹಳ ಜನ ಬೇಕಾಗಿವೆ ಎಂದು ಏನಾದರೂ ಸರ್ಕ್ಯುಲರ್ ಹೊರಡಿಸಿ ಬಡಜನರಿಗೆ ಅಪಾಯಿಂಟ್‌ಮೆಂಟ್ ಕೊಟ್ಟಿದ್ದೀರಾ? ಸುಮ್ಮನೆ ಏನೋ ಒಂದು ಮುಖದಾಕ್ಷಿಣ್ಯದಿಂದ ಗ್ರಾಮೋದ್ಯೋಗ ಸಮಿತಿ, ಅಂಬರ್ ಚರಕಾ ಸಮಿತಿಗಳಿಗೆ ಗ್ರಾಂಟುಗಳನ್ನು ಕೊಡುತ್ತಿದ್ದರೆ ಏನು ಪ್ರಯೋಜನ? ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟಿಗೆ ಆರ್ಡರ್ ಕೊಟ್ಟರೆ ಮಾಡುತ್ತಾರೆ. ಆ ರೀತಿ ಖಾದಿ ಅಭಿವೃದ್ಧಿ ಮಾಡಬೇಕೆಂದು ಹೇಳುತ್ತೇನೆ. ನಾವು ಪ್ರಾಮಾಣಿಕರಾಗಿರಬೇಕು. ಇಲ್ಲಿ ಜವಾನರ ತಲೆಯ ಮೇಲೆ ಖಾದಿ ಪೇಟ ನೋಡುತ್ತಿದ್ದೇವೆಯೇ? ಇಲ್ಲ. ಬರೀ ಜರೀ ಪೇಟ ಇದೆ.

ಶ್ರೀ ಟಿ.ಮರಿಯಪ್ಪ:- ಖಾದಿ ಪೇಟಾವನ್ನೂ ಹಾಕುತ್ತಾರೆ.

ಶ್ರೀ ಕೆ.ಕೆಂಚಪ್ಪ:- ಬರೀ ಜವಾನರುಗಳಿಗೇ ಮಾಡಿಸಿದ್ದೀರೋ? ಕೈಯಿಂದ ತಯಾರಿಸಿದ ಪೇಪರ್‌ಗೆ ಉತ್ತೇಜನ ಕೊಟ್ಟಿದ್ದೀರೋ? ಅದನ್ನು ಕೆಲವು ಗ್ರಾಮೋದ್ಯೋಗಗಳಲ್ಲಿ ಮಾಡುತ್ತಿದ್ದಾರೆ. ನಿಜವಾಗಿ ಗಾಂಧೀಜಿಯವರು ಹಾಕಿಕೊಟ್ಟ ತತ್ವವನ್ನು ಬದಲಾವಣೆ ಮಾಡುತ್ತಿದ್ದೀರಿ. ಇಂತಹ ನಟನೆ ಸರಿ ಹೋಗುವುದಿಲ್ಲ. ನಾವು ಪ್ರಾಮಾಣಿಕರಾಗಿರಬೇಕಾಗಿ ಬರುತ್ತದೆ. ಕೈಯಿಂದ ಮಾಡಿದ ಖಾದಿ ಬಟ್ಟೆಗಳನ್ನು ಉಪಯೋಗಿಸುವುದನ್ನು ಮೊದಲು ಕಲಿತುಕೊಳ್ಳಬೇಕು. ನಾನು ಹೆಚ್ಚಿಗೆ ಹೇಳುವುದಕ್ಕೆ ತಯಾರಾಗಿಲ್ಲ_.. ನಾವು ಮೊದಲು ಪ್ರಾಮಾಣಿಕರಾಗಿರಬೇಕು. ಮುಖ್ಯವಾಗಿ Training and Educational Centres in regard to Khadi ಮತ್ತು Manufacturing of utilitarian glass wares, development of pottery ಇವಕ್ಕೆ ಮೊದಲು ಗಮನ ಕೊಡಬೇಕು. ಇವೆಲ್ಲವನ್ನೂ ಜನಸಾಮಾನ್ಯರು ಉಪಯೋಗಿಸುತ್ತಾರೆ. ಕಾಂಪಿಟೇಶನ್ ಮೂಲಕ ಎಷ್ಟೋ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಬಹುದು. ಖಾದಿಜೊತೆಗೆ ಮ್ಯಾಟ್ ವೀವಿಂಗ್,ಇಂಡಸ್ಟ್ರೀಸ್‌ಗೆ ಉತ್ತೇಜನಕೊಡಿ.ಮ್ಯಾಟ್ ವೀವಿಂಗ್ ಊದುಬತ್ತಿ ಇವೆಲ್ಲವೂ ಕೈಯಿಂದ ಆಗುವ ಕೈಗಾರಿಕೆಗಳು. ಇವೆಲ್ಲವೂ ಉತ್ಪಾದನಾ ದೃಷ್ಟಿಯಿಂದ ಜನಗಳಿಂದ ನಡೆಯತಕ್ಕವು. ಸಮಾಜದಲ್ಲಿ ಕೈಗಾರಿಕೆಗಳು ಈ ರೀತಿಯಲ್ಲೂ ಅಭಿವೃದ್ಧಿಯಾಗಬೇಕು. ಚಿತ್ರದುರ್ಗದಲ್ಲಿ ಮ್ಯಾಟ್‌ವೀವಿಂಗ್ ಇಂಡಸ್ಟ್ರೀಸ್ ಚೆನ್ನಾಗಿ ನಡೆಯುತ್ತಿದೆ. ಡಿಸ್ಟ್ರಿಕ್ಟ್ ಬೋರ್ಡ್‌ನವರು ಇದನ್ನು ಮ್ಯಾನೇಜ್ ಮಾಡುವಾಗ ಬಹಳಜನರು ಈ ಕೈಗಾರಿಕೆಯಿಂದಲೇ ಜೀವಿಸುತ್ತಿದ್ದರು. ಈಗ ಈ ಕೈಗಾರಿಕೆಯನ್ನು ಮಾಡುವವರು ಅಲ್ಲಿ ಎಷ್ಟುಜನರಿದ್ದಾರೆಂಬುದನ್ನು ಸರ್ಕಾರದವರು ಅಂಶಗಳನ್ನು ತಗೆದುಕೊಂಡು ಈ ಕೈಗಾರಿಕೆಗೆ ತಕ್ಕ ಪ್ರೋತ್ಸಾಹವನ್ನು ಕೊಡಬೇಕು. Mat weaving is one of the essential industries which has no competition from factory-made goods. ಈ ಕೈಗಾರಿಕೆ ಮುಖ್ಯವಾಗಿ ಡೆವಲಪ್ ಆಗಬೇಕಾಗಿದೆ. ಕೈಗಾರಿಕಾ ಕ್ಷೇತ್ರದಲ್ಲಿ ಇದೂ ಒಂದು ಪ್ರಾಮುಖ್ಯವಾದ ಸ್ಥಾನವನ್ನು ಹೊಂದಿದೆ. ಖಾದಿ ಕೈಗಾರಿಕೆ

ಸ್ವಾವಲಂಬನ ಪದ್ಧತಿಯಮೇಲೆ ನಡೆಯಬೇಕೆಂದು ಗಾಂಧೀಜಿ ಹೇಳಿದ್ದರೂ ಸರ್ಕಾರ ಈ ಸಂಬಂಧದಲ್ಲಿ ಏನೂ ಮಾಡಲಿಲ್ಲ. ಯಾವ ಗೃಹ ಕೈಗಾರಿಕೆಗಳಿಗೆ ಯಂತ್ರಗಳಿಂದ ಪೈಪೋಟಿ ಇದೆಯೋ ಅವಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡಬೇಕು. ಆಗ ಈ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತವೆ. ತಮಗೆ ಖಂಡಿತವಾಗಿ ಖಾದಿಯ ಅಭಿವೃದ್ಧಿ ವಿಚಾರದಲ್ಲಿ ನಂಬಿಕೆ ಇಲ್ಲ. 1948 ನೇ ಇಸವಿಯಲ್ಲಿ ಖಾದೀ ಉದ್ಯಮ ಪ್ರಚಾರಕ್ಕಾಗಿ ಕಾಂಗ್ರೆಸ್ಸಿನವರು ಒಂದು ಎನ್‌ಕ್ವೈರಿಕಮಿಟಿಯನ್ನು ಮಾಡಿದರು. ಆದರೂ ನಮ್ಮ ದೇಶದಲ್ಲಿ ಖಾದಿ ಅಭಿವೃದ್ಧಿಯಾಗುವ ವಿಚಾರದಲ್ಲಿ ನಮಗೆ ನಂಬಿಕೆಯಿಲ್ಲ. ಸರ್ಕಾರಕ್ಕೆ ಖಾದಿಯಲ್ಲಿ ನಿಜವಾಗಿಯೂ ನಂಬಿಕೆ ಇದ್ದರೆ ಅದರ ಅಭಿವೃದ್ಧಿಗೆ ಹೆಚ್ಚಿನ ಹಣವನ್ನು ಒದಗಿಸಲಿ ಇಲ್ಲದಿದ್ದರೆ ಆ ಉದ್ಯಮವನ್ನು ವಜಾ ಮಾಡಲಿ, ಎಂದು ಹೇಳುತ್ತೇನೆ.

ಡಿಸ್ಟ್ರಿಕ್ಟ್ ಬೋರ್ಡಿನಲ್ಲಿ ಏನಾದರೂ ಖಾದಿ ಅಭಿವೃದ್ಧಿಮಾಡ ಬಾರದು ಎಂದು ಹೇಳಿದ್ದರೆ ಹೇಳಿ. ಖಾದಿ ಕಮಿಟಿಯಿಂದ ಎಷ್ಟೋ ಜನಕ್ಕೆ ಉಪಯೋಗವಾಗುತ್ತದೆ ಎಂದು ಹೇಳಿದರು. ಏತಕ್ಕೆ ಈ ಬೂಟಾಟಿಕೆ ಸ್ವಾಮಿ. ಖಂಡಿತಾ ಹೇಳುತ್ತೇನೆ, ನಂಬಿಕೆ ಇದ್ದರೆ ಮಾಡಿ, ಇಲ್ಲದಿದ್ದರೆ ಬಿಡಿ. ಆದರೆ ಹೇಳುವುದೊಂದು ಮಾಡುವುದೊಂದು ಇರಬಾರದು. ಖಾದಿ ಉದ್ಯಮಕ್ಕೆ ಕೊಟ್ಟಿರತಕ್ಕ ದುಡ್ಡು ಬಹಳ ಕಡಿಮೆಇದೆ ಎಂದು ಕಳಕಳಿಯಿಂದ ಹೇಳುತ್ತಿದ್ದೇನೆ. ಇದನ್ನು ಖಂಡಿತವಾಗಿಯೂ ಮಾನವೀಯತೆಯಿಂದ ಯೋಚನೆಮಾಡಬೇಕಾಗಿ ಬರುತ್ತದೆ. ನಾವು ಸ್ವಾವಲಂಬನದೃಷ್ಟಿಯಿಂದ ದುಡ್ಡು ಖರ್ಚು ಮಾಡಬೇಕು. ಯಾರು ಪ್ರತಿಯೊಬ್ಬರೂ ನೂಲುತ್ತಾರೋ, ಅವರಲ್ಲಿ ಪ್ರಚಾರ ಕಾರ್ಯಮಾಡಿ ಎಷ್ಟುಮಟ್ಟಿಗೆ ಉಪಯೋಗವಾಗಿದೆ ಎಂದು ಅಂಕಿ ಅಂಶಗಳನ್ನು ಕೊಡಿ. ಸುಮ್ಮನೆ ಕಮಿಟಿ ಮಾಡಿರುವುದರಿಂದ ಏನು ಪ್ರಯೋಜನ ಸ್ವಾಮಿ? These are times of plans by scheming people.

**Sri V.P. Deenadayalu Naidu** (Cubbonpet) :- I just want to pass on one information to him. This is what is stated in the Report on Industry in Mysore:

"The development of rural and cottage industries has thus been a special feature of the policy of Government in recent years. The Mysore Government is unique in regarding the deveolpment of the Khadi industry as falling within the sphere of the State's activities and in giving it a place among the key isndustries."

ಶ್ರೀ ಕೆ.ಕೆಂಚಪ್ಪ:- ಇನ್ನು ಹೆಚ್ಚಿಗೆ ಹೇಳುವುದಿಲ್ಲ. These are days of preparing plans by scheming people. We have got to be careful.........

ಇನ್ನು ಕೈಗಾರಿಕೆಗಳ ವಿಚಾರ ನೋಡಿದರೆ ಒಂದು ವಿಷಯ ಮನಸ್ಸಿಗೆ ಬರುತ್ತದೆ. ಅದನ್ನು ಕೊನೆಯಲ್ಲಿ ಹೇಳಿ ಮುಗಿಸುತ್ತೇನೆ. ಅದು ಬರೀ ನೀರಿನ ನಲ್ಲಿ ಸ್ವಾಮಿ.

* * * * *

# ಮಂತ್ರಿಗಳ ಸಂಬಳ?

**18 ಜುಲೈ 1957**

ಶ್ರೀ ಕೆ.ಕೆಂಚಪ್ಪ (ಹಿರಿಯೂರು):- ಮಾನ್ಯ ಅಧ್ಯಕ್ಷರೆ, ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆಯ ಸಂಬಂಧದಲ್ಲಿ 2,20,52,900 ರೂಪಾಯಿಗಳನ್ನು ಮೀಸಲಾಗಿಡತಕ್ಕ ವಿಚಾರದಲ್ಲಿ ಈಗ ನಾವು ಕೆಲವು ಅಭಿಪ್ರಾಯಗಳನ್ನು ಕೊಡಬೇಕಾಗಿದೆ. ಇದರಲ್ಲಿ ನಮ್ಮ ಮಂತ್ರಿಗಳ ಸಂಬಳದ ಬಗ್ಗೆ 5,52,600 ರೂಪಾಯಿಗಳನ್ನು ಕೊಡಬೇಕೆಂದು ಕೇಳಿದ್ದಾರೆ.

ಈ ವಿಚಾರಗಳಲ್ಲಿ ನಾವು ಒಂದೊಂದನ್ನು ನೋಡುತ್ತಾ ಹೋದರೆ ಆಫೀಸರುಗಳ ಸಂಬಳಸಾರಿಗೆಗೆ 1,40,400 ರೂಪಾಯಿಗಳು ಖರ್ಚಾಗಬೇಕಾಗುತ್ತದೆ, ಅಫಿಷಿಯಲ್ ರೆಸಿಡೆನ್ಸ್‌ಗೆ 2,600 ರೂಪಾಯಿಗಳನ್ನು ಕೊಡಬೇಕು, upkeep repair ಸಿಬ್ಬಂದಿ, ಮೋಟಾರು ಕಾರುಗಳು, ಗ್ಯಾರೇಜುಗಳು ವಗೈರಿಗೆ 14,900 ರೂಪಾಯಿಗಳನ್ನು ಕೊಡಬೇಕು, ಅಲೋಯನ್ಸಸ್ ಮತ್ತು ಆನರೇರಿಯಗಳಿಗೆ, ಟಿ.ಎ.ಗೆ 85 ಸಾವಿರ ರೂಪಾಯಿಗಳು, ಫಿಕ್ಸೆಡ್ ಟಿ.ಎ.ಗೆ 33,600 ರೂಪಾಯಿಗಳು, ಹೀಗೆ 5,52,600 ರೂಪಾಯಿಗಳನ್ನು ಖರ್ಚುಮಾಡುವುದಕ್ಕೆ ಡಿಮ್ಯಾಂಡ್ ಮನವಿಯನ್ನಿಟ್ಟಿದ್ದಾರೆ.

ಈಗ ನಮ್ಮ ಮೈಸೂರು ಸಂಸ್ಥಾನದಲ್ಲಿ ಹೆಚ್ಚು ಜನ ಮಂತ್ರಿಗಳನ್ನು ನೇಮಕಮಾಡಿದ್ದಾರೆಂದು ನನಗೆ ಎನ್ನಿಸುತ್ತದೆ. ಮೈಸೂರು ಸಂಸ್ಥಾನಕ್ಕೆ ಎಷ್ಟು ಜನ ಮಂತ್ರಿಗಳು ಬೇಕಾಗಿತ್ತು. ಮೊದಲೆಷ್ಟು ಜನರಿದ್ದರು, ಈಗೆಷ್ಟು ಜನರಿಗೆ ಕೆಲಸವಿದೆ ಎಂಬುದನ್ನು ಸರಿಯಾಗಿ ತೀರ್ಮಾನ ಮಾಡಿ ಅದಕ್ಕನುಗುಣವಾಗತಕ್ಕಷ್ಟು ಮಂತ್ರಿಗಳನ್ನು ಮಾತ್ರ ತೆಗೆದುಕೊಳ್ಳಬೇಕಾಗಿತ್ತು. ಇದನ್ನು ನಾನು ಬಹಳ ನಮ್ರತೆಯಿಮದ ಸೂಚಿಸುತ್ತಿದ್ದೇನೆ. ನನಗೆ ತಿಳಿದಮಟ್ಟಿಗೆ ಪರಿಶೀಲಿಸಿ ನೋಡಿದರೆ ಈಗ ಸಾಕಷ್ಟು ಕೆಲಸ ನಡೆಯುತ್ತಿಲ್ಲ. ಪ್ರತಿನಿತ್ಯ. ಒಬ್ಬ ಮಂತ್ರಿಗಳು ಎಷ್ಟರಮಟ್ಟಿಗೆ ಫೈಲು ನೋಡಿ ಆರ್ಡರು ಪಾಸು ಮಾಡುತ್ತಾರೆಂಬುದನ್ನು ಕೂಡ ನಾವು ಆಲೋಚಿಸಬೇಕಾಗಿದೆ, ಕೆಲವಾರು ಸಂದರ್ಭಗಳಲ್ಲಿ ವಾರಗಟ್ಟಲೆ ಮಂತ್ರಿಗಳು ಹೆಡ್‌ಕ್ವಾರ್ಟರ್ಸ್‌ನಲ್ಲಿದ್ದರೂ ಸಹ ಒಂದು ಆರ್ಡರನ್ನು ಕೂಡ ಪಾಸುಮಾಡದಿರುವ ಅಥವಾ ಒಂದು ಪೇಪರನ್ನೂ ನೋಡದಿರುವ ಸಂದರ್ಭಗಳು ಬೇಕಾದಷ್ಟು ಇವೆಯೆಂಬುದು ನಮಗೆ ತಿಳಿದುಬಂದಿದೆ.

ಶ್ರೀ ಆರ್.ಚೆನ್ನಿಗರಾಮಯ್ಯ (ಸ್ಥಳೀಯ ಸಂಸ್ಥೆಗಳ ಮಂತ್ರಿಗಳು):- ಖಾಯಿಲೆ ಬಿದ್ದಾಗ.

ಶ್ರೀ ಕೆ.ಕೆಂಚಪ್ಪ:- ಆಫೀಸಿಗೆ ಹಾಜರಾದಾಗಲೂ ಕೂಡ ಪೇಪರ್ ನೋಡದಿರುವ ಸಂದರ್ಭಗಳಿವೆ. ಮಂತ್ರಿಗಳಾದ ಮೇಲೆ ಸರಿಯಾಗಿ ಅವರ ಕೆಲಸ ಮಾಡುತ್ತಾರೆಂಬ ಭಾವನೆಯಿತ್ತು. ಆದರೆ ಆ ರೀತಿಮಾಡುತ್ತಿರುವಂತೆ ಕಾಣಲಿಲ್ಲ. ಆದರೆ ಆ ರೀತಿ

ಮಾಡುತ್ತಿರುವಂತೆ ಕಾಣಲಿಲ್ಲ. ತಮಗೆ ದೊರೆತಿರುವ ಮಂತ್ರಿ ಪದವಿಗೆಲ್ಲಿ ಚ್ಯುತಿ ಬಂದಿತೋ ಎಂದು ಅದನ್ನು ಕಾಪಾಡಿಕೊಳ್ಳುವುದಕ್ಕಾಗಿ ಬಹುಮತದ ಜನರನ್ನು ಸಮಾಧಾನಪಡಿಸುವುದಕ್ಕೆ ಬೇಕಾದ ಕೆಲಸಗಳನ್ನು ಮಾಡುವುದರಲ್ಲೇ, ಅದರ ಯೋಚನೆಯಲ್ಲೇ ಬಹಳ ಕಾಲ ಕಳೆಯುತ್ತಿರುವಂತೆ ಕಂಡುಬರುತ್ತಿದೆ. ಹಿಂದಿನಂತೆ ಎಲ್ಲಿ ಅವಿಶ್ವಾಸ ಸೂಚನೆ ಬರುವುದೋ ಎಂದು ಯೋಚಿಸಿ ಅದಕ್ಕವಕಾಶವಿಲ್ಲದಂತೆ ತಮ್ಮ ತಮ್ಮ ಸ್ಥಾನಗಳನ್ನು ಖಾಯಂ ಮಾಡಿಕೊಳ್ಳುವುದರಲ್ಲೇ ಬಹಳ ಕಾಲವನ್ನು ವಿನಿಯೋಗಿಸುತ್ತಿದ್ದಾರೆ. ಯಾವ ಹವ್ಯಾಸವನ್ನೂ ಇಟ್ಟುಕೊಳ್ಳದೆ ಮಂತ್ರಿಗಳು ದೇಶದ ಪ್ರಗತಿಗಾಗಿಯೇ ಯಾವಾಗಲೂ ತಮ್ಮ ಕಾಲವನ್ನು ವಿನಿಯೋಗಿಸುತ್ತಿರುವರೇ ಎಂದು ನೋಡಿದರೆ ಆ ಕಡೆ ಅಷ್ಟು ಮನಸ್ಸಿದಂತೆ ಕಾಣಲಿಲ್ಲ. ಅದರ ಬದಲು 24 ಗಂಟೆಗಳೂ ಯಾವಾಗಲೂ ತಮ್ಮ ಸ್ಥಾನ ಭದ್ರತೆ ಮಾಡಿಕೊಳ್ಳುವ ಹವ್ಯಾಸದಲ್ಲೇ ತೊಡಗಿರುವುದರಿಂದ ಈ ವಿಚಾರವನ್ನು ಆಲೋಚನೆ ಮಾಡಬೇಕಾಗಿ ಬಂದಿದೆ. ಈಗ ಇಲ್ಲಿ ಟಿ.ಎ., ಫಿಕ್ಸೆಡ್ ಟಿ.ಎ., ಎಚ್.ಪಿ ಮತ್ತು ಡಿ.ಎ.ಗೆ ಹಣ ಒದಗಿಸಲಾಗಿದೆ. ಇದನ್ನು ನೋಡಿ ಬಹಳ ವ್ಯಸನದಿಂದ ಹೇಳುತ್ತಿದ್ದೇನೆ; ನಮ್ಮ ಮಂತ್ರಿಗಳ ಪ್ರವಾಸ ಕಾರ್ಯದ ಬಗ್ಗೆ ನನಗೂ ಸಹ ಒಂದು ಪಟ್ಟಿ ಬಂತು. ಆದರೆ ಅದರಲ್ಲಿ ಏನು ಕೆಲಸಮಾಡುತ್ತಾರೆ. ಯಾವ ಸ್ಥಳಕ್ಕೆ ಹೋಗುತ್ತಾರೆ ಎಂಬುದು ನಮೂದಾಗಿರಲಿಲ್ಲ, Inspection of Hospitals, etc., ಎಂದು ಮಾತ್ರ ಇತ್ತು. ಹೋಗಿ ಏನು ಮಾಡುತ್ತಾರೋ ದೇವರಿಗೇ ಗೊತ್ತಾಗಬೇಕು. ನಾನು ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟಾಗಿದ್ದಾಗ ಮಂತ್ರಿಗಳ ಜೊತೆಯಲ್ಲಿ ಹೋಗಿದ್ದೆ. ಆದರೆ ಅವರು ಏನು ಮಾಡಿದ್ದೂ ಕಾಣಲಿಲ್ಲ. ನನಗೆ ಬಂದಿರುವ ಪಟ್ಟಿ ಈಗ ನನ್ನಲ್ಲಿದೆ; ಬೇಕಾದರೆ ನೋಡಬಹುದು. ನನಗೆ ಈಗ ಸ್ವಲ್ಪ ಕಾಲ ಮಾತ್ರವಿರುವುದರಿಂದ ಅದನ್ನು ಓದಲು ಸಾಧ್ಯವಿಲ್ಲ. ನಿನ್ನೆಯ ದಿವಸ ಒಂದು ಪ್ರಶ್ನೆಗೆ ಉತ್ತರ ಕೊಡುವಾಗ ಸಾರ್ವಜನಿಕ ಹಿತದೃಷ್ಟಿಯಿಂದ ಬೇಕಾದ ಕೆಲಸ ಮಾಡಲು ಪ್ರವಾಸ ಮಾಡುವುದಾಗಿ ಅಪ್ಪಣೆ ಕೊಡಿಸಿದರು. ಹೇಳುವುದು ಸುಲಭ; ಸಾರ್ವಜನಿಕ ಹಿತದೃಷ್ಟಿಯಿಂದ ಹೋಗುತ್ತೇವೆ ಎಂದು ಎಲ್ಲರೂ ಹೇಳಬಹುದು. ಆದರೆ ಸಾರ್ವಜನಿಕ ಹಿತದೃಷ್ಟಿಯಿಂದ ಹಿಂದೆ ಕೆಲಸಮಾಡಲು ಸರ್ಕಾರದವರು ಮೂರು ವರ್ಷಗಳಿಗೊಂದು ಸಲ ಅಥವಾ ನಾಲ್ಕು ವರ್ಷಗಳಿಗೊಂದು ಸಲ ಪ್ರವಾಸ ಕಾರ್ಯಕ್ರಮಗಳನ್ನು ನಿಗದಿ ಮಾಡಬೇಕೆಂದು ನಿಯಮವಿತ್ತು. ಅರ್ಜಿಗಳನ್ನು ಕೊಟ್ಟಿದ್ದರೆ ಆ ವಿಚಾರದಲ್ಲೇನು ಮಾಡಬೇಕೆಂದು ಯೋಚಿಸಿ ಸಾಧ್ಯವಾದರೆ ಇರುವ ಕಡೆಯೇ ಅದನ್ನು ಇತ್ಯರ್ಥ ಮಾಡುತ್ತಿದ್ದರು. ಸಾಧ್ಯವಿಲ್ಲದಿದ್ದರೆ ಸ್ಥಳಕ್ಕೆ ಹೋಗಬೇಕಾದ ಪ್ರಮೇಯ ಬಂದರೆ ಪ್ರವಾಸ ಹೋಗಲು ಮತ್ತು ಬೇಕಾದ ಕೆಲಸ ಮಾಡಿಕೊಡಲು ಹಣವಿದೆಯೆ, ಇಲ್ಲವೆ ಎಂಬುದನ್ನು ಕ್ಯಾಬಿನೆಟ್‌ನಲ್ಲಿ ಚರ್ಚಿಸಿ ಆಮೇಲೆ ಇಂಥ ಸ್ಥಳಗಳಿಗೆ ಹೋಗಬೇಕೆಂದು ಒಂದು ನಿಗದಿಯಾದ ಕಾರ್ಯಕ್ರಮ ಹಾಕುತ್ತಿದ್ದರು. ಈ ದಿವಸ ಅದು ಇಲ್ಲ. ಅದು ಮಾಯವಾಗಿದೆ. ಯಾವ ಕೆಲಸಕ್ಕಾಗಿ ಹೋಗುತ್ತಾರೆಂಬುದೇ ಗೊತ್ತಾಗುವುದಿಲ್ಲ; ಒಂದೊಂದು ವೇಳೆ ಏನೂ ಕೆಲಸವಿಲ್ಲದೆ ಏಕಾಏಕಿ ಹೋಗುವುದೂ ಉಂಟು. ಮಂತ್ರಿಗಳು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕಾದರೆ ಅನಿರೀಕ್ಷಿತ ಭೇಟಿ

ಕೊಡುವುದು ಅತ್ಯಾವಶ್ಯಕವಾಗಿರಬಹುದು. ಆದರೆ ಹಾಗೆ ಹೋಗುವುದಿಲ್ಲ. ಆದ್ದರಿಂದ ನಾನು ಒಂದೇ ಒಂದು ನಿಗದಿಯಾದ ಪ್ರಶ್ನೆಯನ್ನು ಕೇಳುತ್ತಿದ್ದೇನೆ; ಅದೇನೆಂದರೆ, ಮಂತ್ರಿಮಂಡಲದ ಜಂಟೀ ಜವಾಬ್ದಾರಿಯಿರುವಾಗ, ಪ್ರತಿಯೊಬ್ಬ ಮಂತ್ರಿಗಳಿಗೂ ಜವಾಬ್ದಾರಿಯಿರುತ್ತದೆ; ಹಾಗಿರುವಾಗ ಏಕ ಕಾಲದಲ್ಲಿ ಮೂರು ನಾಲ್ಕು ಜನ ಮಂತ್ರಿಗಳು ಒಂದೇ ಸ್ಥಳಕ್ಕೆ ಹೋಗಿ ಇನ್‌ಸ್ಪೆಕ್ಷನ್ ಮಾಡಿ ಟಿ.ಎ. ತೆಗೆದುಕೊಳ್ಳುವುದು ದೇಶದಲ್ಲಿ ಏನೋ ಒಂದು ರೀತಿಯ ಭಾವನೆಯುಂಟಾಗುವುದಕ್ಕೆ ಎಡೆಕೊಟ್ಟಿದೆ. ಒಂದೆ ಸ್ಥಳಕ್ಕೆ ಒಂದೇ ಕಾಲದಲ್ಲಿ ಇಬ್ಬರು ಮೂವರು ಮಂತ್ರಿಗಳೇಕೆ ಹೋಗಬೇಕು? ಒಬ್ಬ ಮಂತ್ರಿಗಳು ಹೋದರೆ ಸಾಲದೆ? ಇದು ಸರಿಯಾದ ವಿಧಾನವೇ? ಹಣವೆಷ್ಟು ಖರ್ಚು! ಬೆಳಗ್ಗೆ ನೋಟೀಸ್ ಕಳುಹಿಸಿ ಸಾಯಂಕಾಲ ಹೋಗುವ ಪ್ರಮೇಯವಾದರೂ ಏನು? ಹಾಗೆ ಮಾಡುವುದು ಸಾಧುವೆ? ಇದು ಒಂದು ನಿಗದಿಯಾದ ಕ್ರಮವಲ್ಲ. ಈ ಸಂಬಂಧವಾಗಿ ಒಂದು ಪ್ರಶ್ನೆ ಹಾಕಿದರೂ ಸಹ ಅದಕ್ಕೂ ಸರಿಯಾದ ಉತ್ತರ ದೊರೆಯಲಿಲ್ಲ. ದೇಶದ ಹಿತದೃಷ್ಟಿಯಿಂದ ಸಾರ್ವಜನಿಕ ಅಭಿವೃದ್ಧಿ ಕಾರ್ಯಗಳಿಗಾಗಿ ಹೋಗುತ್ತೇವೆಂದು ಹೇಳುತ್ತಾರೆ. ಆದರೆ ಹೀಗೆ ಮಾಡುವುದರಿಂದ ಸಾಕಷ್ಟು ಸಹಾಯವಾಗುವುದಿಲ್ಲ. ಇನ್ನು ಮುಂದಾದರೂ ತಾವುಗಳೆಲ್ಲರೂ ಪ್ರವಾಸ ಕಾರ್ಯಕ್ರಮವನ್ನು ಸರಿಯಾಗಿ ನಿಗದಿಮಾಡಿ ಅದರ ಪ್ರಕಾರ ಪ್ರವಾಸ ಕೈಕೊಂಡು ಒಂದು ಭದ್ರವಾದ ಸರ್ಕಾರವಿರುವಂತೆ ಮಾಡಿ ರಾಜ್ಯಭಾರ ನಡೆಸಬೇಕು. " ಲೀಚ್ ಲೈಕ್" ಎಂದು ಇಂಗ್ಲೀಷಿನಲ್ಲಿ ಹೇಳುವ ಹಾಗೆ ಹಿಡಿದುಕೊಂಡಿರುವುದನ್ನು ಬಿಡಬಾರದೆಂದು ಅದನ್ನೇ ಯೋಚನೆ ಮಾಡುವ ಹವ್ಯಾಸವಿರಬಾರದು. ಮಹಾತ್ಮಾಗಾಂಧಿ ಅವರ ಶಿಷ್ಯರೆಂದು ಹೇಳಿಕೊಳ್ಳುತ್ತಿದ್ದೇವೆ. ಅದಕ್ಕೆ ತಕ್ಕಂತೆ ಅವರ ಮಾರ್ಗದರ್ಶನ, ತ್ಯಾಗ, ಬಲಿದಾನ, ಕಷ್ಟ , ಸೇವೆ, ಸತ್ಯ, ಅಹಿಂಸೆ ಈ ದೃಷ್ಟಿಯಿಮದ ಇವೆಲ್ಲವುಗಳ ಆತ್ಮ ಪರಿಶೋಧನೆ ಮಾಡಿಕೊಳ್ಳಬೇಕಾಗಿದೆ. ನಿಜವಾಗಿಯೂ ಈಗ ಮಂತ್ರಿಗಳಾಗಿರುವವರು ದೇಶಸೇವೆ ಮಾಡುತ್ತಿದ್ದೇವೆಯೇ ಎಂದು ಪರಿಶೋಧನೆ ಮಾಡಿಕೊಂಡು ನೋಡಬೇಕು. ಯಾವಾಗಲೂ ತಮ್ಮ ಸ್ಥಾನಮಾನಗಳನ್ನು ಭದ್ರಮಾಡಿಕೊಳ್ಳಬೇಕೆಂಬ ಹವ್ಯಾಸವಿದ್ದರೆ ದೇಶಸೇವೆಯಾಗುವುದಿಲ್ಲ ಆದ್ದರಿಂದ ಇನ್ನು ಮುಂದಾದರೂ ಅವಿಶ್ವಾಸ ಸೂಚನೆಯ ಭಯದಿಂದ ಕೆಲಸಮಾಡುವುದು ಕೂಡದು; ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಬೇಕಾದದ್ದು ಅಗತ್ಯ. ಹಾಗೆಮಾಡಿ ಇದುವರೆಗೆ ಎಡೆಕೊಟ್ಟಿರುವ ಭಾವನೆಗಳನ್ನು ಹೋಗಲಾಡಿಸಬೇಕು. ನಮ್ಮ ದೇಶದ ಪ್ರಗತಿಯಾಗಲೆಂಬ ದೃಷ್ಟಿಯಿಂದ, ಹಾಗಾಗಿ ನಾವೆಲ್ಲರೂ ಸಂತೋಷಪಡೋಣ ಎಂಬ ದೃಷ್ಟಿಯಿಂದ ಇದನ್ನೆಲ್ಲಾ ನಾನು ಹೇಳುತ್ತಿದ್ದೇನೆ. ಈಗಲೂ ಮಂತ್ರಿಗಳು ವಿಚಾರಮಾಡುವುದು ಬಹಳವಿದೆ. ಏಕೆಂದರೆ ಈಗಿರುವ ನ್ಯೂನತೆಗಳು ಅನೇಕವಾಗಿ ತಲೆ ಭಾರವಾಗಿವೆ. ಕಾರು ರಿಪೇರಿಗೆ, ಮನೆ ರಿಪೇರಿ ವಗ್ಯೆರೆಗೆ ವಿಪರೀತ ಖರ್ಚಾಗುತ್ತಿದೆ. ಇದನ್ನು ಇಷ್ಟಕ್ಕೆ ಬಿಡುತ್ತೇನೆ: ಹೆಚ್ಚಾಗಿ ಹೇಳುವುದು ಬೇಡ. ಈ ವಿಚಾರದಲ್ಲಿ ನಾನು ಬೇಕಾದಷ್ಟು ಯೋಚನೆಮಾಡಿ ಕಡೆಯಲ್ಲಿ ಅಧಿಕಾರದಲ್ಲಿರುವುದಕ್ಕಿಂತ ಅಧಿಕಾರದ ಹೊರಗಿದ್ದು ಅದರ ರುಚಿ ನೋಡುವುದು ಚೆನ್ನ, ಎಂದು ತೀರ್ಮಾನಕ್ಕೆ ಬಂದಿದ್ದೇನೆ. ಇಷ್ಟು ಹೇಳಿ ಮುಂದಕ್ಕೆ ಹೋಗುತ್ತೇನೆ. ಇನ್ನೊಂದು ವಿಚಾರ ಹೇಳುತ್ತೇನೆ.

ಈ ರಾಜ್ಯಭಾರದಲ್ಲಿ ಅತ್ಯಧಿಕವಾದ ಸಂಬಳ ಎಷ್ಟಿರಬೇಕು, ಅತಿಕಡಮೆ ಸಂಬಳ ಎಷ್ಟಿರಬೇಕು ಎನ್ನುವ ವಿಚಾರವನ್ನು ಹಿಂದಿನ ಅಸೆಂಬ್ಲಿಯಲ್ಲಿ ತೆಗೆದುಕೊಂಡಿದ್ದೆವು. ಯಾರಿಗೂ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಗೆ ಸಂಬಳ ಇರಬಾರದು ಎಂಬುದನ್ನು ಒಂದು ಪೇಸ್ಟ್ರಕ್‌ಚರ್ ಕಮಿಟಿ ಮಾಡಿ ಅದರಲ್ಲಿ ವಿಚಾರ ಮಾಡಿ ತೀರ್ಮಾನಿಸಿದ್ದಾರೆ. ಇದನ್ನು ಇನ್ನೂ ಕಾರ್ಯಗತ ಮಾಡದಿರುವುದು ಬಹಳ ವ್ಯಸನಕರವಾದ ವಿಷಯವಾಗಿದೆ. ಅಸೆಂಬ್ಲಿಯಲ್ಲಿ ತೀರ್ಮಾನವಾದುದಕ್ಕೆ ವಿರುದ್ಧವಾಗಿ ಆಡಳಿತದಲ್ಲಿ ಇದರ ಬಗ್ಗೆ ಶಿಫಾರಸ್ಸು ಮಾಡಿದ್ದಾರೆ. ಅಸೆಂಬ್ಲಿಯಲ್ಲಿ ಇದರ ಬಗ್ಗೆ ಶಿಫಾರಸ್ಸು ಮಾಡಿದ್ದಾರೆ. ಅಸೆಂಬ್ಲಿಯಲ್ಲಿ ಯಾರಿಗು ಒಂದು ಹೇಳಿದ್ದರೂ ಒಂದು ಸಾವಿರ ರೂಪಾಯಿ ಸಂಬಳಕ್ಕೆ ಮೇಲ್ಪಟ್ಟು ಬರತಕ್ಕ ಅಧಿಕಾರಿಗಳು ಎಂದರೆ ಐ.ಎ.ಐ ಮತ್ತು ಐ.ಕಐ ಅಧಿಕಾರಿಗಳನ್ನು ಬಿಟ್ಟು ಬಿಟ್ಟರೆ, ಬಾಕಿ 13 ಜನರು ಮಾತ್ರ ಇದ್ದಾರೆ. ಈಗ ಕಡಮೆ ಸಂಬಳ ತೆಗೆದುಕೊಳ್ಳುವವರಿಗೆ ಹೆಚ್ಚು ಸಂಬಳ ಬರುವಂತೆ ಏನಾದರೂ ಒಂದು ಪ್ರಯತ್ನ ಮಾಡಬೇಕು. ಕೊನೆಗೆ 40 ರೂಪಾಯಿಗಳಿಗಿಂತ ಹೆಚ್ಚಿಗೆ ಕೊಡುವುದಕ್ಕೆ ಸಾಧ್ಯವಿಲ್ಲವೆಂದು ಅದರಲ್ಲಿ ಹೇಳಿದ್ದಾರೆ. ಕನಿಷ್ಟ ಸಂಬಳ 40 ರೂಪಾಯಿಗಳಿಗಿಂತ ಹೆಚ್ಚಿಗೆ ಮಾಡುವುದಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತಾರೆ. ಸಾವಿರ ರೂಪಾಯಿಗಳಿಗಿಂತ ಮೇಲ್ಪಟ್ಟು ಸಂಬಳ ಪಡೆಯುವ I.A.S. ಮತ್ತು I.P.S. ಮತ್ತು 13 ಜನರನ್ನು ಮಾತ್ರ ಮುಟ್ಟಬೇಡಿ ಎಂದು ಹೇಳುತ್ತಾರೆ. ಇದು ನಿಜವಾಗಿ ಮಹಾತ್ಮ ಗಾಂಧಿಯವರು ನೀತಿಗನುಗುಣವಾಗಿ ರಾಜ್ಯಭಾರದ ವ್ಯವಸ್ಥೆಯನ್ನು ಮಾಡಿದಂತಾಗುತ್ತದೆಯೇ? ಒಂದು ಸಾವಿರ ರೂಪಾಯಿಗಳ ಸಂಬಳವಿಲ್ಲದಿದ್ದರೆ ಎರಡು ಸಾವಿರ ರೂಪಾಯಿಗಳ ಸಂಬಳ ಮಾಡಿ. ಆದರೆ ಕಡಮೆ ಸಂಬಳಕ್ಕೂ, ಅತ್ಯಧಿಕ ಸಂಬಳಕ್ಕೂ ಹೆಚ್ಚು ಅಂತರವಿರಬಾರದು ಎಂದು ಹೇಳುತ್ತಿದ್ದೇನೆ.

ಶ್ರೀ ಟಿ.ಮರಿಯಪ್ಪ (ಹಣಕಾಸಿನ ಇಲಾಖೆಯ ಮಂತ್ರಿಗಳು):- ಮೊದಲು ಕಮಿಟಿಯವರು 40 ರೂಪಾಯಿಗಳು ಮಿನಿಮಂ ಇರಬೇಕು ಎಂದು ಏನು ಹೇಳಿದ್ದರೋ, ಅದನ್ನು 50 ರೂಪಾಯಿಗಳಿಗೆ ಬದಲಾಯಿಸಿ ಈಗ 1:30 ಪ್ರಮಾಣವಿರುವಂತೆ ಮಾಡಿದ್ದೇವೆ. For the first time in history, we have kept the ratio of 1:30 and this ratio is never entered in the Pay structure on any previous occasion. Therefore, we have broken new ground.

ಶ್ರೀ ಕೆ.ಕೆಂಚಪ್ಪ:- ಈಗ 50 ರೂಪಾಯಿಗಳನ್ನು ಮಿನಿಮಂ ಎಂದು ಮಾಡುವುದರಲ್ಲಿ ಒಂದು ನಿಗದಿಯಾದ ಅಭಿಪ್ರಾಯಕ್ಕೆ ಬರಬೇಕಾಗಿದೆ. ಈ ರೀತಿ ಮಾಡಿರುವುದರಿಂದ ಯಾವ ರೀತಿಯಾದ ಪರಿಸ್ಥಿತಿ ದೇಶದಲ್ಲಿ ಉಂಟಾಗಿದೆ ಎಂಬುದನ್ನು ಆಲೋಚನೆ ಮಾಡಬೇಕಾಗಿದೆ. ಇದರಿಂದ ಒಂದು ದೊಡ್ಡ ಸಮಾಜವನ್ನು ಕಟ್ಟಿದ ಹಾಗಾಯಿತೇ? 50 ರೂಪಾಯಿಗಳು ಮಿನಿಮಂ ಸಂಬಳ ಇರಬೇಕೆಂದು ನಿಗದಿಮಾಡುವುದರ ಮೂಲಕ ನೌಕರರ ಜೀವನ ಕುದುರುತ್ತದೆಯೇ? ಇದು ಒಂದು

ಪಾರ್ಲಿಮೆಂಟರಿ ತತ್ವವೇ? ಇವುಗಳನ್ನು ಆಲೋಚನೆ ಮಾಡಬೇಕು. ಕಮಿಟಿಯ ಶಿಫಾರಸ್ಸಿನಲ್ಲಿ ಒಂದು ತರಹವಿದ್ದರೆ, ತಾವು 50 ರೂಪಾಯಿಗಳಂತೆ ಮಿನಿಮಂ ನಿಗದಿ ಮಾಡಿದರೆ ಅದು ಒಂದು ಧರ್ಮಕ್ಕೆ ಅನುಗುನವಾಗಿದೆಯೇ?

**Sri T.Mariappa:-** The difficulty is this that the report of the old Mysore….

ಶ್ರೀ ಕೆ.ಕೆಂಚಪ್ಪ:- ನಡುವೆ ತಾವು ಮಾತನಾಡಬಾರದು. ಇನ್ನೇನಾದರೂ ನಾನು ಹೇಳಬೇಕೆಂದಿರುವಾಗ, ಅಂಕಿಅಂಶಗಳನ್ನು ಕೊಡುವಾಗ ಅವು incorrect ಎಂದು ತಾವು ಹೇಳಬಹುದು. ಆದ್ದರಿಂದ ನಾನು ಈ ವಿಚಾರದಲ್ಲಿ ಬಹಳ ವ್ಯಸನಪಡಬೇಕಾಗಿದೆ. 1:30 ಪ್ರಮಾಣದಷ್ಟು ಅಂತರ ಸರಿಯಾದುದಲ್ಲ. 1:10 ಪ್ರಮಾಣವಾದರೂ ವ್ಯತ್ಯಾಸ ಇರಬೇಕಾಗಿದೆ. ಇಷ್ಟು ಪ್ರಮಾಣವಿದ್ದರೆಯೇ ಎಷ್ಟೋ ಹೆಚ್ಚುಕಡಮೆ ವ್ಯತ್ಯಾಸ ಬರುತ್ತದೆ.ನಮ್ಮ ಕೈಯಲ್ಲಿಯೇ ಅಧಿಕಾರ ಇದೆಯೆಂದು ಆಡಳಿತಪಕ್ಷದವರು ತಮ್ಮ ಇಷ್ಟಬಂದಹಾಗೆ ಸಂಬಳಗಳನ್ನು ನಿಗಧಿ ಮಾಡುವುದು ಸರಿಯಲ್ಲ. ಅದರಲ್ಲಿ ಒಂದು ನಿಯಮಿರಬೇಕು; ಆ ದೃಷ್ಟಿಯಿಂದ ಇದನ್ನು ನೋಡಬೇಕು. ಬಡ ನೌಕರರ ವಿಚಾರದಲ್ಲಿ ತುಂಬ ಕನಿಕರವಿದೆಯೆಂದು ಭಾಷಣಗಳಲ್ಲಿ ಹೇಳುತ್ತಾರೆಯೇ ಹೊರತು ಅದಕ್ಕೆ ಒಂದು ವ್ಯವಸ್ಥೆಮಾಡುವ ವಿಚಾರದಲ್ಲಿ ಕೈಹಾಕುತ್ತಾಇಲ್ಲ. ಇವರ ಕಷ್ಟಸುಖಗಳನ್ನು ನಾವು ಇನ್ನು ಮುಂದೆ ಸರಿಯಾಗಿ ವಿಚಾರಿಸದೆ ಹೋದರೆ ನಮ್ಮ ಆತ್ಮಕ್ಕೆ ವಿರುದ್ಧವಾಗಿ ನಡೆದಂತೆ ಆಗುತ್ತದೆ. ಅದರಿಂದ ನಮ್ಮ ಕೆಲಸಕಾರ್ಯಗಳಿಗೆ ಧಕ್ಕೆಯುಂಟಾಗುತ್ತದೆ. ಇವತ್ತಿನದಿವಸ ಸರಕಾರಿ ನೌಕರರಲ್ಲಿ ಪ್ರತಿಯೊಬ್ಬರಿಗೂ ಇಷ್ಟು ಕಷ್ಟಗಳು ಬರುವುದಕ್ಕೆ ಅವರಿಗೆ ಸಂದಾಯವಾಗುತ್ತಿರುವ ಕಡಮೆ ಸಂಬಳವೇ ಮುಖ್ಯ ಕಾರಣ. ಅವರ ಸಂಬಳಗಳನ್ನು ಜಾಸ್ತಿಮಾಡದೇ ಹೋದರೆ ಎಫಿಸಿಯನ್ಸಿ ಬರುವುದಿಲ್ಲ, ಪವಿತ್ರತೆ ಬರುವುದಿಲ್ಲ. ಆದರೆ ಸರ್ಕಾರಕ್ಕೂ ಇದನ್ನು ಬಗೆಹರಿಸುವ ವಿಚಾರದಲ್ಲಿ ಕಷ್ಟವಿರಬಹುದು. ಅದು ಅಷ್ಟು ಸುಲಭವಾದ ಕೆಲಸವೆಂದು ನಾನು ಹೇಳುವುದಿಲ್ಲ. ಯಾವುದೇ ಆಗಲಿ, ಒಂದು ತತ್ವದ ರೀತಿಯಲ್ಲಿ ವ್ಯವಸ್ಥೆ ಮಾಡಬೇಕಾದರೆ, ದಕ್ಷತೆಬೇಕು. ನಮ್ಮ ಆಡಳಿತದಲ್ಲಿ ಡೀಸೆಂಟ್ರಲೈಜೇಷನ್ ಇಲ್ಲ. ಪ್ರತಿಯೊಂದು ವಿಚಾರದಲ್ಲೂ ಮಂತ್ರಿಗಳೇ ಕೈಹಾಕುತ್ತಿದ್ದಾರೆ. ನಾನು ತಿಳಿದಿರುವ ಮಟ್ಟಿಗೆ ಹೆಡ್ ಆಫ್ ಡಿಪಾರ್ಟುಮೆಂಟುಗಳಿಗೆ ಸಂಪೂರ್ಣ ಅಧಿಕಾರ ಕೊಡಬೇಕು. ಮಂತ್ರಿಗಳು ತತ್ವಗಳಿಗೆ ಮಾತ್ರ ಕೈಹಾಕಬೇಕು. ಸೆಕ್ರೆಟರಿಗಳೂ ಕೂಡ ತತ್ವ ವಿಚಾರದಲ್ಲಿ ಯಾವೊಂದು ಕೆಲಸಮಾಡುವುದಕ್ಕೂ ಸಾಧ್ಯವಿರಬಾರದು. ಯಾವದೊಂದು ತತ್ವವನ್ನು ಮಂತ್ರಿಗಳು ಇಟ್ಟುಕೊಳ್ಳುತ್ತಾರೋ ಆ ತತ್ವಕ್ಕನುಸಾರವಾಗಿ ಪ್ರತಿಯೊಂದು ಹೆಡ್ ಆಫ್ ಡಿಪಾರ್ಟುಮೆಂಟಿನವರು ನಡೆದುಕೊಂಡು ಹೋಗುವ ಹಾಗೆ ಮಾತ್ರ ಮಾಡಬೇಕು. ಇಲ್ಲದೇಹೋದರೆ ದೇಶದಲ್ಲಿ ರಾಜ್ಯಭಾರ ನಡೆಸುವರನೇಕರಲ್ಲಿ ಅಶಾಂತಿ ಹುಟ್ಟಲಿಕ್ಕೆ ಕಾರಣವಾಗುತ್ತದೆ. ಅದರಿಂದ ನಮ್ಮ ದೇಶದಲ್ಲಿ ತುಂಬ ಅನಾನುಕೂಲತೆಗಳಿಗೆ ಕಾರಣವಾಗಿ ನಾನಾರೀತಿಯಲ್ಲಿರತಕ್ಕ ಆಡಳಿತವರ್ಗದವರಿಗೆ ಬಾಕಿಯವರಂತೆ ಇಲ್ಲಿಯೂ ಏನು ಬೇಕಾದರು ಮಾಡಬಹುದೆಂಬ ಮನಸ್ಸುಂಟಾಗಿ ಸರ್ಕಾರೀ ನೌಕರರಲ್ಲಿ ಬಡತನ

ಇನ್ನೂ ಹೆಚ್ಚು ಹೆಚ್ಚಾಗುತ್ತದೆ. ಇದನ್ನು ಸರ್ಕಾರದವರು ದೀರ್ಘವಾಗಿ ಆಲೋಚನೆ ಮಾಡಬೇಕು. ಎಷ್ಟು ದಕ್ಷತೆಯಿಂದ ಸರ್ಕಾರ ಕೆಲಸ ಮಾಡುತ್ತಿದೆ ಎನ್ನುವ ವಿಚಾರದಲ್ಲಿ ನಿನ್ನೆಯ ದಿವಸ, ಜ್ಯುಡಿಷಿಯಲ್ ಅಡ್ಮಿನಿಸ್ಟ್ರೇಷನ್, ಪೋಲೀಸ್, ವಗೈರೆ ವಿಚಾರವಾಗಿ ಮಾತನಾಡಿದಾಗ ನಮ್ಮ ಮಾನ್ಯ ಮಂತ್ರಿಗಳು ಹೇಳಿದರು. ಅದಕ್ಕೆ ನಾನು ಒಂದು ಪ್ರಶ್ನೆ ಕೇಳುತ್ತಿದ್ದೇನೆ. ದೇಶದ ಸಂಪತ್ತನ್ನು ಹೆಚ್ಚಿಗೆ ಮಾಡುವುದಕ್ಕೋಸ್ಕರ ಸರ್ಕಾರದವರು ಕೋಲಾರದ ಚಿನ್ನದ ಗಣಿಯನ್ನು ರಾಷ್ಟ್ರೀಕರಣ ಮಾಡಿದ್ದಾರೆಂದು ಪತ್ರಿಕೆಗಳಲ್ಲಿ ದಪ್ಪ ದಪ್ಪ ಅಕ್ಷರಗಳಲ್ಲಿ ಪ್ರಕಟವಾದುದು ಎಲ್ಲರಿಗೂ ಗೊತ್ತಿದೆ. ಅದನ್ನು ದೇಶದ ಉತ್ಪಾದನಾ ಕನ್‌ಸರ್ನ್ನಲ್ಲಿ ಬಹುಮುಖ್ಯವಾದುವೆಂದು ಕರೆದು, ಆ ಉತ್ಪಾದನಾ ಕಾರ್ಖಾನೆಯಿಂದ ದೇಶದ ಸಂಪತ್ತನ್ನು ಅಭಿವೃದ್ಧಿಪಡಿಸುವುದು, ಉತ್ಪಾದನಾ ಕಾರ್ಖಾನೆಗಳಿಂಥ ಬರತಕ್ಕ ಉತ್ಪತ್ತಿಯನ್ನು ವಿನಿಯೋಗ ಮಾಡುವುದರ ಮೂಲಕ ಜನಗಳ ಮೇಲೆ ಬೀಳತಕ್ಕ ತೆರಿಗೆಯನ್ನು ಕಡಮೆ ಮಾಡುವುದು ಸರ್ಕಾರದ ಮೂಲ ತತ್ವ, ಅದು ಉತ್ಪಾದನಾ ಕಾರ್ಖಾನೆಗಳ ಸಂಬಂಧದಲ್ಲಿ ಬರತಕ್ಕದ್ದು ಎಂದು ನಾನು ತಮಗೆ ಹೇಳುತ್ತಿದ್ದೇನೆ.

* * * * *

## ಚುನಾವಣಾ ನೀತಿ ಸಂಹಿತೆ

**19 ಜುಲೈ 1957**

ಶ್ರೀ ಕೆ.ಕೆಂಚಪ್ಪ:- ಹೊಸದುರ್ಗಕ್ಕೆ ಚುನಾವಣಾ ಕಾಲದಲ್ಲಿ ತಾವು ಬಂದಿದ್ದಾಗ ಟಿ.ಬಿ.ಬಳಿ ಜಿಲ್ಲಾಧಿಕಾರಿಗಳು 12 ಗಂಟೆ ಸಮಯದಲ್ಲಿ ಬಂದು ನಿಂತಿದ್ದರು. ಆಗ ಅಲ್ಲಿಗೆ ಅವರು ಬರುವುದಕ್ಕೆ ಕಾರಣವೇನು? ಅವರಿಗೆ ಏನು ಕೆಲಸವಿತ್ತು ?

ಶ್ರೀ ಎಸ್.ನಿಜಲಿಂಗಪ್ಪ:- ನಾನು ಮುಖ್ಯಮಂತ್ರಿಯಾಗಿ ಬಂದಿದ್ದೆ.

ಶ್ರೀ ಕೆ.ಕೆಂಚಪ್ಪ:- ಆ ದಿವಸ ಅಲ್ಲಿ ಚುನಾವಣೆ ಇದ್ದುದರಿಂದ ತಾವು ಮುಖ್ಯಮಂತ್ರಿಗಳಾಗಿ ಬಂದಿರಲಿಲ್ಲ.

ಶ್ರೀ ಎಸ್.ನಿಜಲಿಂಗಪ್ಪ:- ಡೆಪ್ಯುಟಿ ಕಮೀಷನರ್ ಸರ್ಕಾರಿ ಕೆಲಸದ ಮೇಲೆ ನನ್ನನ್ನು ನೋಡುವುದಕ್ಕೆ ಬಂದಿದ್ದರೆ, ಅಂಥ ಅವಶ್ಯಕತೆ ಇದ್ದರೆ ಅವರಿಗೆ "ಸ್ವಲ್ಪ ತಾಳಿ, ನಾನು ಕೋಟು ಬದಲಾಯಿಸಿಕೊಂಡು ಮುಖ್ಯಮಂತ್ರಿಯಾಗಿ ಬರುತ್ತೇನೆ." ಎಂದು ಹೇಳುವುದಕ್ಕಾಗುವುದಿಲ್ಲ.

(ಶ್ರೀ ಕೆ.ಕೆಂಚಪ್ಪನವರು ಮಾತನಾಡಲು ಎದ್ದರು)

**Sri S.Nijalingappa:-** Please sit down, ನಾನು ಹಾಗೆ ಹೇಳಿದ್ದಕ್ಕೆ ವಿಷಾದಿಸುತ್ತೇನೆ.

ಶ್ರೀ ಕೆ.ಕೆಂಚಪ್ಪ:- ಆ ರೀತಿ ಹೇಳುವುದು ಸರಿಯೇ?

ಶ್ರೀ ಎಸ್.ನಿಜಲಿಂಗಪ್ಪ:- ಅದು ಸರಿಯಲ್ಲವೆಂದೇ ನಾನು ವಿಷಾದಿಸುತ್ತೇನೆಂದು ಆಗಲೇ ಹೇಳಿದೆ.

## ಕ್ಲಬ್‌ಗಳು: ಸಾಂಸ್ಕೃತಿಕ ಕಾಳಜಿ

22 ನವೆಂಬರ್ 1958

*ಶ್ರೀ ಕೆ.ಕೆಂಚಪ್ಪ (ಹಿರಿಯೂರು):- ಸ್ವಾಮಿ, ಈ ಮಸೂದೆಯನ್ನು ತಯಾರು ಮಾಡುವಾಗ ಇದರಿಂದ ಜನರ ಮೇಲೆ ಆಗತಕ್ಕ ಪರಿಣಾಮವನ್ನು ಸ್ವಲ್ಪವೂ ಆಲೋಚನೆ ಮಾಡಿದ ಹಾಗೆ ಕಾಣುವುದಿಲ್ಲ_

ಶ್ರೀ ಟಿ.ಮರಿಯಪ್ಪ:- ಫಂಡಮೆಂಟಲ್ಸ್‌ಗೆ ಹೋಗುತ್ತಿದ್ದೀರಲ್ಲಾ?

ಶ್ರೀ ಕೆ.ಕೆಂಚಪ್ಪ:- ಅದನ್ನು ನೋಡದೆ ಕಾನೂನು ಮಾಡಿದರೆ ಪ್ರಮಾದವಾಗುತ್ತದೆ.

ಈಗಾಗಲೇ ನಮ್ಮ ರಾಜ್ಯದಲ್ಲಿ ಮೈಸೂರು ಪೋಲಿಸ್ ಆಕ್ಟ್ ಜಾರಿಯಲ್ಲಿದೆ. ಇದರ 4ನೆಯ ಸೆಕ್ಷನ್‌ನಲ್ಲಿ ' Games 'ಎನ್ನುವುದನ್ನು ಡಿಫೈನ್ ಮಾಡಿದ್ದಾರೆ. 3, 64 ಮತ್ತು 66 ನೆಯ ವಿಧಿಗಳಲ್ಲಿ 'Games' ಇಸ್ಪೀಟು ಮುಂತಾದ ಆಟಗಳನ್ನು ಸೇರಿಸಿ gambling ಅಥವ ಜೂಜಾಟವನ್ನು ನಿರೋಧ ಮಾಡಲು ಅವಕಾಶ ಮಾಡಿದೆ. ಇದರ ಜೊತೆಗೆ ಇಂಡಿಯನ್ ಪೀನಲ್ ಕೋಡಿನ 294 ಎ ವಿಧಿಯಲ್ಲಿ ಲಾಟರಿಗಳನ್ನು ಯಾವ ರೀತಿ ನಡೆಸಬೇಕೆಂಬುದಿದೆ. ಹೈದರಾಬಾದ್ ಗ್ಯಾಂಬ್ಲಿಂಗ್ ಆಕ್ಟ್ ಇದೆ, ಅದರಲ್ಲಿ ಜೂಜಾಡುವುದನ್ನು ತಡೆಯುವುದಕ್ಕೆ ವಿಧಿ ಇದೆ. ಅದು ಹೈದರಾಬಾದ್ ಪ್ರಾಂತಕ್ಕೆ ಸೇರಿದ್ದ ಪ್ರದೇಶದಲ್ಲಿ ಜಾರಿಯಲ್ಲಿರಬಹುದು. ಇದಲ್ಲದೆ ಮೈಸೂರು ಗ್ಯಾಂಬ್ಲಿಂಗ್ ಆಕ್ಟ್ ಎಂದಿದೆ; ಇದರಲ್ಲಿ ಕುದುರೆ ಜೂಜಿಗೆ ಸಂಬಂದಪಟ್ಟ ವಿಧಿಗಳಿವೆ. ಸೊಸೈಟಿಗಳ ರಿಜಿಸ್ಟ್ರೇಷನ್ ಕಾನೂನು 1904 ಎಂದಿದೆ. ಇದರ ಪ್ರಕಾರ ಎಲ್ಲ ಅಸೋಸಿಯೇಷನ್‌ಗಳೂ, ಕ್ಲಬ್‌ಗಳೂ ರಿಜಿಸ್ಟರಾಗಬೇಕು. ಲಾಟರಿ, ಜೂಜಾಟ ಮುಂತಾದುವುಗಳನ್ನು ಮಾಡಲು ಕೆಲವು ನಿರ್ಬಂಧಗಳಿವೆ. ಹೀಗೆ ಅನೇಕ ವಿಧಗಳಲ್ಲಿರುವ ಕಾನೂನುಗಳ ಉದ್ದೇಶಗಳನ್ನು ಈಗ ತಂದಿರುವ ಕಾನೂನಿನಿಂದ ಕುದುರಿಸುತ್ತೇವೆಂದರೆ, ಆ ಉದ್ದೇಶಗಳನ್ನು ಉತ್ತಮಪಡಿಸುತ್ತೇವೋ ಅಥವ ಹಾಳು ಮಾಡುತ್ತೇವೋ ಎಂಬುದನ್ನು ಯೋಚನೆ ಮಾಡಬೇಕಾಗಿದೆ. ಸರ್ಕಾರ ಯಾವ ಕಾನೂನು ಮಾಡಬೇಕಾದರೂ ಅದನ್ನು ಮಾಡುವಾಗ ಜನರ ಹಿತಚಿಂತನೆ ಮಾಡಬೇಕು.

ಶ್ರೀ ಟಿ.ಮರಿಯಪ್ಪ:- ಈಗಾಗಲೇ Entertainment Tax Act ಜಾರಿಯಲ್ಲಿದೆ. ಬೇರೆ ಬೇರೆ ಪ್ರದೇಶದಲ್ಲಿರುವುದನ್ನು ಒಂದೇ ರೀತಿ ಮಾಡಬೇಕೆಂದು ಇದನ್ನು ತಂದಿರುವುದು.

ಶ್ರೀ ಕೆ.ಕೆಂಚಪ್ಪ:- ಆದರೂ ಎಲ್ಲವನ್ನು ಸಮೀಕರಣ ಮಾಡುವಾಗ ಈ ಕಾನೂನು ಏನು ಪರಿಣಾಮ ಮಾಡುತ್ತದೆಂಬುದನ್ನು ಯೋಚನೆ ಮಾಡಬೇಕು. ಯಾವುದೇ ಒಂದು ಕಾನೂನು ಮಾಡುವಾಗ ಬರಿಯ ಹಣಕಾಸಿನ ಮಂತ್ರಿಗಳ ದೃಷ್ಟಿಯಿಂದ, ಹಣ ಎಷ್ಟು

ಬರುತ್ತದೆ ಎಂಬುದನ್ನು ಮಾತ್ರ ಯೋಚಿಸಿ ಮಾಡಬಾರದು. ಹಣ ಬರುವುದಕ್ಕೆ ಏನು ಬೇಕಾದರೂ ಮಾಡಬಹುದು ಎಂದರೆ ಏನೂ ಹೇಳುವ ಹಾಗಿಲ್ಲ. ಈಗಿರುವ ಕಾನೂನುಗಳನ್ನು ಇದರಿಂದ ಯಾವ ರೀತಿ overcome ಮಾಡುತ್ತಾರೆ? ಇದರಿಂದ duplication ಆಗುವುದಿಲ್ಲವೇ? ಇದರಿಂದ ಸಮಾಜಕ್ಕೆ ಒಳ್ಳೆಯದಾಗುವುದಕ್ಕೆ ಬದಲು ಹಾನಿಯಾಗುತ್ತದೆ. ಅದರಲ್ಲಿ ಒಳ್ಳೆಯದಾಗುವುದು ಇದರಿಂದ ಹಾಳಾಗುತ್ತದೆ. ಇದು ದೇಶಕ್ಕೆ ಎಷ್ಟು ಹಾನಿಕರ ಎಂಬುದನ್ನು ಸರ್ಕಾರ ಯೋಚನೆ ಮಾಡಿಲ್ಲವೆಮದು ಕಾಣುತ್ತದೆ. ತೆರಿಗೆ ಹಾಕುವ ವಿಷಯದಲ್ಲಿಯೂ ಇದರಲ್ಲಿ ಸ್ಪಷ್ಟವಾಗಿಲ್ಲ. ಕುದುರೆಯ ಜೂಜಿಗೆ ಈಗಾಗಲೇ ತೆರಿಗೆ ಹಾಕುತ್ತಿಲ್ಲವೆ? ಅದರ ಜೊತೆಗೆ ಮತ್ತೆ ಇದರ ಪ್ರಕಾರ ತೆರಿಗೆ ಹಾಕುತ್ತಾರೆಯೇ? Gambling houses, ಎಂದರೆ ಒಂದು ಸ್ಥಳದಲ್ಲಿ ಜೂಜು ನಡೆಯುತ್ತಿದ್ದರೆ ಅದು ತಕ್ಸೀರಾಗುತ್ತದೆ, ಪೋಲೀಸ್ ಆಕ್ಟ್ ಪ್ರಕಾರ "Entertainment includes any exhibition performance, amusement, game, sport or race to which persons are admitted for payment." ಎಂದಿದೆ. ಕೊಡುವ ಟಿಕೆಟ್ಟಿಗೇ ಸ್ಟಾಂಪ್ ಹಚ್ಚುತ್ತಾರೆ. ಅದರ ಜೊತೆಗೆ ಇದನ್ನೂ ಹಾಕುತ್ತಾರೆಯೇ? ಅಲ್ಲದೆ ರಿಜಿಸ್ಟ್ರೇಷನ್ ಆಫ್ ಸೊಸೈಟೀಸ್ ಆಕ್ಟ್ ಪ್ರಕಾರ ಎಷ್ಟೋ ಸಂಘಗಳು ರಿಜಿಸ್ಟರಾಗಿವೆ. ಜೂಜಾಡುವ ಸಂಘಗಳು ಹಳ್ಳಿ ಹಳ್ಳಿಯಲ್ಲಿಯೂ ಇವೆ. ಸಾಹಿತ್ಯಾಭಿವೃದ್ಧಿ ಅಥವ ಇನ್ನಾವುದಾದರೂ philantrhopic ಉದ್ದೇಶದಿಂದ ಸ್ಥಾಪಿತವಾದ ಸಂಘಗಳು ಜೂಜಾಟದ ಸಂಘಗಳಾಗಿವೆ. Entertainment ಎಂದರೇನು? Amusement ಗಾಗಿ ಒಂದು performance ಇಟ್ಟರಾಯಿತು. ಹೀಗೆ overlapping ಆಗುವ ಕಾನೂನು ಮಾಡುವುದರಿಂದ ಉದ್ದೇಶವೇ ಹಾಳಾಗುವುದಿಲ್ಲವೇ? ಒಂದು ಕಡೆ ಜೂಜಾಡಬಾರದೆಂದು ಹೇಳುತ್ತಾರೆ, ಇನ್ನೊಂದು ಕಡೆ, ಸೊಸೈಟಿಯನ್ನು ರಿಜಿಸ್ಟರ್ ಮಾಡಿ ಅಲ್ಲಿ ಏನಾದರೂ ಮಾಡಬಹುದೆಂದು ಹೇಳುತ್ತಾರೆ. ಇದುವರೆಗೆ ರಿಜಿಸ್ಟರ್ ಆಗಿರುವ ಸಂಘಗಳಲ್ಲಿ ಜೂಜು ನಡೆಯುತ್ತಿಲ್ಲವೆ?

ಶ್ರೀ ಟಿ.ಮರಿಯಪ್ಪ:- ಹಾಗೆ ಮಾಡಿದರೆ ಪೋಲೀಸರು ಅಂಥ ಸಂಘಗಳನ್ನು ರೇಯ್‌ಡ್ ಮಾಡಿ, ಶಿಕ್ಷೆ ಮಾಡಬಹುದು. ಕೇಸ್ ಹಾಕಿ ಕೆಲವರಿಗೆ ಶಿಕ್ಷೆಯಾಗಿದೆ.

ಶ್ರೀ ಕೆ.ಕೆಂಚಪ್ಪ:- ಇಲ್ಲಿ 'ಬಹುದು' ಎನ್ನುವ ಮಾತೇ ಇಲ್ಲ, ಬೇರೆ ಅರ್ಥವಾಗುವುದೇ ಇಲ್ಲ. ಈಗ ಎಷ್ಟೋ ಕ್ಲಬ್ಬುಗಳಿವೆ. ಅಲ್ಲಿ ಸಾಹಿತ್ಯಾಭಿವೃದ್ಧಿ ಕಾರ್ಯವೂ ಇಲ್ಲ, ಏನೂ ಇಲ್ಲ, ಇಸ್ಪೀಟ್ ಆಟವಿರುತ್ತದೆ. ಈ ಆಟದಲ್ಲಿ skill ಏನಿದೆ?

ಶ್ರೀ ಟಿ.ಮರಿಯಪ್ಪ:- ಹಾಗಿದ್ದರೆ ಚಿತ್ರದುರ್ಗದ ಕ್ಲಬ್ ಇರಬೇಕೇ ಬೇಡವೇ ಹೇಳಿ?

ಶ್ರೀ ಕೆ.ಕೆಂಚಪ್ಪ:- ಅದು ಇರಬೇಕೇ ಇಲ್ಲವೇ ಎಂಬುದನ್ನು ನಾನು ಮಾತನಾಡುತ್ತಿಲ್ಲ. ಇದುವರೆಗೆ ಯಾವ skill ಅಭಿವೃದ್ಧಿಯಾಗಿದೆ? ಸರ್ಕಾರದಲ್ಲಿ ಈ ಬಗ್ಗೆ ಏನು ವರದಿ

ಇದೆ? ಈ ಕ್ಲಬ್‌ಗಳಲ್ಲಿ ಹೊರಗೆ ಟೆನ್ನಿಸ್ ಆಡುತ್ತಾರೆ ಒಳಗೆ ಕಾರ್ಡ್ಸ್ ಆಡುತ್ತಾರೆ. ಟೆನ್ನಿಸ್‌ನಲ್ಲಿ skill ಇದೆ, ಕಾರ್ಡ್ಸ್ ಜೂಜೆ? ಅಂತೂ ಈ ಆಟ ಹೆಚ್ಚಾಗಿದೆ. ಈ ಕಾನೂನಿನಿಂದ ಇಂಥ ಸಂಘಗಳನ್ನು ರಿಜಿಸ್ಟರ್ ಮಾಡುವುದನ್ನು ತಪ್ಪಿಸುತ್ತಾರೆಯೇ? ಈಗ ಅಮ್ಯೂಸ್‌ಮೆಂಟ್‌ಟ್ಯಾಕ್ಸ್ ವಸೂಲು ಮಾಡಿದರೆ ಸಾಕು. ಅವರು ಇಷ್ಟು ಹಣ ಕೊಡುತ್ತೇವೆಂದರೆ ಆಯಿತು, ಕಾರ್ಡ್ಸ್ ಆಡುತ್ತೇವೆ ಸ್ಕಿಲ್ ತೋರಿಸುತ್ತೇವೆ ಎಂದು ಹೇಳುತ್ತಾರೆ. ಆಡುತ್ತಾರೆ. ಇದನ್ನು ಸರ್ಕಾರದವರು ಹೇಗೆ ತಪ್ಪಿಸುತ್ತಾರೆ? ಈ ವಿಚಾರವನ್ನು ಹೇಗೆ ತಡೆಗಟ್ಟುವುದು? ಒಂದು ಕೈಲಿ ಆಗಬಾರದ ಅನರ್ಥವನ್ನು ತಪ್ಪಿಸಲು ಅವಕಾಶ ಕೊಟ್ಟು ಇನ್ನೊಂದು ಕೈಲಿ ಅದನ್ನು ಕಸಿದುಕೊಂಡಿದ್ದೀರಿ. ಸಿಟಿಗಳಲ್ಲಿ ಎಂಟರ್‌ಟೈನ್ಮೆಂಟ್ ಬೇಕು. ಆದರೆ ಬಡವರ ತೆಗೆದುಕೊಳ್ಳುವ ಅಲ್ಪ ಬೆಲೆ ಟಿಕೆಟ್ಟಿಗೆ ತೆರಿಗೆ ಜಾಸ್ತಿ ಹಾಕಿದೆ. ಎಂಟರ್‌ಟೈನ್‌ಮೆಂಟ್ ಎಂದು ಡಿಫೈನ್ ಮಾಡಿರುವುದು ಸರಿಯಾಗಿ ಅರ್ಥವಾಗುವುದಿಲ್ಲ. ಇದರ ಪರಿಣಾಮವನ್ನು ಆಲೋಚಿಸಿ ಸರಿಯಾಗಿ ವಿವರಣೆ ಕೊಡಬೇಕಾದದ್ದು ಅವಶ್ಯಕ. ಇಲ್ಲದಿದ್ದರೆ ಇಂಟರ್‌ಪ್ರೆಟ್ ಮಾಡುವಾಗ ತೊಂದರೆಯಾಗುತ್ತದೆ. ಎವಿಡೆನ್ಸ್ ಕಾಪಿ ತೆಗೆದುಕೊಂಡರೆ ಸ್ಟ್ಯಾಂಪ್ ಹಚ್ಚಬೇಕೆಂದಿದೆ. ಆದರೆ ನೀವು ಹಚ್ಚಿ ತೆಗೆದುಕೊಂಡಿದ್ದೀರಾ? ತಾವು ಲಾಯರಾದ್ದರಿಂದ ತಮಗೆ ಈ ವಿಚಾರ ಗೊತ್ತಿದೆ. ಆದ್ದರಿಂದ ಕಾನೂನು ಖಚಿತವಾಗಿ ಕಾನೂನಿನಲ್ಲಿ ಹೇಳಬೇಕು. ಮೊದಲು ಎಂಟರ್‌ಟೈನ್‌ಮೆಂಟ್ ಎಂಬುದನ್ನು ಸರಿಯಾಗಿ ಡಿಫೈನ್ ಮಾಡಬೇಕು, ಅದನ್ನು ಬಿಟ್ಟು it includes ಎಂದು ಏನೇನೋ ಹೇಳಿದರೆ ಹೇಗೆ?

ಇನ್ನು ತೆರಿಗೆ ಡಿಮ್ಯಾಂಡ್ ವಿಚಾರದಲ್ಲಿ ಒಂದು ಮಾತು, 50ನಯೇ ಪೈಸೆ ಒಳಗಿರುವ ಟಿಕೆಟ್ಟಿಗೆ ಶೇಕಡ 20 ರಂತೆ ತೆರಿಗೆ ವಿಧಿಸಿ ಟಿಕೆಟ್ ದರ ಹೆಚ್ಚಾದ ಹಾಗೆಲ್ಲಾ ತೆರಿಗೆ ದರ ಕಡಿಮೆಮಾಡಿದ್ದೀರಿ. ಅದು ಪ್ರಪೋರ್ಷನೇಟ್ ಆಗಿಲ್ಲ. ಕಡಮೆ ಬೆಲೆ ಟಿಕೆಟ್ ಕೊಳ್ಳುವವ ಬಡವ. ಅವನಿಗೆ ಹೆಚ್ಚು ಹಾಕಿ ಹೆಚ್ಚು ಬೆಲೆ ಟಿಕೆಟ್ ಕೊಳ್ಳುವವರಿಗೆ ಅದೇ ದಾಮಾಷಾ ಪ್ರಕಾರ ತೆರಿಗೆ ವಿಧಿಸದೆ ಕಡಮೆ ತೆರಿಗೆ ವಿಧಿಸಿದ್ದೀರಿ. ಇದು ಸರಿಯಲ್ಲ. ಕೇವಲ ಕಡಮೆ ದರದ ಟಿಕೆಟ್ಟುಗಳಿಗೆ ಹೆಚ್ಚು ತೆರಿಗೆ ಹಾಕುವುದು ಸರಿಯಲ್ಲ. ಈಗ 1947ನೆಯ ಇಸವಿಯಿಂದ ಸಾವಿರಾರು ತೆರಿಗೆ ವಿಧಿಸಲ್ಪಟ್ಟು ಜನರಿಗೆ ತುಂಬ ಕಷ್ಟ ಬಂದಿದೆ. ಸಂಸಾರಗಳಲ್ಲಿ ತಾಪತ್ರಯವಾಗಿ ಅಮ್ಯೂಸ್‌ಮೆಂಟ್‌ಗಾಗಿ ಸಿನಿಮಾಕ್ಕೆ ಹೋಗುವುದುಂಟು. ಆದ್ದರಿಂದ ಕಡಮೆದರದ ಟಿಕೆಟ್ಟುಗಳಿಗೆ ಕಡಮೆ ತೆರಿಗೆ ವಿಧಿಸಬೇಕಾದದ್ದು ಅವಶ್ಯಕ. ಈಗ ಹಾಕಿರುವ ತೆರಿಗೆ ಪ್ರಪೋರ್ಷನ್ ಖಂಡಿತ ವಿರೋಧಿಸುತ್ತೇನೆ. 24 ಗಂಟೆ ದುಡಿದು ಒಂದು ರೂಪಾಯಿ ಕೂಲಿ ಸಂಪಾದಿಸುವವನು ಒಂದು ರೂಪಾಯಿನ ಮಾಲಿಗೆ 5 ರೂಪಾಯಿ ಕೊಡಬೇಕಾಗಿರುವಾಗ ಪದಾರ್ಥಗಳ ಬೆಲೆ ಏರಿರುವಾಗ ದಯವಿಟ್ಟು ಅವನಿಗೆ ಬೇಕಾಗುವ ಕಡಮೆ ದರದ ಟಿಕೆಟ್ಟಿಗೆ ಹಾಕಿರುವ ತೆರಿಗೆಯನ್ನು ಕಡಮೆ ಮಾಡಬೇಕಾದುದು ಅವಶ್ಯಕ.

* * * * *

## ಮಡಕಶಿರಾ ಕಾಸರಗೋಡು ಮೈಸೂರು ರಾಜ್ಯಕ್ಕೆ

18 ಏಪ್ರಿಲ್ 1959

***Q:- 532. Sri K.Kenchappa:-** Will the Government be pleased to state:-

the steps taken by them to include Madakasira and Kasargod taluks in Mysore State?

**A- Sri B.D.Jatti (Chief Minister):-** Border disputes have to be settled peacefully by mutual agreement between the State Governments concerned. The question of border adjustment is in discussion with the parties concerned, viz., the Chief Minister of Andhra Pradesh and the Chief Minister of Kerala.

ಶ್ರೀ ಕೆ.ಕೆಂಚಪ್ಪ:- ಇಲ್ಲಿ ಕೊಟ್ಟಿರತಕ್ಕ ಉತ್ತರ ಈ ಪ್ರಶ್ನೆಗಲ್ಲ. ನಿಜವಾದ ಉತ್ತರ ಕೊಡುವುದಕ್ಕೆ ನಾಚಿಕೆಯಾಗುತ್ತದೆಯೇ?

ಶ್ರೀ ಬಿ.ಡಿ.ಜತ್ತಿ:- ಕೇಳಲಿಕ್ಕೆ ನಾಚಿಕೆಯಿಲ್ಲದಿರುವಾಗ ಹೇಳಲಿಕ್ಕೆ ನಾಚಿಕೆಯೇನು?

ಶ್ರೀ ಕೆ.ಕೆಂಚಪ್ಪ:- ಕಾನೂನುಬದ್ಧವಾಗಿ ಉತ್ತರ ಕೊಡುವುದನ್ನು ಬಿಟ್ಟು ಇಲ್ಲಿ philosphy ಹೇಳುವುದು ಉತ್ತರವೇ?

ಶ್ರೀ ಬಿ.ಡಿ.ಜತ್ತಿ:- Information ಕೇಳಿದರೆ ಕೊಡುತ್ತೇವೆ. ಇಲ್ಲಿ ಯಾರೂ ಅಧ್ಯಾತ್ಮಿಕ ವಿಚಾರ ಹೇಳುವುದಕ್ಕೆ ಹೊರಟಿಲ್ಲ.

ಶ್ರೀ ಕೆ.ಕೆಂಚಪ್ಪ:- ನಾನು ಕೇಳುವುದು facts ವಿಚಾರ; ಅದನ್ನು ಬಿಟ್ಟು ಹೀಗೆ ಹೇಳಿದರೆ ಅರ್ಥವೇನು?

ಶ್ರೀ ಬಿ.ಡಿ.ಜತ್ತಿ:- ಉತ್ತರ ಹೇಳಿದ್ದು fact ನೀವು ಬೇರೆ ಅರ್ಥ ಮಾಡಿಕೊಂಡರೆ ನಾನೇನು ಮಾಡುವುದು?

* * * * *

# ಲೋಕಸೇವಾ ಆಯೋಗ

**23 ಡಿಸೆಂಬರ್ 1959**

ಶ್ರೀ ಕೆ.ಕೆಂಚಪ್ಪ (ಹಿರಿಯೂರು):- ಮಾನ್ಯ ಅಧ್ಯಕ್ಷರೇ, 1958ನೆಯ ಪಬ್ಲಿಕ್ ಸರ್ವಿಸ್ ಕಮಿಷನ್ (ಕಂಡಕ್ಟ್ ಆಫ್ ಬಿಜಿನೆಸ್ ಅಂಡ್ ಅಡಿಷನಲ್ ಫಂಕ್ಷನ್ಸ್) ಬಿಲ್ ಚರ್ಚಿಸುವ ವಿಚಾರದಲ್ಲಿ ನಮ್ಮ ರಾಜ್ಯಾಂಗದ 321ನೆಯ ಆರ್ಟಿಕಲ್ ಪ್ರಕಾರ ನಮಗೆ ಅಧಿಕಾರ ಇದೆ. ಹೆಚ್ಚುವರಿ ಕೆಲಸಗಳಿಗೋಸ್ಕರ ಎಷ್ಟರಮಟ್ಟಿಗೆ ಈ ಕಾನೂನನ್ನು ಮಾಡಬೇಕು ಎನ್ನುವುದನ್ನು ಬಹಳ ಚೆನ್ನಾಗಿ, ಕೂಲಂಕಷವಾಗಿ ವಿಚಾರ ಮಾಡಬೇಕು. ಈ ಕಾಯಿದೆಯನ್ನು ಮಾಡುವಾಗ ಸರ್ಕಾರಿ ನೌಕರರಿಗೆ ಸಂಬಂಧಪಟ್ಟ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಮಾಡಿದ್ದಾರೆ. ಈ ಬಿಲ್ಲು ಸೆಲೆಕ್ಟು ಕಮಿಟಿಗೆ ಹೋಗುವುದಕ್ಕೆ ಮುಂಚೆ ಅನೇಕ ಮಾನ್ಯ ಸದಸ್ಯರು ತಮ್ಮ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಇದರಲ್ಲಿ ಒಂದು ಮುಖ್ಯವಾದ ಅಭಿಪ್ರಾಯವಿದೆ. ಈ ಬಿಲ್ಲನ್ನು ಮಾಡುವಾಗ ಡೆಲಿಗೇಟೆಡ್ ಪವರ್ ಎಂದರೆ, ಅಧಿಕಾರದ ವ್ಯಾಪ್ತಿಯನ್ನು ಸರಕಾರಕ್ಕೆ ಕೊಟ್ಟು, ಆ ರೀತಿ ಸರಕಾರಕ್ಕೆ ಕೊಟ್ಟಿರುವ ಅಧಿಕಾರವನ್ನು ಎಷ್ಟರಮಟ್ಟಿಗೆ ಸರ್ಕಾರದವರು ಚಲಾಯಿಸಬಹುದು ಎನ್ನುವುದನ್ನು ಈ ಬಿಲ್ಲಿನಲ್ಲಿ ಹೇಳಬೇಕಾಗಿತ್ತು. ಪ್ರತಿಯೊಂದು ಕಲಮಿನಲ್ಲಿಯೂ ಸಹ ಸರಕಾರದವರು ಮಾಡತಕ್ಕಂತಹ ರೂಲುಗಳು ಎಷ್ಟರಮಟ್ಟಿಗೆ ಇರಬೇಕು ಎನ್ನುವ ವಿವರಗಳೆಲ್ಲಾ ಈ ಕಾನೂನಿನಲ್ಲಿ ಇರುವುದು ಅತ್ಯಾವಶ್ಯಕ The fundamentals enunciated in this Bill become resuscitative and the rules under the delegated power become dominant ಇದು ಆಗಬಾರದಾಗಿತ್ತು. ಕಮಿಷನ್ನಿನವರು ಮಾಡತಕ್ಕಂಥ ಕೆಲಸಕಾರ್ಯಗಳ ನಿಯಮಗಳು ಯಾವರೀತಿಯಲ್ಲಿರಬೇಕು ಎನ್ನುವುದರ ಬಗ್ಗೆ ಎರಡನೇ ಮತ್ತು ಮೂರನೇ ಕಲಮುಗಳಲ್ಲಿ "ಅಡಿಷನಲ್ ಫಂಕ್ಷನ್ಸ್" ಎಂದಿದೆ. ನಮ್ಮ ಸರಕಾರದವರು ಸರಕಾರಿ ನೌಕರಿಗಳಿಗೆ ಉಮೇದುವಾರರನ್ನು ತೆಗೆದುಕೊಳ್ಳುವಾಗ ಇದುವರೆಗೆ ಮಾಡಿರುವ ಕಾನೂನುಗಳಲ್ಲಿ ಇರತಕ್ಕ ಲೋಪದೋಷಗಳನ್ನು ತೆಗೆದುಹಾಕಿ ಅವರು ಚೆನ್ನಾಗಿ ಕೆಲಸ ಮಾಡಲು ಏರ್ಪಾಡು ಮಾಡಬೇಕಾಗಿತ್ತು ಅದನ್ನು ಮಾಡಿಲ್ಲ.

16ನೆಯ ಕಲಮಿನಲ್ಲಿ .Conduct of service examination ಎಂದಿದೆ. ಯಾವ ಯಾವ ನೌಕರಿಗಳಿಗೆ ಪರೀಕ್ಷೆಗಳನ್ನು ಮಾಡಬೇಕು ಎನ್ನತಕ್ಕ ಮಾತುಗಳನ್ನು ಇದರಲ್ಲಿ ಹೇಳಬೇಕಾಗಿತ್ತು. ಇದರೊಳಗೆ ಲೋಕಲ್ ಸೆಲ್ಫ್ ಗವರ್ನಮೆಂಟಿನ ಅಪಾಯಿಂಟುಮೆಂಟುಗಳೂ ಬರುತ್ತವೆಯೇ? ಕಾನ್‌ಸ್ಟಿಟ್ಯೂಷನ್ನಿನಲ್ಲಿರುವ ಆರ್ಟಿಕಲ್ 321 ರಲ್ಲಿ Additional functions, ಎಂದು ಹಾಕಿರುವಂತಹ ಕೆಲಸಗಳೇ ಅಥವಾ ಇನ್ನೂ ಹೆಚ್ಚಿಗೆ ಉದ್ದೇಶಗಳನ್ನಿಟ್ಟುಕೊಂಡು ಮಾಡತಕ್ಕ ಕೆಲಸಗಳೇ ಅಥವಾ ಮೈಸೂರಿನಲ್ಲಿರುವ ಎಲ್ಲಾ ಸಂಸ್ಥಾನದ ನೌಕರರಿಗೂ ಸಂಬಂದಪಟ್ಟಂತ ಕೆಲಸಗಳೇ? ಇದನ್ನು ಖಚಿತವಾಗಿ ಹೇಳಬೇಕಾಗಿತ್ತು ಈಗ ಎಷ್ಟೋ ರೂಲ್ಸುಗಳನ್ನು ಮಾಡುತ್ತೇವೆ. ಈ ರೂಲುಗಳನ್ನು ಯಾವುದಾದರೂ ಆಕ್ಟಿನಲ್ಲಿ ಕೊಟ್ಟಿರತಕ್ಕಂತಹ ಅಧಿಕಾರ ವ್ಯಾಪ್ತಿಗೆ ಅನುಸಾರವಾಗಿ ಮಾಡಬೇಕು ಎಂದು ನಿಯಮ ಇದೆ.

On page 7, Clause 18 gives the procedure to be followed by the Commission in advertising posts, inviting applications, scrutinising the same, conducting examinations and selecting candidates to carry out the purposes of Section 17.

Clause 17 refers to the procedure to be followed by the local authority or any other competent authority in respect of methods of recruitment etc., in consultation with the Commission. ಹೀಗೆ ಬರೀ ರೂಲ್ಸ್ ಮಾಡಿದ್ದಾರೆಯೇ ಹೊರತು ಕಾಯಿದೆ ಮಾಡಿಲ್ಲ. 321ನೇ ಆರ್ಟಿಕಲ್ಲಿನ ಪ್ರಕಾರ ಹಿಂದುಳಿದ ವರ್ಗದವರ ಮತ್ತು ಇತರರ ವಿಚಾರದಲ್ಲಿ ಏನು ಅಡಿಷನಲ್ ಫಂಕ್ಷನ್ಸ್ ಕೊಟ್ಟಿರುವುದೇ ಸಾಕಾದಷ್ಟಿವೆ. ಇದರಲ್ಲಿ ಏನಾದರೂ ಲೋಪದೋಷಗಳು ಬಂದರೆ ಅವನ್ನು ಇಲ್ಲಿ ಸರಿಪಡಿಸಬೇಕಾಗಿತ್ತು. ಈ ಸರ್ವಿಸಸ್‌ನಲ್ಲಿ ತುಂಬಾ ಅಸಮಾಧಾನವಿದೆ. ಈ ಅಸಮಾಧಾನವನ್ನು ತೆಗೆದುಹಾಕಬೇಕೆನ್ನುವುದು ಇದರಲ್ಲಿ ಕಂಡು ಬರುವುದೇ ಇಲ್ಲ. ಮುಖ್ಯವಾಗಿ ಇದು ಈ ಕಾನೂನಿನಲ್ಲಿ ಎದ್ದುಕಾಣತಕ್ಕ ಲೋಪ.

Socialistic Pattern of the Society is the aim and object of the Congress organisation ಇದನ್ನು ನಾವೀಗ ಆಲೋಚನೆ ಮಾಡಬೇಕಾಗಿದೆ. ಆರ್ಟಿಕಲ್ 316, 318 ಮತ್ತು 320ರ ಪ್ರಕಾರ ಯಾವಯಾವ ರೀತಿಯಾಗಿ ಸರ್ಕಾರಕ್ಕೆ ಅಧಿಕಾರವಿದೆ ಎನ್ನುವ ಅರಿವೂ ನನಗಿದೆ. ಆರ್ಟಿಕಲ್ 15 ರ ಪ್ರಕಾರ ಜಾತಿ, ಕೋಮು, ಮತ್ತು ಪಂಗಡಗಳಲ್ಲಿ ಯಾವ ಭೇದಭಾವನೆಯನ್ನು ಮಾಡಕೂಡದು ಎಂದಿದೆ. ಇದರ 3ನೇ ಮತ್ತು 4ನೇ ಕ್ಲಾಜಿನಲ್ಲಿ ಹೆಂಗಸರ, ಮಕ್ಕಳ ಮತ್ತು ಇತರರ ವಿಚಾರದಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿ ಕಾನೂನನ್ನು ಮಾಡಬೇಕೆಂದು ಇದೆ.

3ನೇ ಕ್ಲಾಜಿನಲ್ಲಿ ಹೀಗೆ ಹೇಳಿದೆ:

"Nothing in this article shall prevent the State from making any special provision for women and Children."

ಮತ್ತು 4ನೇ ಕ್ಲಾಜಿನಲ್ಲಿ ಹೀಗೆ ಹೇಳಿದೆ:

"Nothing in this article shall prevent the State from making any special provision for the advancement of any socially and educationallly backward classes of citizens or for the Scheduled castes and the Scheduled Tribes."

ಎಂದರೆ, ಸಾಮಾಜಿಕವಾಗಿ ಮತ್ತು ಜ್ಞಾನದಲ್ಲಿ ಹಿಂದುಳಿದಿರತಕ್ಕ ಜನಗಳಿಗೆ ಎಂದು ಅರ್ಥ ಮಾಡಬಹುದು.

**Sri T.Mariappa:-** Not "economically" but "educationally".

**Sri K.Kenchappa:-** Yes, 'educationally', Education need not be interpreted in the terms of Three R's.

**Sri T.Mariappa:-** He is going to compare it with the past when people were not literate...ಸಾಮಾಜಿಕವಗಿ ಜ್ಞಾನ ಸಂಪಾದನೆಯಲ್ಲಿ ಅಥವಾ ವಿದ್ಯಾಭ್ಯಾಸದಲ್ಲಿ ಹಿಂದುಳಿದವರಿಗೆ ಸ್ವಲ್ಪ ವ್ಯತ್ಯಾಸ ಮಾಡಬಹುದೆಂದು ಇದೆ. ಇದರ ವಿಚಾರದಲ್ಲಿ Socially and educationally backward classes_ಎಂದು ಇದೆಯೇ ಹೊರತು .castes ಎಂದು ಇಲ್ಲ. ಹೈಕೋರ್ಟಿನಲ್ಲಿ ಬೇಕಾದಷ್ಟು ಚರ್ಚೆ ನಡೆದು, ಇಷ್ಟೆಲ್ಲ ಆಗಿರುವಾಗ_.

**Sri T.Subramanya:-** I have to interfere once again. The High Court has held that to determine backward classes based upon castes is not wrong.

What- "educationally" means has been interpreted by several High Courts. We have to stick to it.

ಶ್ರೀ ಕೆ.ಕೆಂಚಪ್ಪ:- ಸ್ವಾಮಿ, ಹೈಕೋರ್ಟಿನಲ್ಲಿ ವಾದವಿವಾದಗಳು ನಡೆದಿವೆ ಎಂದು ಹೇಳಿದೆನೇ ಹೊರತು ತೀರ್ಮಾನದ ವಿಚಾರ ಹೇಳಲಿಲ್ಲ. ಆದುದರಿಂದ ನಾವು ಹೇಳುವುದೇನೆಂದರೆ ತುಂಬಾ ವಿವಾದಕ್ಕೆ ಆಸ್ಪದ ಕೊಟ್ಟಿರತಕ್ಕ ಸನ್ನಿವೇಶಗಳಿವೆ. ಈಗ ಯಾವುದೋ ಒಂದು ಜಾತಿಯನ್ನು ತೆಗೆದುಕೊಳ್ಳೋಣ. ಒಕ್ಕಲಿಗರನ್ನೇ ತೆಗೆದುಕೊಂಡರೆ ಎಲ್ಲರೂ backward ಎಂದು ಹೇಳುವುದಕ್ಕಾಗುತ್ತದೆಯೇ? ಅವರಲ್ಲಿ ಬೇಕಾದಷ್ಟು ಜನ ವಿದ್ಯಾವಂತರಿದ್ದಾರೆ, ಸಾಹುಕಾರರಿದ್ದಾರೆ, ಬುದ್ಧಿವಂತರಿದ್ದಾರೆ. class ಎಂದರೆ ಭೇದವಿದೆ. ಒಕ್ಕಲುತನ ಮಾಡುವವನು ಯಾವ ಜಾತಿಯವನೇ ಆಗಲಿ, ಅವನನ್ನು ಹಿಂದುಳಿದವನು ಎಂದು ಕರೆದರೆ ಸರಿಹೋಗುತ್ತದೆಯೋ ಏನೋ, ತಾವು ವಿಚಕ್ಷಣೆಯಿಂದ ಛಿಟಚಿ ವಿಚಾರವಾಗಿ ಆಲೋಚನೆ ಮಾಡುವುದಕ್ಕೆ ಹೊರಟಿಲ್ಲ. ಯಾವುದೋ ಒಂದು ಚಿಡಿ old system ಎಂದರೆ ಪುರಾತನ ಕಾಲದಿಂದ ನಡೆದುಕೊಂಡು ಬಂದಿರುವುದನ್ನು ಹಾಗೆಯೇ ಇಟ್ಟುಕೊಂಡಿದ್ದೀರಿ. ಹಿಂದಿನ ಕಾಲದಲ್ಲಿ ಸೂರ್ಯಚಂದ್ರರಿಗೆ ಗ್ರಹಣ ಹಿಡಿಯುತ್ತದೆಂದು, ಆ ಸಮಯದಲ್ಲಿ ಸಮುದ್ರದಲ್ಲಿ ಅಥವಾ ನದಿಯಲ್ಲಿ ಸ್ನಾನಮಾಡುತ್ತಿದ್ದರು. ಆದರೆ ಈಗ ನಿಜಸ್ಥಿತಿಯನ್ನು ತಿಳಿದುಕೊಂಡು ಇವನ್ನೆಲ್ಲ ಬಿಟ್ಟಿದ್ದೇವೆ. ಹೀಗೆ ಮುಂದುವರಿಯುತ್ತಿರುವ ನಾವು ಈಗಲೂ caste system ಎಂದು ಹೋಗುವುದು ಸರಿಯಲ್ಲ. ಇಂಥಿಂಥ ಕೆಲಸ ಮಾಡುವವರು ಒಕ್ಕಲುತನ ಮಾಡುವವರು, ಇವರೆಲ್ಲ ಹಿಂದುಳಿದವರು ಎಂದು ಮಾಡಬೇಕು. ಅವರು ಯಾರೇ ಆಗಲಿ ಅವರೆಲ್ಲ ಹಿಂದುಳಿದವರು ಎಂಬ ಭಾವನೆಯನ್ನಿಟ್ಟುಕೊಂಡು ಕೆಲಸ ಮಾಡಬೇಕು. ಈ ರೀತಿಮಾಡದೆ, ಹಿಂದಿನದನ್ನೇ ಇಟ್ಟುಕೊಂಡರೆ ಎಷ್ಟು ದಿವಸ ನಡೆಯುತ್ತದೆ? ರಾಜ್ಯಾಂಗದಲ್ಲಿ class ಎಂದು ಇದೆಯೇ ಹೊರತು caste ಎಂದು ಇಲ್ಲ.

-

**Sri G.Venkataih gowda:-** He is making a suggestion to the Government.

**Sri T. Subramanya:-** May I request my hon'ble·friend to speak on the Bill and not about Article 15(4) and the orders that Government might have to issue thereunder?

ಅಧ್ಯಕ್ಷರು:- ಅವರು ಹೇಳುವುದು ನಿಜ. ಮಾನ್ಯ ಸದಸ್ಯರು ಹೇಳುವುದಕ್ಕೂ ಇದಕ್ಕೂ ಏನು ಸಂಬಂಧವಿದೆ. ಏನಾದರೂ ಸಂಬಂಧಿವಿದೆಯೇ ಎಂದು ನೋಡಿದೆ. ನನಗೆ ಸಂಬಂಧವಿದ್ದ ಹಾಗೆ ಕಾಣಲಿಲ್ಲ.

ಶ್ರೀ ಕೆ.ಕೆಂಚಪ್ಪ:- ಸಂಬಂಧವಿಲ್ಲದೆ ಇದ್ದರೆ ನಾನು ವಾಪಸು ತೆಗೆದುಕೊಳ್ಳುತ್ತೇನೆ. ಇಲ್ಲದೆ ಇದ್ದರೆ ಅವರು ವಾಪಸು ತೆಗೆದುಕೊಳ್ಳಬೇಕು. ಆರ್ಟಿಕಲ್.. ರಲ್ಲಿ conditions of service ಮತ್ತು additional functions ವಿಚಾರ ಇರುತ್ತದೆ. ಈ ಕಾನೂನಿನಲ್ಲಿರುವ additional functions ಅನ್ನು ನೋಡೋಣ. ರಾಜ್ಯಾಂಗದಲ್ಲಿ ಒಂದು exception ಕೊಟ್ಟದ್ದನ್ನು ಇದರಲ್ಲಿಯೂ ಇಡುತ್ತೀರಾ? ಇಲ್ಲಿ ನೀಡದೆಹೋದರೆ, ಯಾವ ರೀತಿ ಕೆಲಸಮಾಡುತ್ತೀರಿ. ಯಾವ ರೀತಿ ಅವರನ್ನು ತೆಗೆದುಕೊಳ್ಳುತ್ತೀರಿ, ಯಾವ ರೀತಿ classify ಮಾಡುತ್ತೀರಿ? ನಾನು ಇದನ್ನೆಲ್ಲ ಏಕೆ ಹೇಳುತ್ತಿದ್ದೇನೆಂದರೆ ಆರ್ಟಿಕಲ್ 321 ರಲ್ಲಿ additional functions of the commission ಯಾವ ರೀತಿ ಮಾಡಬೇಕು ಎಂದು ಇದೆ, ತಾವು rule ಮಾಡಬೇಕಾದರೆ directive principles of all the objects must be taken into consideration.

ಅಧ್ಯಕ್ಷರು:-ಈಗ ನಮ್ಮ ಮುಂದೆ ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ fucntion ಏನೇನು ಇರತಕ್ಕದ್ದು ಎಂಬ ವಿಚಾರವಿದೆ.

ಶ್ರೀ ಕೆ.ಕೆಂಚಪ್ಪ:- .ಆ ಬಗ್ಗೆ ರೂಲ್ಸ್ ಮಾಡುವಾಗ ಇವೆಲ್ಲ ಬೇಕಾಗುತ್ತದೆ. ಈ ನಮೂನೆ ಮಾಡದೆ ಹೋದರೆ it offends the constitution....ಕಾನೂನಿನಲ್ಲಿ this is on ommission.

ಶ್ರೀ ಟಿ.ಸುಬ್ರಹ್ಮಣ್ಯ:- ಯಾವುದು...offend ಆಗುತ್ತದೆ?

ಶ್ರೀ ಕೆ.ಕೆಂಚಪ್ಪ:- ಷೆಡ್ಯೂಲ್ ಜಾತಿ ಮತ್ತು ಪಂಗಡಗಳಿಗೆ ರಿಸರ್ವೇಷನ್ ಮಾಡಬೇಕೆಂದಿದೆ...socially and educationally backward communities ಗೆ ಸ್ಪೆಷಲ್ ಆಗಿ ರಿಯಾಯಿತಿ ಕೊಡಬೇಕೆಂದು ಇದೆ. ಈ ಕಾನೂನು ಪ್ರಕಾರ ಅದನ್ನು ಹೇಗೆintroduce ಮಾಡಿದ್ದೀರಿ? ರೂಲ್ಸ್ ಮಾಡುವಾಗ ಅದರಲ್ಲಿ ಅಧಿಕಾರ ಕೊಟ್ಟರೆ, ಹಾಗೆ ಮಾಡಲು ಈ ಮಸೂದೆಯಲ್ಲಿ ಯಾವುದಾದರೂ directive principle ಬೇಕು. ಅದು ಇಲ್ಲದೆ

*   *   *   *   *

# ಜಿಲ್ಲಾ ಬೋರ್ಡುಗಳು

**7 ಮಾರ್ಚ್ 1958**

* ಶ್ರೀ ಕೆ. ಕೆಂಚಪ್ಪ (ಹಿರಿಯೂರು):- ಮಾನ್ಯ ಅಧ್ಯಕ್ಷರೇ, ನಮ್ಮ ಮೈಸೂರ ಸಂಸ್ಥಾನದಲ್ಲಿಯ ಈ ಜಿಲ್ಲಾ ಬೋರ್ಡುಗಳ ವಿಚಾರದಲ್ಲಿ ಸ್ವಲ್ಪ ದುರ್ವಾಸನೆ ಎದ್ದಿದೆಯೆಂದು ಹೇಳಿದರೆ ತಪ್ಪಾಗಲಾರದು. ನಮ್ಮ ಹಳೆಯ ಮೈಸೂರಿನಲ್ಲಿ 1954ನೆಯ ಇಸವಿ ಎಪ್ರಿಲ್ 1ನೆಯ ತಾರೀಖಿನಿಂದ ಜಿಲ್ಲಾಬೋರ್ಡುಗಳಿಗೆ ಚುನಾಯಿತ ಮೆಂಬರುಗಳನ್ನು ತೆಗೆದುಹಾಕಲಾಯಿತು. ಹೋದ ಅಧಿವೇಶನದಲ್ಲಿ ಬೊಂಬಾಯಿ ಪ್ರದೇಶದಲ್ಲಿಯ ಜಿಲ್ಲಾ ಬೋರ್ಡುಗಳ ಅವಧಿಯನ್ನು ಮುಂದುವರಿಸಲಾಯಿತು. ಜಿಲ್ಲಾಬೋರ್ಡು ಆಕ್ಟನ್ನು ಜಾಗ್ರತೆ ತೆಗೆದುಕೊಂಡು ಬನ್ನಿ ಎಂದು ನಾನು ಹೇಳುತ್ತೇನೆ. ಮೈಸೂರು ಸಂಸ್ಥಾನದಲ್ಲಿ ಜಿಲ್ಲಾ ಬೋರ್ಡುಗಳು ಜನೋಪಕಾರಿ ಕೆಲಸ ಮಾಡಿವೆ. ಆ ಕೆಲಸ ಈಗ ಹಾಳಾಗಿ ಹೋಗುತ್ತಿವೆ. ಬಹುಭಾಗದಲ್ಲಿ ರಸ್ತೆಗಳು ಉಪಯೋಗಕ್ಕೆ ಬಾರದಂತೆ ಆಗಿದೆ. ಕೊಡತಕ್ಕ ದುಡ್ಡನ್ನು ಸರಕಾರ ಕೊಟ್ಟಿಲ್ಲ, ಸರಕಾರ ದುಡ್ಡು ಕೊಡದೆ ಜಿಲ್ಲಾ ಬೋರ್ಡುಗಳು ಕೆಲಸ ಮಾಡಲು ಶಕ್ಯವಿಲ್ಲ. ಯಾವ ಒಂದು ರೀತಿಯಿಂದ ಕೆಲಸ ನಡೆಯಬೇಕಾಗಿತ್ತೋ ಆ ರೀತಿ ಕೆಲಸ ನಡೆಯುತ್ತಿಲ್ಲ. ಇಂತಹ ಸಂದರ್ಭದಲ್ಲಿ ಮತ್ತೊಂದು ಕಾನೂನನ್ನು ತೆಗೆದುಕೊಂಡು ಬಂದಿದ್ದೀರಿ. ಕಾನೂನು ಪ್ರಕಾರ ಅವರು ಹೇಳುವ ರೀತಿಯಲ್ಲಿ ಜಿಲ್ಲಾಬೋರ್ಡುಗಳ ಅವಧಿ ಅಕ್ಟೋಬರ್ 1958ಕ್ಕೆ ಮುಗಿಯುತ್ತದೆ. ಜಿಲ್ಲಾಬೋರ್ಡುಗಳಿಗೆ ಚುನಾವಣೆ ನಡೆಸಬೇಕೆಂಬ ವಿಚಾರದಲ್ಲಿ ಸರಕಾರಕ್ಕೆ ಎಳ್ಳಷ್ಟೂ ಇಷ್ಟವಿಲ್ಲವೆಂದು ಕಾಣುತ್ತದೆ. 1953ನೆಯ ಇಸವಿಯ ಬಡ್ಜೆಟ್ ಅಧಿವೇಶನದಲ್ಲಿ ಆಗ್ಗೆ ಮಹಾರಾಜರು ಆಗಿದ್ದವರು ಒಂದು declaration ಕೊಟ್ಟು ಅಕ್ಟೋಬರ್ ತಿಂಗಳ ಆಖೈರಿಗೆ ಜಿಲ್ಲಾ ಬೋರ್ಡುಗಳ ಎಲೆಕ್ಷನ್ ನಡೆಸುತ್ತೇವೆಂದು ಅಸೆಂಬ್ಲಿಯಲ್ಲಿ ಆಶ್ವಾಸನೆ ಕೊಟ್ಟರು. ಆರೀತಿ ಮತ್ತೊಂದು ಕಮಿಟಿಯನ್ನು ಮಾಡಿದರು. ಈಗ ಅಧಿಕಾರ ಬಂದಕೂಡಲೇ ತಾವೇ ಸರ್ವಜ್ಞ ಆಗಿದ್ದೇವೆಂದು ತಿಳಿದುಕೊಳ್ಳುವುದು ಒಂದು ಲೋಕಾರೂಢಿಯಾಗಿರುತ್ತದೆ, ಅದಕ್ಕೋಸ್ಕರ ಇಷ್ಟೆಲ್ಲಾ ಹೇಳಬೇಕಾಗಿದೆ. ದಕ್ಷಿಣ ಕನ್ನಡಲ್ಲಿ ಜಿಲ್ಲಾ ಬೋರ್ಡಿನ ಅವಧಿಯನ್ನು ಮುಂದುವರಿಸುವುದಾದರೂ ಏಕೆ! ಮೈಸೂರು ಸಂಸ್ಥಾನದಲ್ಲಿ ಎರಡು ವರ್ಷಗಳಲ್ಲಿ ಜಿಲ್ಲಾ ಬೋರ್ಡುಗಳ ಒಂದು ಕಾನೂನು ಆಗುವ ಸಂಭವವಿಲ್ಲ ಎಂಬ ಭಾವನೆ ಬರುವಂತೆ ಆಗಿದೆ. ಜಿಲ್ಲಾ ಬೋರ್ಡಿನ ಒಂದು ಕಾನೂನು ಮಾಡಲು ಎರಡು ವರ್ಷ ಅವಧಿ ಬೇಕಾಗುತ್ತದೆಯೋ? ಅಸೆಂಬ್ಲಿ ಪ್ರಾರಂಭವಾದಂದಿನಿಂದ ಎಷ್ಟೋ ಕಾನೂನುಗಳನ್ನು ಈ ಸಭೆಯಲ್ಲಿ ಪಾಸುಮಾಡಲಾಗಿದೆ. ಎಷ್ಟೋ ಹೊಸ ತೆರಿಗೆಗಳನ್ನು ವಿಧಿಸಲಾಗಿದೆ. ಎಲ್ಲರಿಗೂ ಬೇಕಾಗಿರುವ ಜಿಲ್ಲಾಬೋರ್ಡುಗಳ ಆಡಳಿತಕ್ಕೆ ಅನುಕೂಲವಾಗುವ ಒಂದು ಕಾನೂನನ್ನು ಪಾಸುಮಾಡಲು ಶಕ್ತಿಇಲ್ಲವೆಂದರೆ ಏನು? ನನಗೆ ಆಶ್ಚರ್ಯವಾಗುತ್ತದೆ. ಇಲ್ಲಿಯವರೆಗೆ ಜಿಲ್ಲಾಬೋರ್ಡುಗಳಿಗೆ ನಾಮಕರಣಮಾಡಿ ಒಬ್ಬ ಸರಕಾರಿ ನೌಕರನ

ವಶಮಾಡಿಬಿಟ್ಟಿದ್ದೀರಿ. ಆದುದರಿಂದ ಜಿಲ್ಲಾ ಬೋರ್ಡುಗಳ ಕಾನೂನನ್ನು ಜಾಗ್ರತೆ ಈ ಸಭೆಯ ಮುಂದೆ ತರುವುದಕ್ಕೆ ಆಗುವುದಿಲ್ಲ, ಶಕ್ತಿ ಇಲ್ಲ ಎಂದು ಹೇಳುವುದಕ್ಕೆ ಆಗುವುದಿಲ್ಲ. ಮುಂದುವರಿಸುವ ಹವ್ಯಾಸಕ್ಕೆ ಬಿದ್ದಿದ್ದೀರಿ. ಜಿಲ್ಲಾ ಬೋರ್ಡುಗಳು ಮಾಡಬೇಕಾಗಿದ್ದ ರಸ್ತೆ, ಬಾವಿ, ಆಸ್ಪತ್ರೆ ಮುಂತಾದ ಎಲ್ಲಾ ಕೆಲಸಗಳೂ ಅದ್ವಾನವಾಗಿ ದುಡ್ಡು ಖರ್ಚಾಗಿ ಹಾಳಾಗಿಹೋಗುತ್ತಿದೆ. ನಾನು ಈ ಮಸೂದೆಯನ್ನು ವಿರೋಧಿಸುತ್ತಿರುವುದು ಜಿಲ್ಲಾ ಬೋರ್ಡುಗಳಿಗೆ ಚುನಾಯಿತ ಸದಸ್ಯರು ಇರಬಾರದು ಎಂಬ ಉದ್ದೇಶದಿಂದ ಅಲ್ಲ. ಕಾನೂನನ್ನು ಈ ಸಭೆಯ ಮುಂದೆ ತಂದು ಪಾಸು ಮಾಡಿಕೊಂಡು 1958ನೆಯ ಅಕ್ಟೋಬರ್ ಅದರದೊಳಗಾಗಿ ಚುನಾವಣೆಗಳನ್ನು ನಡೆಸಿ ಜಿಲ್ಲಾ ಬೋರ್ಡುಗಳಲ್ಲಿ ಚುನಾಯಿತ ಸದಸ್ಯರು ಕೆಲಸ ಮಾಡುವಂತೆ ಮಾಡಬೇಕೆಂದೂ ಶೀಘ್ರವಾಗಿ ದೇಶಕ್ಕೆ ಕಲ್ಯಾಣವಾಗುವಂತೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ; ಮತ್ತು ಹಾಗೆ ಮಾಡುವರೆಂದು ನಾನು ನಂಬಿದ್ದೇನೆ.

*    *    *    *    *

## ಹರಿಜನರಿಗೆ ಹಣಹಂಚಿಕೆ

**17 ಮಾರ್ಚ್ 1958**

ಶ್ರೀ ಕೆ.ಕೆಂಚಪ್ಪ:– ಮೈಸೂರು ಸಂಸ್ಥಾನಕ್ಕೆ ಮೀಸಲಾಗಿರುವ ದುಡ್ಡಿನಲ್ಲಿ ಪ್ರತಿ ಜಿಲ್ಲೆಯ ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು ಹರಿಜನರಿಗೆ ಹಣವನ್ನು ಹಂಚಿದ್ದೀರಾ?

ಶ್ರೀ ಆರ್.ಚೆನ್ನಿಗರಾಮಯ್ಯ:– ಹಾಗೆಯೇ ಹಂಚಿದ್ದೇವೆ. ಆಯಾ ಜಿಲ್ಲೆಯ ಜನಸಂಖ್ಯೆಯ ಆಧಾರದ ಮೇಲೆ ಜಿಲ್ಲೆಗಳಿಗೆ ಹಂಚುತ್ತೇವೆ. ಪ್ರತಿ ಜಿಲ್ಲೆಯಲ್ಲಿಯೂ ಡೆಪ್ಯುಟಿ ಕಮಿಷನರುಗಳು ತಾಲ್ಲೂಕಿಗೆ ಹಂಚುತ್ತಾರೆ. ತಾಲ್ಲೂಕಿನಲ್ಲಿ ಅಮಲ್ದಾರರು ಅಲ್ಲಿರತಕ್ಕ ವಿಧಾನಸಭಾ ಸದಸ್ಯರನ್ನು consult ಮಾಡಿ ಹಂಚಬೇಕು ಎಂದಿದೆ.

ಶ್ರೀ ಸಿ.ಜೆ.ಮುಕ್ಕಣ್ಣಪ್ಪ:– ವಿಧಾನ ಸಭಾ ಸದಸ್ಯರನ್ನು consult ಮಾಡಿ ಹಂಚಬೇಕು ಎಂದು ಎಲ್ಲರಿಗೂ ಸೂಚನೆ ಕೊಟ್ಟಿದ್ದೀರಾ?

ಶ್ರೀ ಆರ್.ಚೆನ್ನಿಗರಾಮಯ್ಯ:– ಹೌದು. ಆ ರೀತಿ ಒಂದು ಸರ್ಕ್ಯುಲರ್ ಕೊಟ್ಟಿದೆ. ಬಹುಶ: ಷೆಡ್ಯೂಲ್ಡ್ ಪಂಗಡಗಳ ಸದಸ್ಯರನ್ನು ಮಾತ್ರ ಛಿಡ್ಕಿಣ್ಚುಣ ಮಾಡುತ್ತಿದ್ದಾರೆಯೋ ಏನೋ ನನಗೆ ಗೊತ್ತಿಲ್ಲ. ಅದಕ್ಕೋಸ್ಕರವೇ ಈ ಹಣವನ್ನು ಸರಿಯಾಗಿ ಹಂಚಿಕೆಮಾಡಲು ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಒಂದೊಂದು ಕಮಿಟಿಯನ್ನು ಮಾಡಬೇಕೆಂದು ಯೋಚನೆ ಮಾಡುತ್ತಿದ್ದೇವೆ.

ಶ್ರೀ ಕೆ.ಕೆಂಚಪ್ಪ:- ಪ್ರತಿ ಜಿಲ್ಲೆಯು ಹರಿಜನರಿಗೂ ಜನಸಂಖ್ಯೆಯ ಆಧಾರದ ಮೇಲೆ ಹಣವನ್ನು ಹಂಚದೆ ಇದ್ದರೆ ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಏನು ಕ್ರಮ ತೆಗೆದುಕೊಳ್ಳುತ್ತೀರಿ?

ಶ್ರೀ ಆರ್.ಚೆನ್ನಿಗರಾಮಯ್ಯ:- ಮಾನ್ಯ ಸದಸ್ಯರು ಊಹೆಯ ಮೇಲೆ ಹೇಳುತ್ತಿದ್ದಾರೆ. ನಾನು ನನ್ನಲ್ಲಿರುವ ಅಂಕಿ ಸಂಖ್ಯೆಗಳ ಆಧಾರದ ಮೇಲೆ ಹೇಳುತ್ತಿದ್ದೇನೆ. ಸರ್ಕಾರದವರು ಎಲ್ಲ ಜಿಲ್ಲೆಗಳಿಗೂ ಆಯಾ ಜಿಲ್ಲೆಯ ಜನಸಂಖ್ಯೆಯ ಆಧಾರದ ಮೇಲೆ ಹಂಚುತ್ತಾರೆ. ಅದರಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆಗಿರಬಹುದು. ಡೆಪ್ಯುಟಿಕಮಿಷನರು ಪ್ರತಿಯೊಂದು ತಾಲ್ಲೂಕಿಗೂ ಆಯಾ ತಾಲ್ಲೂಕಿನ ಜನಸಂಖ್ಯೆಯ ಆಧಾರದ ಮೇಲೆ ಹಂಚುತ್ತಾರೆ. ತಾಲ್ಲೂಕಿನಲ್ಲಿ ಅಮಲ್ದಾರರು ಹಂಚುತ್ತಾರೆ.

ಶ್ರೀ ಕೆ.ಕೆಂಚಪ್ಪ:- ಪ್ರತಿ ಜಿಲ್ಲೆಗೂ ಅಲ್ಲಿರುವ ಹರಿಜನರ ಸಂಖ್ಯೆಯ ದಾಮಾಷಾ ಪ್ರಕಾರ ಸರ್ಕಾರದವರು ಕೊಟ್ಟಿರತಕ್ಕ ದುಡ್ಡು ಸರಿಯಾಗಿಲ್ಲದೆ ಹೋದೆ..

* * * * *

# ನನ್ನ ತಂದೆ

ನಾನು ಪುಟ್ಟ ಹುಡುಗಿಯಾಗಿದ್ದಾಗ ನನ್ನ ತಂದೆ ನನ್ನ ತುಂಬಾ ಪ್ರೀತಿಯಿಂಧ ಬೆಳೆಸಿದರು. ಅವರ ಇಂಗ್ಲಿಷ್ ಭಾಷೆಯ ಮೇಲಿನ ಹಿಡಿತ ಅಸಾಧಾರಣವಾದದ್ದು. ಅವರಿಗೆ ಜಾತಿಗೀತಿ ಯಾವುದೂ ಇರಲಿಲ್ಲ. ನನ್ನ ಮದುವೆಯನ್ನು ಅವರು ವಿಶೇಷವಾಗಿ ನೆರವೇರಿಸಿದ್ದೇ ಇದಕ್ಕೆ ಸಾಕ್ಷಿ. ಮಂತ್ರಿಗಳಾಗಿದ್ದ ಶ್ರೀ ಕೆ.ಎಚ್. ರಂಗನಾಥರ ತಂದೆ ಹರಿಹರಪ್ಪನವರು ನಮ್ಮ ತಂದೆಯ ಆಪ್ತ ಸ್ನೇಹಿತರು. ಹರಿಹರದಲ್ಲಿ ಅವರಿಬ್ಬರೂ ಒಟ್ಟಿಗೆ ಬಾಲ್ಯ ಕಳೆದವರು. ಕಡು ಬಡತನದಲ್ಲಿ ಹುಟ್ಟಿದ ನನ್ನ ತಂದೆಯ ವಿದ್ಯಾಭ್ಯಾಸ ಮಾಡಿಸಿದವರೇ ಹರಿಹರಪ್ಪನವರು. ಅವರ ಮಗಳ ಹಾಗೂ ನನ್ನ ಮದುವೆಯನ್ನು ಒಂದೇ ಚಪ್ಪರದಡಿ ನೆರವೇರಿಸಿದರು. ಅವರಿಗೆ ಈ ಕುರಿತು ಸಮಾಜದ ಹೆದರಿಕೆಗಿದರಿಕೆ ಇರಲಿಲ್ಲ. ಗಾಂಧೀಜಿಯವರ ಬಗ್ಗೆ ಅವರಿಗೆ ಬಹಳ ಗೌರವ. ಬೇರೆ ರಾಜಕೀಯ ವ್ಯಕ್ತಿಗಳಂತೆ ಅವರು ಆಸ್ತಿ ಪಾಸ್ತಿ ಮಾಡಿ ಶ್ರೀಮಂತರಾಗಲಿಲ್ಲ. ಸ್ವಾತಂತ್ರ್ಯ ಹೋರಾಟ ಮಾಡಿದ್ದು ದೇಶದ ಮೇಲಿನ ಪ್ರೀತಿಯಿಂದಲೇ ಹೊರತು ಯಾವುದೇ ವಯಕ್ತಿಕ ಲಾಭಕ್ಕಲ್ಲ ಎಂದು ಅವರು ಪದೇ ಪದೇ ಹೇಳುತ್ತಿದ್ದರು.

ನಾನು ಚಿಕ್ಕವಳಾಗಿದ್ದಾಗ ನನಗೆ ಸಂಗೀತ ಕಲಿಯುವಂತೆ ಪ್ರೇರೇಪಿಸಿದರು. ನಾನು ಸಂಗೀತದಲ್ಲಿ ವಿದ್ಯುತ್ ಪರೀಕ್ಷೆ ಪಾಸು ಮಾಡಿದೆ. ಹರಿಹರಪ್ಪ ಮತ್ತು ನಮ್ಮ ತಂದೆ ಒಟ್ಟಿಗೆ ಕುಳಿತು ನನ್ನ ಸಂಗೀತವನ್ನು ಕೇಳಿಸಿಕೊಳ್ಳುತ್ತಿದ್ದರು. 'ತಗೋ ತಂಬೂರಿ ಹಾಡು ಮತ್ತೆ' ಅಂತ ಪ್ರೀತಿಯಿಂದ ಪ್ರೋತ್ಸಾಹಿಸುತ್ತಿದ್ದರು.

ಅವರು ಕುಸ್ತಿ ಪಟುವಾಗಿದ್ದರು. ಚಿತ್ರದುರ್ಗದಲ್ಲಿ ಅವರು ಗರಡಿ ಮನೆಯಲ್ಲಿ ಹೇಳಿಕೊಟ್ಟ 'ಪಟ್ಟು'ಗಳು ಇಂದಿಗೂ ಪ್ರಸಿದ್ದ. ಕೆಂಚಪ್ಪನವರ ಪಟ್ಟು ಅಂತಲೇ ಈಗಲೂ ಕರೆಯುತ್ತಾರೆ.

ಹೊಲಗದ್ದೆಗಳಲ್ಲಿ ಕೆಲಸ ಮಾಡುವುದೇಂದರೆ ಬಹುಪ್ರೀತಿ. ಸ್ವತಃ ಗುದ್ದಲಿ ಹಿಡಿದು ಅಗೆಯುತ್ತಿದ್ದರು. ನೀರು ಸೇದಿ ಗಿಡಗಳಿಗೆ ಹಾಕುತ್ತಿದ್ದರು. ತುಂಬಾ ಶ್ರಮಜೀವಿ ನಮ್ಮ ತಂದೆ. ಎಮ್ಮೆ ಹಸುಗಳ ಮೈ ತೊಳೆಯುವುದೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ ಉತ್ಸಾಹ. ಕೋರ್ಟು ಕೆಲಸ ಮುಗಿಸಿ ಮನೆಗೆ ಬರುತ್ತಿದ್ದಂತೆ ಅವರು ಈ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಸೊಪ್ಪು ತರಕಾರಿ ಬೆಳೆಯುವುದರಲ್ಲಿ ಸಿದ್ಧಹಸ್ತರಾಗಿದ್ದರು. ನನ್ನ ತಂದೆ ಅಪ್ಪಟ ದೇಶಭಕ್ತರಾಗಿದ್ದರು. ಸದಾ ಅವರು ದೇಶದ ಜನರ ಬಗ್ಗೆ ಚಿಂತಿಸುತ್ತಿದ್ದರು. ತಮ್ಮ ಇಳಿ ವಯಸ್ಸಿನಲ್ಲಿ ದೇಶದಲ್ಲಿ ಆಗುತ್ತಿದ್ದ ನೈತಿಕ ಅವಘಡಗಳಿಂದ ತುಂಬಾ ಬೇಸರ ವ್ಯಕ್ತಪಡಿಸುತ್ತಿದ್ದರು. ಹೀಗಿದ್ದ ನನ್ನ ತಂದೆ ಅಪರಂಜಿಯಂಥವರು.

- ಶ್ರೀಮತಿ ಸುಮತಿ.

# ಮಗ ಜ್ಞಾನಪ್ರಕಾಶ್ ದೃಷ್ಟಿಯಲ್ಲಿ

"ಸ್ವಾತಂತ್ರ್ಯ ಹೋರಾಟಗಾರರಾಗಿ ನೀವೇಕೆ ಸ್ವಾತಂತ್ರ್ಯ ಯೋಧರ ಪಿಂಚಣಿ ತಗೊಳ್ಳಲಿಲ್ಲ" ಅಂತ ನಾನು ಅವರನ್ನೊಮ್ಮೆ ಕೇಳಿದ್ದೆ. ಅದಕ್ಕೆ ಅವರು ನಾವು ದೇಶಕ್ಕಾಗಿ, ಅದರ ಸ್ವಾತಂತ್ರ್ಯಕ್ಕಾಗಿ ಹೋರಾಡಿದೆವೇ ಹೊರತು ಕೂಲಿ ಮಾಡಲಿಲ್ಲ. ದೇಶಕ್ಕಾಗಿ ಹೋರಾಡುವುದು ಕೂಲಿ ಕೆಲಸವಲ್ಲ. ಅದು ಹೃದಯಾಂತರಾಳದಿಂದ ಚಿಮ್ಮಿ ಬಂದ ಪ್ರೇಮ. ನಾವು ಹುಟ್ಟಿದ ದೇಶವನ್ನು ನಾವೇ ಪ್ರೀತಿಸದಿದ್ದರೆ ಅದೊಂದು ಅವಮಾನ ಎಂದೇ ಭಾವಿಸಬೇಕು.

ಹೀಗೆ ನನ್ನ ತಂದೆ ದೇಶವನ್ನು ಪ್ರೀತಿಸುತ್ತಿದ್ದರು. ಮತ್ತೊಮ್ಮೆ ಕೇಳಿದ್ದೆ 'ಅಲ್ಲಾ ಜನರೆಲ್ಲ ಆರಾಮಿರುತ್ತಾರೆ. ನೀವೇಕೆ ಹೀಗೆ ಚಿಂತೆ ಹೊತ್ತಂತಿರುತ್ತೀರಿ' 'ಎಂದು ಸಾಮಾನ್ಯ ಜನ ತಮ್ಮ ಬಗ್ಗೆ ಮಾತ್ರ ಆಲೋಚಿಸುತ್ತಾರೆ. ಅವರ ಮೇಲೆ ಅಷ್ಟೊಂದು ಹೊರೆ ಇರುವುದಿಲ್ಲ. ಆದರೆ ಜನಸೇವೆ ಮಾಡುವ ಮನಸ್ಸುಳ್ಳವರು ಇಡೀ ದೇಶದ ಚಿಂತಯನ್ನೆ ಹೊತ್ತಿರುತ್ತಾರೆ. ಅದಕ್ಕೆ ನಾನು ಯಾವಾಗಲೂ ಚಿಂತಾಕ್ರಾಂತನಾಗಿರುತ್ತೇನೆ' ಎಂದು ಹೇಳಿದ್ದರು.

ನನಗೆ ಇಂಥವರ ಮಗ ಎಂದು ಹೇಳಿಕೊಳ್ಳುವುದಕ್ಕೆ ಹೆಮ್ಮೆ ಎನಿಸುತ್ತದೆ. ನನ್ನನ್ನು ಅವರೆಂದೂ ನಿರ್ಬಂಧದಿಂದ ಬೆಳೆಸಲಿಲ್ಲ. ಎಂದೂ ಕಟ್ಟುಪಾಡುಗಳನ್ನು ಹಾಕಲಿಲ್ಲ. ನಾನು ನನ್ನ ಬದುಕಿನಲ್ಲಿ ಹಾದಿತಪ್ಪಿದಾಗಲೂ ಅವರು ನನ್ನ ಮೇಲಿನ ಪ್ರೀತಿಯನ್ನು ಕಳೆದುಕೊಳ್ಳಲಿಲ್ಲ. ನಾನು ಸುಮಾರಾಗಿ ಕಟ್ಟಿಸಿದ ಹೊಸಮನೆಯಲ್ಲಿ ಅವರೆಂದೂ ವಾಸಮಾಡಲಿಲ್ಲ. ತಾವೇ ಕಟ್ಟಿ ಕೊಂಡಿದ್ದ ಗುಡಿಸಿಲಿನಂಥ ಮನೆಯಲ್ಲಿ ಕೊನೆಯುಸಿರಿರುವ ತನಕ ಬಾಳಿದರು.

ಅವರು ಯಾರನ್ನೂ ಅವಮಾನಿಸುವಂತೆ ನಡೆದುಕೊಳ್ಳುತ್ತಿರಲಿಲ್ಲ. ಯಾರನ್ನೂ ಅವಹೇಳನ ಮಾಡುತ್ತಿರಲಿಲ್ಲ. ಒಮ್ಮೆ ಏನಾಯಿತು ಅಂದರೆ ಶ್ರೀ ನಿಜಲಿಂಗಪ್ಪನವರು ಚುನಾವಣೆಯಲ್ಲಿ ಸೋತುಬಿಟ್ಟಿದ್ದರು. ರಾಜಕೀಯವಾಗಿ ನನ್ನ ತಂದೆ ನಿಜಲಿಂಗಪ್ಪನವರನ್ನು ಒಪ್ಪುತ್ತಿರಲಿಲ್ಲ. ಅವರ ತತ್ವಸಿದ್ಧಾಂತಗಳೇ ಬೇರೆ ಇವರವೇ ಬೇರೆ. ಅವರು ಸೋತಾಗ ನಾನು ನನ್ನ ತಂದೆಯ ಬಳಿ 'ಅವರು ಸೋತದ್ದು ನಿಮಗೆ ಸಂತೋಷವಾಗಿರಬೇಕಲ್ಲವೆ' ಎಂದೆ. ಅವರು ಸಿಟ್ಟು ತಂದುಕೊಂಡು ಹೇಳಿದರು. 'ದೊಡ್ಡವರ ಬಗ್ಗೆ ಹಾಗೆಲ್ಲ ಹಗುರವಾಗಿ ಮಾತನಾಡಬಾರದು. ನಿನ್ನ ಬದುಕೇ ಹಾದಿ ತಪ್ಪಿ ದಿಕ್ಕಾಪಾಲಾಗಿ ಓಡುತ್ತಿದೆ. ಅಂಥದರಲ್ಲಿ ಅವರ ಬಗ್ಗೆ ಮಾತಾಡುವ ಹಕ್ಕು ನಿನಗಿಲ್ಲ. ನಿನ್ನ ಬದುಕನ್ನು ಮೊದಲು ಸರಿಮಾಡಿಕೋ' ಎಂದು ಬಿಟ್ಟರು.

ತುಂಬಾ ಕಾಳಜಿಯಿದ್ದ ನನ್ನ ತಂದೆ ಸರಳತೆಯನ್ನು ಒಗ್ಗಿಸಿಕೊಂಡಿದ್ದರು. ಒಮ್ಮೆ ಹೊಲದ ದಾರಿಯಲ್ಲಿ ಬರುತ್ತಿರುವಾಗ ಸಗಣಿ ಬಿದ್ದಿದ್ದು ನೋಡಿ ಅದನ್ನು ಎತ್ತಿ ಯಾರದ್ದೋ ಹೊಲದೊಳಗೆ ಎಸೆದರು. ಅವರ ಹೊಲಕ್ಕೇಕೆ ಎಸೆದಿರಿ ಅವರ ಹೊಲ ಫಲಭರಿತವಾಗುತ್ತೆ ಎಂದೆ. ಅಯ್ಯೋ ಯಾರದ್ದಾದರೂ ಆಗಲಿ ಅದೂ ಭೂಮಿ ಅಲ್ಲವೆ, ಅಲ್ಲಿ ಸಮೃದ್ಧವಾಗಿ ಬೆಳೆದಿದ್ದು ಈ ದೇಶಕ್ಕೆ ಸೇರುತ್ತಲ್ಲವೆ? ಎಂದರು. ಅಷ್ಟೊಂದು ವಿಶಾಲ ಹೃದಯ ನನ್ನ ತಂದೆಯದು.

ಜಾತಿಯನ್ನು ಅವರೆಂದೂ ಒಪ್ಪಿರಲಿಲ್ಲ. ಶ್ರೀ ಕೆ.ಎಚ್. ರಂಗನಾಥ್ ಅವರು ಅವರ ತಂದೆ ಹರಿಹರಪ್ಪನವರು, ಡಾ|| ತಿಪ್ಪೇಸ್ವಾಮಿ (ಕಣ್ಣಿನ ತಜ್ಞರು) ಎಲ್ಲರೂ ಹರಿಜನರು. ನಾವಂತೂ ಚಿಕ್ಕಂದಿನಲ್ಲಿ ಶ್ರೀ ಕೆ.ಎಚ್. ರಂಗನಾಥರ ಮನೆಯಲ್ಲೇ ಬೆಳೆದೆವು. ಈಗಲೂ ನನ್ನ ತಂದೆಯ ಕಾಲದ ಸ್ನೇಹ ಬಾಂಧವ್ಯ ಉಳಿದುಕೊಂಡೇ ಬಂದಿದೆ.

ಪ್ರಾಣಿಗಳ ಬಗ್ಗೆ ವಿಶೇಷ ಪ್ರೀತಿ. ಅವುಗಳನ್ನು ಹಿಂಸಿಸುವುದು ಅವರಿಗೆ ಸೇರುತ್ತಿರಲಿಲ್ಲ. ನಾನು ನಾಯಿ ಮರಿ ಬೇಕೆಂದು ಕೇಳಿದರೆ ಯಾರದೋ ಮರಿನಾಯಿಗಳನ್ನು ತೋರಿಸಿ ಅವು ದೊಡ್ಡವಾದ ಮೇಲೆ ತೆಗೆದುಕೊಂಡು ಹೋಗೋಣ ಈಗ ಬೇಡ ಎಂದು ದಿನ ತಳ್ಳುತ್ತಿದ್ದರು. ಆದರೆ ಎಮ್ಮೆ ಹಸುಗಳೆಂದರೆ ಅವರಿಗೆ ಎಲ್ಲಿಲ್ಲದ ಆಸ್ಥೆ, ಹಸುಗಳ ಅಪರೂಪದ ತಳಿಗಳನ್ನು ಪೋಷಿಸಬೇಕೆಂದು ಅವರು ಯಾವಾಗಲೂ ಹೇಳುತ್ತಿದ್ದರು.

ವಿರೋಧ ಪಕ್ಷದ ನಾಯಕರಾಗಿ ಅವರು ಹೇಗೆ ಕರ್ತವ್ಯನಿರ್ವಹಿಸಿದರು ಎಂಬುದೆಲ್ಲಾ ನಮಗಾಗ ತಿಳಿಯುತ್ತಿರಲಿಲ್ಲ. ಆದರೆ ನಾನು ದೊಡ್ಡವನಾದ ಮೇಲೆ ನನ್ನ ತಂದೆ ರಾಜಕೀಯದಿಂದ ದೂರ ಉಳಿದಿದ್ದರು. ನಮ್ಮ ಹೊಲದಲ್ಲಿ ಆಳಿನಂತೆ ಕೆಲಸ ಮಾಡುತ್ತಿದ್ದರು. ಹಾಗೆ ಮಾಡುವುದನ್ನು ನನಗೂ ಕಲಿಸಿದರು.

– ಜ್ಞಾನ ಪ್ರಕಾಶ್.

* * * * *

ಅರಸು ವಿಚಾರ, ಸಿರಿಯ ಶೃಂಗಾರ ಸ್ಥಿರವಲ್ಲ ಮಾನವಾ
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು, ನೋಡಾ
ಒಬ್ಬ ಜಂಗಮದಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು
ಸಂದಿತ್ತು, ಕೂಡಲ ಸಂಗಮದೇವಾ, ನಿಮ್ಮ ಕವಳಿಗೆಗೆ

– ಬಸವಣ್ಣ

ಹೊನ್ನು ಮಾಯಯೆಂಬರು,.ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬುರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ

- ಅಲ್ಲಮಪ್ರಭು



ಇಳಿವಯಸ್ಸಿನಲ್ಲಿ ಕೆಂಚಪ್ಪನವರು



ಕೆಂಚಪ್ಪನವರ ಒಂದು ಆಕರ್ಷಕ ಭಂಗಿ



ಹಿರಿಯ ಮಗಳು ಶ್ರೀಮತಿ ಸುಮತಿ ಅವರೊಂದಿಗೆ ಕೆಂಚಪ್ಪನವರು



ಸ್ನೇಹಿತರೊಂದಿಗೆ ಶ್ರೀ ಕೆಂಚಪ್ಪ



ಕೆಂಚಪ್ಪನವರ ಅಂತರಂಗದ ಗೆಳೆಯರೂ ಪೋಷಕರೂ
ಆಗಿದ್ದ ಹರಿಹರಪ್ಪನವರು



ಕುಸ್ತಿ ವಸ್ತಾದ್ ಬಟಾಠೆ ಸತ್ತಾರ್‌ಸಾಹೇಬ್



ದಿ. ಸಾಹುಕಾರ್ ಸಿದ್ದೋಜಿರಾವ್



ಕೆಂಚಪ್ಪನವರ ಪತ್ನಿ ದಿ॥ ದೇವಮ್ಮನವರು,
ಮಕ್ಕಳು ಮತ್ತು ಮೊಮ್ಮಕ್ಕಳೊಡನೆ



ಕೆ. ಕೆಂಚಪ್ಪನವರ ಮೆಚ್ಚಿನ ಶಿಷ್ಯರೊಲ್ಲಬ್ಬರಾದ ಕೆ.ಎಚ್. ರಂಗನಾಥ್



ಕಾರ್ಯನಿರತ ಕೆಂಚಪ್ಪನವರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ಪಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ|| ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ|| ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ|| ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ|| ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ|| ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ|| ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಷ್ಟ್ರ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |

ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು. ಕಾ.ಸೂ.ಸಂ. 5324 D.P.A.L./D.T.P./C-6